ಶ್ರೀ

॥ ಧನ್ವಂತರಯೆನಮಃ ॥



ನಿಖಿಲ ಕರ್ಣಾಟದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ

ಆಯುರ್ವೇದಸಮ್ಮೇಳನಗಳ ಮತ್ತು ವಸ್ತುಪ್ರದರ್ಶನದ

## ಸ್ವಾಗತಸಮಿತಿಯ

# ವರದಿ

(ತಾ॥ ೨೮, ೨೯ ಮತ್ತು ೩೦ ನೇ ಡಿಸೆಂಬರ್ ೧೯೪೧)





ಸ್ವಾಗತಸಮಿತಿಯಿಂದ ಪ್ರಕಟಿಸಲ್ಪಟ್ಟಿತು.

ಮೈಸೂರು

1942

೧೯೪೧ನೆ ಡಿಸೆಂಬರಿನಲ್ಲಿ ಮೈಸೂರು ರಾಜಧಾನಿಯಲ್ಲಿ ನೆರವೇರಿದ

ನಿಖಿಲ ಕರ್ಣಾಟಕದ ಹನ್ನೆರಡನೆಯ

ಮತ್ತು

ಮೈಸೂರು ಸಂಸ್ಥಾನದ ಒಂದನೆಯ

# ಆಯುರ್ವೇದ ಸಮ್ಮೇಳನಗಳ ಮತ್ತು ವಸ್ತುಪ್ರದರ್ಶನದ

# ವರದಿ

(ತಾ|| ೨೮, ೨೯ ಮತ್ತು ೩೦ ನೇ ಡಿಸೆಂಬರ್ ೧೯೪೧)

ಸ್ವಾಗತಸಮಿತಿಯಿಂದ ಪ್ರಕಟಿಸಲ್ಪಟ್ಟಿತು.

ಮೈಸೂರು

1942

# ವಿಜ್ಞಾಪನೆ

ಈಗ್ಗೆ ಕೆಲವು ತಿಂಗಳ ಹಿಂದೆಯೇ ಪ್ರಕಟವಾಗಬೇಕಾಗಿದ್ದ ಈ ವರದಿಯು ಇಷ್ಟು ನಿಧಾನವಾಗಿ ಹೊರಬಿದ್ದುದಕ್ಕಾಗಿ ಸ್ವಾಗತ ಸಮಿತಿಯು ವಿಷಾದಿಸುತ್ತದೆ. ಸಮ್ಮೇಳನಕ್ಕಾಗಿ ಸಹಾಯಮಾಡಲು ಮುಂಜೂರಾಗಿದ್ದ ಕೆಲವು ಡಿ|| ಬೋರ್ಡುಗಳ ಹಣವು ಕಡೆಯದಾಗಿ ತಾ|| 30–6–1942 ರಲ್ಲಿ ಜಮಾ ಆಯಿತಾದ್ದರಿಂದ ಸ್ವಾಗತ ಸಮಿತಿಯ ಜಮಾ ಖರ್ಚುಗಳನ್ನು ಮುಗಿಸಲಾಗದಿದ್ದುದೇ ಈ ರೀತಿಯ ನಿಧಾನಕ್ಕೆ ಮುಖ್ಯ ಕಾರಣವಾಯಿತು.

ಅಲ್ಲದೆ ಪ್ರಿಂಟು ಮಾಡಿಸುವ ವಿಚಾರವೂ ಬಹು ತೊಂದರೆಯನ್ನು ಕೊಟ್ಟಿತು. ಬೇಕಾದ ಕಾಗದವೇ ಸಿಕ್ಕದು. ಅಪರೂಪಕ್ಕೆ ಸಿಕ್ಕುವುದಾದರೂ ಮಿತಿಮೀರಿದ ಬೆಲೆ. ಪ್ರಿಂಟಿನ ಸಾಮಾನುಗಳೂ ಹಾಗೆಯೇ. ಅಂತು ಇಂತು ಪ್ರಿಂಟಿನ ಕೆಲಸ ವನ್ನು ಪೂರೈಸಲಾಯಿತು. ಈ ಕಾರಣಗಳಿಂದ ತದ್ವಿದ್ಯಾಸಂಭಾಷಾ ಪರಿಷತ್ತುಗ ಳಲ್ಲಿ ನಡೆದ ಇತರ ಭಾಷಣಗಳ ಅಥವಾ ಅಂಗೀಕರಿಸಲ್ಪಟ್ಟ ಪ್ರಬಂಧಗಳ ಪೈಕಿ ಪ್ರಥಮಶ್ರೇಣಿಯವನ್ನು ಮಾತ್ರವೇ ಪ್ರಿಂಟುಮಾಡಿಸಿ ಈ ವರದಿಯಲ್ಲಿ ಸೇರಿಸಲು ಸಾಧ್ಯವಾಯಿತು.

ಈ ಪ್ರಿಂಟಿನ ಅನಾನುಕೂಲದಿಂದಲೆ ಬೇರೆ ಬೇರೆ ಭಾಷಣಗಳನ್ನು ಪ್ರತ್ಯೇಕ ಪ್ರತ್ಯೇಕ ಪುಟ ಸಂಖ್ಯೆಯಲ್ಲಿ ಮುದ್ರಿಸಿ ಸಮ್ಮೇಳನ ಸಮಯಕ್ಕೆ ಹಂಚಿ, ಅವುಗ ಳ್ಳೇ ಈ ವರದಿಗೂ ಮಿಗಿಸಿಡಲಾಯಿತು. ಆದ್ದರಿಂದಲೇ ಈ ವರದಿಯಲ್ಲಿ ಅವುಗಳಿ ಗೆಲ್ಲಾ ಕ್ರಮವಾದ ಪುಟ ಸಂಖ್ಯೆಯು ಬೀಳಲು ಆಗಲಿಲ್ಲ.

ಆದರೂ ಕಾರ್ಯಕ್ರಮದ ಪಟ್ಟಿಯಂತೆ ಆಯಾ ದಿನದಲ್ಲಿ ನಡೆದ ಭಾಷಣಗ ಳನ್ನೆಲ್ಲಾ ಒಟ್ಟೊಟ್ಟಿಗೆ ಸೇರಿಸಿರುವುದರಿಂದ ಈ ಲೋಪವು ಸಾಧ್ಯವಾದಮಟ್ಟಿಗೂ ನಿವಾರಣೆ ಯಾದೀತೆಂದು ನಂಬಬಹುದಾಗಿದೆ.

ಬಹು ಸಹನೆಯಿಂದಲೂ ವಿಚಕ್ಷಣೆಯಿಂದಲೂ ಈ ನಮ್ಮ ವರದಿಯ ಮತ್ತು ಈ ಸಮ್ಮೇಳನಕ್ಕೆ ಸಂಬಂಧಪಟ್ಟ ಇತರ ಎಲ್ಲಾ ಮುದ್ರಣದ ಕಾರ್ಯಗಳನ್ನೂ ಮಾಡಿಸಿ ಪೂರೈಸಿಕೊಟ್ಟ ಶ್ರೀ ಪಂಚಾಚಾರ್ಯ ಪ್ರೆಸ್ಸಿನ ಮಾಲೀಕರಿಗೆ ನಮ್ಮ ಅನಂತ ಧನ್ಯವಾದಗಳು.

ಮೈಸೂರು,
ತಾ 12–7–1942.

ವೈ. ಲಕ್ಷ್ಮೀನರಸಿಂಹಶಾಸ್ತ್ರೀ
ಜನರಲ್ ಸೆಕ್ರಿಟೆರಿ.

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ

ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—೧೯೪೧



ಮೈಸೂರು ಸಂಸ್ಥಾನದ ಆಳುವ ಮಹಾಸ್ವಾಮಿಯವರಾದ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರು.**

## ವಿಷಯಾನುಕ್ರಮಣಿಕೆ.

**1941 ನೇ ಇಸವಿ ಡಿಸೆಂಬರ್ ತಿಂಗಳ 28, 29, & 30 ನೇ ತಾರೀಖುಗಳಲ್ಲಿ ಮೈಸೂರಲ್ಲಿ ನಡೆದ 12 ನೇ ನಿಖಿಲ ಕರ್ಣಾಟಕದ ಮತ್ತು 1 ನೇ ಮೈಸೂರು ಸಂಸ್ಥಾನದ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನದ**

# ಕಾರ್ಯದ ವರದಿ.

---

ಮೈಸೂರಲ್ಲಿರುವ ವೈದ್ಯಸಂಘದ ಪರವಾಗಿ 12ನೇ ನಿಖಿಲಕರ್ಣಾಟಕಾಯುರ್ವೇದ ಸಮ್ಮೇಳನವನ್ನು ಆಹ್ವಾನಿಸಿ ಅದರ ಜೊತೆಯಲ್ಲೆ ಮೈಸೂರು ಸಂಸ್ಥಾನದ ಪ್ರಥಮ ವೈದ್ಯಸಮ್ಮೇಳನವನ್ನೂ ಜರುಗಿಸತಕ್ಕದ್ದೆಂತ ಈಗ್ಯೆ ಒಂದೆರಡು ವರ್ಷಗಳಿಂದಲೂ ಆಲೋಚನೆಯಿದ್ದಿತು. ಈ ಸಂಘದ ಕೋಲಾರಜಿಲ್ಲೆಯ ಪ್ರಾಂತಿಕ ಶಾಖೆಯ ಪರವಾಗಿ ಶ್ರೀಮಾನ್ ಪಂ|| ತತ್ವವಾದಿ ಚಿಕ್ಕಸುಬ್ಬಣ್ಣಾಚಾರ್‍ಯರು (ನಂದಿ), ಪಂ|| ಲಕ್ಷ್ಮೀನರಸಪ್ಪನವರು (ಚಿಕ್ಕಬಳ್ಳಾಪುರ) ಮುಂತಾದ ಕೆಲವು ಪ್ರಮುಖ ವೈದ್ಯರೂ ಈ ಸಮ್ಮೇಳನವನ್ನು ಕೋಲಾರದ ಜಿಲ್ಲೆಯ ನಂದಿಗ್ರಾಮದಲ್ಲಿ ಜರುಗಿಸತಕ್ಕದ್ದೆಂದು ಆಲೋಚಿಸಿ ತಕ್ಕ ಪ್ರಯತ್ನಗಳನ್ನು ಕೈಗೊಳ್ಳುವ ಸಲುವಾಗಿ ವೈದ್ಯಸಂಘದ ಅಧ್ಯಕ್ಷರೊಂದಿಗೆ ಕೋಲಾರದ ಕೆಲವು ಮುಖ್ಯ ಸ್ಥಳಗಳಲ್ಲಿ ಸಂಚರಿಸಿ ಡಿ|| ಬೋರ್ಡ್ ಅಧ್ಯಕ್ಷರ ಸಹಾನುಭೂತಿಯನ್ನು ಗಳಿಸಿದರು. ಆದರೆ ಸಮ್ಮೇಳನವು ನಡೆಯಬೇಕಾಗಿದ್ದ ಕಾಲವು ಅತಿ ಸಮೀಪವಾಗಿದ್ದುದರಿಂದಲೂ, ಇತರ ಕೆಲವು ತೊಡಕುಗಳಿಂದಲೂ ಈ ಸಮ್ಮೇಳನಗಳನ್ನು ಸಧ್ಯಕ್ಕೆ ನಂದಿಯಲ್ಲಿ ನಡೆಸುವುದು ಸಾಧ್ಯವಾಗಲಾರದೆಂದು ನಿಶ್ಚಯಿಸಿ, ಅವುಗಳನ್ನು ಮೈಸೂರಲ್ಲೇ ಜರುಗಿಸತಕ್ಕದ್ದೆಂದು ಮೈಸೂರು ವೈದ್ಯಸಂಘದವರು ತಮ್ಮ ಜನರಲ್ ಮೀಟಿಂಗಿನಲ್ಲಿ ತೀರ್ಮಾನಿಸಿ, 1941ನೇ ಡಿಸೆಂಬರು ತಿಂಗಳ ಕೊನೆಯ ವಾರದಲ್ಲಿ ನಡೆಸುವಂತೆ ನಿಖಿಲಕರ್ಣಾಟಕಾಯುರ್ವೇದಮಂಡಳಿಯ ಅಧ್ಯಕ್ಷರಿಗೆ ಆಹ್ವಾನಕೊಟ್ಟರು.

ಈ ಮಧ್ಯೆ ಅದೇ ಕಾಲದಲ್ಲಿಯೇ ಬಿಜಾಪುರದ ವೈದ್ಯಮಹಾಶಯರೂ ಮಾನ್ಯಗೃಹಸ್ಥರೂ ಶ್ರೀ ಆದ್ಯಅನಂತಾಚಾರ್‍ಯರವರ ನೇತೃತ್ವದಲ್ಲಿ ಸಭೆಸೇರಿ ಸದರಿ ನಿಖಿಲಕರ್ಣಾಟಕಾಯುರ್ವೇದ ಸಮ್ಮೇಳನವನ್ನು ಬಿಜಾಪುರದಲ್ಲಿ ನಡೆಯಿಸತಕ್ಕದ್ದೆಂದು ನಿಶ್ಚಯಿಸಿ ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ನಂತರ ನಮ್ಮ ಕೋರಿಕೆಯನ್ನು ಅವರಿಗೆ ತಿಳಿಸಲಾಗಿ ಅವರುಗಳು ಅದಕ್ಕೆ ಮನ್ನಣೆಕೊಟ್ಟು ತಮ್ಮ ಆಹ್ವಾನವನ್ನು ವಾಪಸ್ ತೆಗೆದುಕೊಂಡು ನಮಗೆ ಅವಕಾಶಮಾಡಿಕೊಟ್ಟರು. ಅದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿದ್ದೇವೆ.

ಇಷ್ಟು ನಿರ್ಧರಕ್ಕೆ ಬರುವ ಹೊತ್ತಿಗೆ ಸೆಪ್ಟಂಬರ್ ತಿಂಗಳು ಮುಗಿಯುತ್ತ ಬಂದಿತ್ತು. ಇನ್ನುಳಿದ 3 ತಿಂಗಳೊಳಗಾಗಿ ಈ ಮಹತ್ಪ್ರಯತ್ನಕ್ಕೆ ಕೈಹಾಕಿ ಸಾಧಿಸುವುದು—ಅದೂ ಈ ಆರ್ಥಿಕ ದುಸ್ಥಿತಿಯ ಮತ್ತು ಅಶಾಂತತೆಯ ಕಾಲದಲ್ಲಿ—ತುಂಬಾ ಕಷ್ಟತರವಾದುದೆಂದು ಹಿಂದು ಮುಂದು ನೋಡುತ್ತಿರುವಲ್ಲಿ ಕೆಲವು ಉತ್ಸಾಹಿ ಮಾನ್ಯ ಗೃಹಸ್ಥರೂ, ಪ್ರಭಾವಶಾಲಿಗಳೂ ಕಾರ್ಯಪಟುಗಳೂ ಆದ ಕೆಲವು ವೈದ್ಯರೂ ಉತ್ತೇಜನ ಕೊಟ್ಟದ್ದರಿಂದ ಈ ಪಟ್ಟಣದಲ್ಲಿ ಒಂದು ಸುಪ್ರಾತಿನಿಧ್ಯವುಳ್ಳ ಸ್ವಾಗತ ಸಮಿತಿಯನ್ನು ರಚಿಸಲಾಯಿತು.

ರಿಟೈರ್ಡ್ ಎಕ್ಸೈಜ್ ಕಮಿಷನರ್ ಶ್ರೀಮಾನ್ ಅಂಬ್ಲೆ ಸುಬ್ರಹ್ಮಣ್ಯ ಅಯ್ಯರ್, ಬಿ.ಎ. ಯವರು ಸ್ವಾಗತಸಮಿತಿಯ ಅಧ್ಯಕ್ಷತೆಯನ್ನೂ, ಶ್ರೀಮಾನ್ ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳವರು ಜನರಲ್ ಸೆಕ್ರಿಟೆರಿ ಕೆಲಸವನ್ನೂ ವಹಿಸಿದ್ದರಿಂದ ಕಾರ್ಯಸಿದ್ಧಿಯಲ್ಲಿ ಭರವಸೆಯುಂಟಾಯಿತು.

ಕಾರ್ಯಾರಂಭಕ್ಕೆ ದಿಕ್ಕುತೋಚದೆ ರಿಕ್ತಹಸ್ತರಾಗಿದ್ದ ಕಾಲದಲ್ಲಿ ಸ್ವಾಗತ ಸಮಿತಿಯ ಪ್ರಾರ್ಥನೆಯ ಫಲವಾಗಿ, ನಮ್ಮನ್ನಾಳುವ ಮಹಾಪ್ರಭುಗಳಿಂದ ಬಂದ ಉದಾರವಾದ ಧನಸಹಾಯವು ನಮ್ಮನ್ನು ಕಾರ್ಯರಂಗಕ್ಕೆ ಇಳಿಸಿತು. ನಂತರ ಸಂಸ್ಥಾನದ ಸರ್ಕಾರಕ್ಕೂ, ಡಿಸ್ಟ್ರಿಕ್ಟ್‌ಬೋರ್ಡ್‌ಗಳು, ಮ್ಯುನಿಸಿಪಾಲಿಟಿಗಳು, ಕೋ-ಆಪರೇಟಿವ್ ಸಂಸ್ಥೆಗಳು ಮತ್ತು ಪ್ರಮುಖ ಮಠಾಧಿಪತಿಗಳು ಇವರುಗಳಿಗೆ ಸಹಾಯಕ್ಕಾಗಿ ಪ್ರಾರ್ಥನಾಪತ್ರಿಕೆಗಳನ್ನು ಕಳಿಸಲಾಯಿತು. ಮಿಕ್ಕ ನಾಗರಿಕರ ಪೈಕಿ ಕೇವಲ ಮೈಸೂರುಪಟ್ಟಣ ಮತ್ತು ಮೈಸೂರು ಡಿಸ್ಟ್ರಿಕ್ಟ್‌ನವರನ್ನು ಮಾತ್ರವೇ ಸಹಾಯಕ್ಕೆ ಕೋರತಕ್ಕದೆಂದು ನಿಶ್ಚಯಿಸಲಾಯಿತು (ಈ ಆಹ್ವಾನವು ಕೇವಲ ಮೈಸೂರುಜಿಲ್ಲೆಯವರದೆಂದು ಪರಿಗಣಿಸಿ). ಕಾಲಸ್ಥಿತಿಯನ್ನನುಸರಿಸಿ ಖರ್ಚು ವೆಚ್ಚಗಳನ್ನು ಬಹು ಮಿತವಾಗಿ ಮಾಡತಕ್ಕದ್ದೆಂತಲೂ, ಆದಷ್ಟುಮಟ್ಟಿಗೂ ಮಹಾಜನಗಳಿಗೆ ಹೆಚ್ಚು ಶ್ರಮ ಕೊಡಬಾರದೆಂದೂ ನಮ್ಮ ಸಂಕಲ್ಪವಾಗಿತ್ತು. ಅದನ್ನೇ ಸಾಧ್ಯವಾದಮಟ್ಟಿಗೂ ಆಚರಣೆಗೆ ತಂದೆವು. ಮೊದಮೊದಲು ನಮ್ಮ ಆರ್ಥಿಕಸ್ಥಿತಿಯ ವಿಚಾರವಾಗಿ ಬಹು ಕಳವಳ ಪಟ್ಟಿದ್ದೆವು. ಆದರೂ ಶ್ರೀಧನ್ವಂತರಿಯ ಅನುಗ್ರಹದಿಂದ ನಮಗೆ ಪ್ರೋತ್ಸಾಹವು ದೊರೆಯುತ್ತಬಂದಿತು. ಮೈಸೂರು ಸರ್ಕಾರದಿಂದಲೂ, ಮೈಸೂರು, ಬೆಂಗಳೂರು, ಕೋಲಾರ ಮುಂತಾದ ಕೆಲವು ಡಿ|| ಬೋರ್ಡುಗಳಿಂದಲೂ, ಮೈಸೂರು, ಬೆಂಗಳೂರು ಮುಂತಾದ ಕೆಲವು ಮ್ಯುನಿಸಿಪಾಲಿಟಿಗಳಿಂದಲೂ, ಕೆಲವು ಕೋ-ಆಪರೇಟಿವ್ ಸೊಸೈಟಿಗಳಿಂದಲೂ, ಕೆಲವು ಶ್ರೀಮಠಗಳಿಂದಲೂ ಧನಸಹಾಯದ

ವಾಗ್ದಾನಗಳು ಬಂದವು. ಪಟ್ಟಣದ ಪ್ರಮುಖ ವೈದ್ಯರೂ, ಧನಿಕರೂ ತಮ್ಮ ತಮ್ಮ ಉತ್ಸಾಹಕ್ಕೂ ಅಭಿಮಾನಕ್ಕೂ ಅನುಗುಣವಾದ ಸಹಾಯಹಸ್ತವನ್ನು ನೀಡಿದರು. ಕಾಲವು ಸುಗಮವಾಗಿದ್ದಿದ್ದರೆ ಇದರ ದಶಾಧಿಕವಾದ ಸಹಾಯವು ದೊರೆಯುವ ಭರವಸೆಯಿತ್ತು. ಯತ್ನವಿಲ್ಲ. ಆದರೂ, ಈ ಮಾದರಿಯ ಸಂಸ್ಥಾನದ ಅಂತಸ್ತಿಗೆ ತಕ್ಕಂತೆ ಸಮ್ಮೇಳನವನ್ನು ಜರುಗಿಸಲು ಶಕ್ತರಾಗಲಿಲ್ಲವೆಂದು ನಾವು ಒಪ್ಪಿಕೊಂಡರೂ, ನಮ್ಮ ವೆಚ್ಚಗಳನ್ನು ಬಹು ಮಿತಿಯಾಗಿಟ್ಟುಕೊಂಡದ್ದರಿಂದ ನಮಗೆ ನಿರಾಯಾಸವಾಗಿ ದೊರೆತ ಧನದಿಂದಲೇ ಸಮ್ಮೇಳನಗಳನ್ನು ಯಥಾಶಕ್ತಿ ಸಾಂಗವಾಗಿ ಜರುಗಿಸಲು ಅವಕಾಶ ದೊರೆಯಿತೆಂದು ಸಂತೋಷದಿಂದ ಹೇಳಬಹುದಾಗಿದೆ.

ಕಾರ್ಯನಿರ್ವಾಹಕ್ಕಾಗಿ ಪ್ರಾರಂಭದಲ್ಲಿ ಕೆಲಕೆಲವು ದೊಡ್ಡ ಮನುಷ್ಯರುಗಳನ್ನು ಕೆಲಕೆಲವು ಕಾರ್ಯಭಾಗಗಳಿಗಾಗಿ ಪ್ರಾರ್ಥನೆಮಾಡಿಕೊಂಡೆವು. ಆದರೆ ಆ ಪೈಕಿ ಕೆಲವರಿಗೆ ಅದರಂತೆ ಸಹಾಯ ಮಾಡಲು ಅನುಕೂಲಿಸದಿದ್ದುದರಿಂದ ಸಮ್ಮೇಳನ ನಡೆಯುವ ಮುನ್ನ ಜರುಗಿದ (ತಾ|| 21-12-41) ಸ್ವಾಗತ ಸಮಿತಿಯ ಮೀಟಿಂಗಿನಲ್ಲಿ ಆಯಾ ಶಾಖಾಕಾರ್ಯಕರ್ತೃಗಳನ್ನು ಪುನಃ ನಿರ್ಧರಿಸಿ ಅವರವರಿಗೆ ಆ ಕಾರ್ಯಭಾರಗಳನ್ನು ವಹಿಸಲಾಯಿತು. ಈ ಮಹಾಶಯರುಗಳು ಮನಃಪೂರ್ವಕವಾಗಿ ಮಾಡಿದ ಸಂಘಸೇವೆಗಾಗಿ ಈ ಸ್ವಾಗತ ಸಮಿತಿಯವರು ಚಿರಋಣಿಗಳಾಗಿರುತ್ತಾರೆ. ಇವರ ಜೊತೆಗೆ ಮೊದಲೇ ಕಾರ್ಯದಲ್ಲಿ ನಿರತರಾಗಿದ್ದ ನಂದಿಯ ಪಂ|| ಚಿಕ್ಕಸುಬ್ಬಣ್ಣಾಚಾರ್ಯರು ತಮ್ಮ ದೇಹದ ಅಸ್ವಸ್ಥತೆಯನ್ನೂ ಲೆಕ್ಕಿಸದೆ ತಮ್ಮ ಸ್ವಂತಖರ್ಚಿನಿಂದಲೇ ಕೋಲಾರ ಮತ್ತು ಬೆಂಗಳೂರು ಜಿಲ್ಲೆಯ ಪ್ರಾಂತಗಳಲ್ಲಿ ಪ್ರಚಾರ ಕಾರ್ಯಗಳನ್ನು ನಡಿಸಿದ್ದಾಗಿಯೂ, ಅದಕ್ಕಾಗಿ ಪ್ರಯತ್ನಪಟ್ಟು ಸರಕಾರಿ ಅಧಿಕಾರಿಗಳ ಸಹಕಾರಗಳನ್ನು ಸಂಪಾದಿಸಿ ಕೆಲಸಮಾಡಿದ್ದಾಗಿಯೂ ಅವರಿಂದ ಬಂದಿರುವ ವರದಿಯು ಸ್ತುತ್ಯವಾಗಿದೆ. ಅದರಂತೆಯೇ ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾ|| ಕೆಂಗಾಕಿ ಪಂ|| ಶ್ರೀಕಂಠಯ್ಯನವರೂ ಸಹ ಮೈಸೂರು ಜಿಲ್ಲೆಯ ಅನೇಕ ತಾಲ್ಲೂಕುಗಳಲ್ಲಿ ತಮ್ಮ ಸ್ವಂತ ಖರ್ಚಿನಿಂದಲೇ ಪ್ರಚಾರ ಕಾರ್ಯವನ್ನುನಡೆಸಿ ಸಮ್ಮೇಳನಕ್ಕೆ ತುಂಬಾ ನೆರವಾದರೆಂಬ ಬಗ್ಗೆ ಬಂದಿರುವ ವರದಿಯೂ ಸ್ತೋತ್ರಾರ್ಹವಾಗಿದೆ.

**ಆರ್ಥಿಕಶಾಖೆಗೆ**—ಅಧ್ಯಕ್ಷರಾಗಿ ಶ್ರೀ ಧನಕೋಟಿಶೆಟ್ಟರೂ, ಕಾರ್ಯನಿರ್ವಾಹಕರಾಗಿ ಶ್ರೀ ಗೋಪಾಲಕೃಷ್ಣಾವಧಾನಿಗಳೂ ಮತ್ತು ಶ್ರೀ ಎಸ್. ಎ. ಪಂಡಿತರೂ, ಸಹಾಯಕರಾಗಿ ಶ್ರೀ ಕೆ. ಪಿ. ಪುರಾಣಿಕರು, ಶ್ರೀ ಎಮ್. ಜಿ. ಶಿಂಗ್ರಯ್ಯಂಗಾರ್ಯರು, ಶ್ರೀ ಪಂ|| ರಾಮಶಾಸ್ತ್ರಿಗಳು, ಪಂ|| ಆರ್. ನರಸಿಂಹಮೂರ್ತಿಯವರು, ಪಂ||

ಕೆ. ಜಿ. ರಾಮಭದ್ರರವರು, ಪಂ|| ಲಕ್ಷ್ಮೀನಾರಾಯಣಶಾಸ್ತ್ರಿಗಳು, ಪಂ. ವಿ. ಗೋಪಾಲರಾಯರವರು, ಇವರುಗಳು ಧನಸಂಗ್ರಹದಲ್ಲಿ ಪೂರ್ಣ ಶ್ರಮವಹಿಸಿದರು.

**ಉಪಚಾರ ಶಾಖೆಗೆ**—ಅಧ್ಯಕ್ಷರಾಗಿ ಶ್ರೀ ಎಂ. ಜಿ. ಶಿಂಗ್ರಯ್ಯಂಗಾರ್ಯರವರೂ, ಕಾರ್ಯನಿರ್ವಾಹಕರಾಗಿ ಶ್ರೀ ಪಂ|| ಎ. ನರಸಿಂಹಯ್ಯನವರೂ, ಸಹಾಯಕರಾಗಿ ಪಂ|| ಕೆ. ಚನ್ನಕೇಶವ ಶಾಸ್ತ್ರಿಗಳು, ಶ್ರೀ ಎಂ. ಆರ್. ವೆಂಕಟರಾಮ ಪಂಡಿತರೂ ಶ್ರೀ ವೈ. ಸುಬ್ಬಣ್ಣನವರು, ಶ್ರೀ ರಾಮಜೋಯಿಸರು ಇವರುಗಳೂ ಬಹುಮುತು ವರ್ಜಿವಹಿಸಿ ಕಾರ್ಯನಿರ್ವಾಹ ಮಾಡಿದರು.

**ವಸತಿ ಮತ್ತು ಸಭಾನಿರ್ವಾಹ ಸಮಿತಿಗೆ**—ಶ್ರೀ ಕೆ. ಪಿ. ಪುರಾಣೀಕರು ಅಧ್ಯಕ್ಷರಾಗಿಯೂ ಶ್ರೀ ಪಂ|| ಲಕ್ಷ್ಮೀನಾರಾಯಣಶಾಸ್ತ್ರಿಗಳು ಕಾರ್ಯನಿರ್ವಾಹಕರಾಗಿಯೂ, ಮೆಡಿಕಲ್‌ಕಾಲೇಜ್ ವಿದ್ಯಾರ್ಥಿ ಶ್ರೀ ಬ್ರಹ್ಮಣ್ಯತೀರ್ಥಯವರೂ, ಕೆಲವು ವಿದ್ಯಾರ್ಥಿಗಳೂ, ಸಹಾಯಕರಾಗಿಯೂ ದಿಟ್ಟತನದಿಂದ ಕೆಲಸವನ್ನು ನಡೆಸಿದರು.

**ಪ್ರದರ್ಶನ ಶಾಖೆಗೆ**—ಶ್ರೀ ಎ. ನಾಗೇಶರಾವ್ ಎಂ.ಎ. ರವರು ಅಧ್ಯಕ್ಷರಾಗಿಯೂ, ಪಂ. ಎಂ. ಎಸ್. ನಾಗೇಶರಾವ್‌ರವರು ಕಾರ್ಯನಿರ್ವಾಹಕರಾಗಿಯೂ, ಪಂ. ಅಶ್ವತ್ಥನಾರಾಯಣ, ಪಂ. ಕೆ. ಜಿ. ರಾಮಭದ್ರ ಇವರುಗಳು ಸಹಾಯಕರಾಗಿಯೂ ನಿಂತು ಆ ಶಾಖೆಯನ್ನು ಆದರ್ಶವಾದುದನ್ನಾಗಿ ಮಾಡಿದರು. ನಂದಿಯ ಪಂಡಿತರಾದ ಶ್ರೀ|| ಟಿ. ಸಿ. ಸುಬ್ಬಣ್ಣಾಚಾರ್ಯರು ಈ ಶಾಖೆಯಲ್ಲಿ ಹೆಚ್ಚು ಶ್ರಮವಹಿಸಿ ಮೂಲಿಕಾ ವಿವರಣಮಾಡಿ ಎಲ್ಲರಿಗೂ ಸಂತೋಷಪಡಿಸಿದರು.

**ಪ್ರಬಂಧಶಾಖೆಗೆ**—ಶ್ರೀ|| ಪಂ. ವಿ. ಬಿಳಿಗಿರಿಅಯ್ಯಂಗಾರ್ಯರು ಅಧ್ಯಕ್ಷರಾಗಿಯೂ, ಪಂ. ಕೆ. ಚನ್ನಕೇಶವಶಾಸ್ತ್ರಿಗಳು ಕಾರ್ಯನಿರ್ವಾಹಕರಾಗಿಯೂ ಇದ್ದು ಶ್ರೀ|| ಎ. ಎಲ್. ಭಟ್ಟಾಚಾರ್ಯರು, ಶ್ರೀ|| ಗೋಪಾಲಕೃಷ್ಣಾವಧಾನಿಗಳು ಇವರುಗಳ ಸಹಾಯದಿಂದ ಪ್ರಬಂಧಗಳ ವ್ಯವಸ್ಥೆಯನ್ನು ನಡೆಸಿದರು.

**ಸರ್ವಸಾಮಾನ್ಯವಿಚಾರಗಳ ಶಾಖೆಗೆ**—ಶ್ರೀಮಾನ್ ಕೆ. ಶ್ರೀಪಾದಾಚಾರ್ ಎಂ. ಎ. ರವರು ಅಧ್ಯಕ್ಷರಾಗಿಯೂ, ಶ್ರೀ|| ಬಿ. ಎಸ್. ರಾಮಕೃಷ್ಣಯ್ಯನವರು ಕಾರ್ಯನಿರ್ವಾಹಕರಾಗಿಯೂ ಇದ್ದು ಶ್ರೀ|| ಬಿ. ಸುಬ್ರಹ್ಮಣ್ಯಯ್ಯನವರು, ಶ್ರೀ|| ವೆಂಕಟಸುಬ್ಬರಾಯರು, ಶ್ರೀ ಸುಂದರೇಶ್ವರನ್ ಮತ್ತು ಆಯುರ್ವೇದಿಕ್‌ಕಾಲೇಜಿನ ಕೆಲವು ವಿದ್ಯಾರ್ಥಿಗಳೂ ಮತ್ತು ಸ್ಕೌಟುಗಳು ಇವರುಗಳ ಸಹಾಯದಿಂದ ತುಂಬಾ ಶ್ರಮವಹಿಸಿ, ಅತಿಥಿಗಳಿಗೆ ಬೇಕಾಗುತ್ತಿದ್ದ ಎಲ್ಲ ಸೌಕರ್ಯಗಳನ್ನೂ ಯಥಾಶಕ್ತಿ ಒದಗಿಸುವುದರಲ್ಲಿ ಅವಿಶ್ರಾಂತರಾಗಿ ಕೆಲಸಮಾಡಿದರು,

ಅಥಿತಿಗಳ ಉಪಯೋಗಕ್ಕಾಗಿ ಏರ್ಪಟ್ಟಿದ್ದ ರೀಡಿಂಗ್ ರೂಂ, ಧೋಬಿಶಾಲೆ, ಆಯುಷ್ಕರ್ಮಶಾಲೆ, ಪೋಸ್ಟಾಫೀಸು, ಪೋಲಿಸ್‌ಸಿಬ್ಬಂದಿ, ಆರೋಗ್ಯರಕ್ಷಣಾ ವ್ಯವಸ್ಥೆಗಳು, ನೀರು, ದೀಪ, ಉಸ್ತುವಾರಿ ಮೊದಲಾದ ಭಾಗಗಳೆಲ್ಲವೂ ಇವರುಗಳ ಮೇಲ್ವಿಚಾರಣೆಗೆ ಒಳಪಟ್ಟಿದ್ದವು.

ಆವಶ್ಯಕತೆ ಪದಗಿದರೆ ವೈದ್ಯಸಹಾಯನೀಡಲು ಸಮ್ಮೇಳನದ ಸ್ವಾಗತಸಮಿತಿಯ ಪರವಾಗಿ ಶ್ರೀ|| ಪಂಡಿತ ಕೆ. ಜಿ. ರಾಮಭದ್ರ ಎಲ್.ಎ.ಎಂ.ಎಸ್. ರವರು ತಮ್ಮ ಹಯವದನಫಾರ್ಮಸಿಯ ಶಾಖೆಯೊಂದನ್ನೂ, ಮೈಸೂರು ಡಿ|| ಬೋರ್ಡು ಪಂಡಿತರಾದ ಶ್ರೀ|| ಡಿ. ಶ್ರೀಕಂಠಯ್ಯನವರು, ಕೆಂಗಾಕಿ ಇವರು ತಮ್ಮ ವೈದ್ಯ ಶಾಲೆಯ ಶಾಖೆಯನ್ನೂ ಸಮ್ಮೇಳನಾವರಣದಲ್ಲಿ ತೆರೆದು ಅಗತ್ಯವಾದವರಿಗೆಲ್ಲಾ ವೈದ್ಯ ಸಹಾಯವನ್ನು ನೀಡುತ್ತ ತುಂಬಾ ಸಹಾಯಮಾಡಿದರು.

ಯೋಗಸಾಧನದಿಂದ ಆರೋಗ್ಯರಕ್ಷಣಾ ಕ್ರಮಗಳನ್ನು ಹೃದಯಂಗಮವಾಗಿ ಸಭಿಕರೆದುರಿಗೆ ಪ್ರತ್ಯಕ್ಷ ನಿದರ್ಶನಗಳಿಂದ ಪ್ರದರ್ಶನಕೊಟ್ಟ ಹೆಡತಲೆಯ ಶ್ರೀ|| ಶ್ರೀರಂಗ ಎಂಬುವರೂ, ಮತ್ತು ಮೈಸೂರಿನ ಯೋಗ ಪ್ರೊಫೆಸರ್ ವೇ|| ಬ್ರ|| ಶ್ರೀ|| ಕೃಷ್ಣಮಾಚಾರ್ಯರೂ ಬಂದಿದ್ದ ಮಾನ್ಯ ಅತಿಥಿಗಳಿಗೂ ಆಹ್ವಾನಿತರಿಗೂ ಪರಮಾನಂದ ವನ್ನುಂಟುಮಾಡಿ ಸಮ್ಮೇಳನ ಕಾರ್ಯಕಲಾಪಗಳಿಗೆ ಕಳೆಗೂಡಿಸಿದರು.

ಇದಲ್ಲದೆ ಇನ್ನೂ ಅನೇಕಾನೇಕ ವಿಧದಲ್ಲಿ ಪ್ರತಿಫಲಪಡೆದಾಗಲಿ ಪಡೆಯದೆ ಆಗಲಿ ಶ್ರಮವಹಿಸಿ ಕಾರ್ಯನಿರ್ವಾಹಮಾಡಿಕೊಟ್ಟವರ ಹೆಸರನ್ನೆಲ್ಲಾ ಬರೆಯುತ್ತ ಹೋಗಲು ಗ್ರಂಥವಿಸ್ತಾರ ಭಯದಿಂದ ಅವರೆಲ್ಲರ ಉಪಕಾರಮಾತ್ರ ಸ್ಮರಿಸುವುದು ನಮ್ಮ ಮುಖ್ಯಕರ್ತವ್ಯವಾಗಿದೆ.

ಸಮ್ಮೇನ ಪ್ರಾರಂಭೋತ್ಸವಕ್ಕೆ ಟರ್ವಹಾಲ್ ಕಟ್ಟಡವು ದೊರೆತದ್ದೂ, ಮಿಕ್ಕ ಕಾರ್ಯಕಲಾಪಗಳಿಗೂ, ಭೋಜನಸೌಕರ್ಯಕ್ಕೂ, ಪ್ರತಿನಿಧಿಗಳ ವಾಸಕ್ಕೂ ಸೌಕರ್ಯ ವಾಗಿ ಎಗ್ಜಿಬಿಷ ಕಟ್ಟಡವು ದೊರೆತದ್ದೂ, ನಮಗೆ ಎಷ್ಟೋ ಬಾಬಿನ ಖರ್ಚನ್ನು ಕಡಿಮೆಮಾಡಿತಲ್ಲದೆ, ಪ್ರತಿನಿಧಿಗಳಿಗೆ ಬೇಜಾರಾಗದಂತೆ ವಿಹಾರಸ್ಥಾನಗಳೂ, ಆಕಾಶವಾಣಿಯೂ ಇದ್ದು, ತುಂಬಾ ಅನುಕೂಲವಾಯಿತು.

ಪ್ರಬಂಧವಿಚಾರದಲ್ಲಿ ಬಂದಿದ್ದ ಲೇಖಗಳಪೈಕಿ ತಕ್ಕ ವಿಮರ್ಶೆಯಿಂದ ಸಮ್ಮೇಳನ ಸಮಯಕ್ಕೆ ಬರತಕ್ಕವು ಇಂತಿಂತವೇ ಎಂದು ಮೊದಲೆ ವ್ಯವಸ್ಥೆಗೊಳಿಸಲ್ಪಟ್ಟಿತ್ತು.

ಹಾಗೆಯೆ ಅಲ್ಲಿ ಚರ್ಚೆಗೆ ಬರಬೇಕಾದ ಪ್ರಸ್ತಾವಗಳೂ ಸಕಾಲಕ್ಕೆ ಬಂದವುಗಳಲ್ಲಿ ಆರಿಸಲ್ಪಟ್ಟು ಅಣಿಮಾಡಲ್ಪಟ್ಟಿದ್ದವು.

**ಸಮ್ಮೇಳನಾಂಗವಾಗಿ ಏರ್ಪಟ್ಟಿದ್ದ ಪರಿಷತ್ತುಗಳಿಗೆ—** ಸಮ್ಮೇಳನದ ಪುಣ್ಯದಿಂದ ದೊರೆತ **ಅಧ್ಯಕ್ಷರೂ, ಆರಂಭಭಾಷಣಕಾರರೂ** ಕೂಡ ವಿದ್ವಾಂಸರೂ ಶಾಂತರೂ ಆದ ಮಹನೀಯರೇ ಆಗಿದ್ದುದರಿಂದ ಆ ಪರಿಷತ್ತುಗಳಲ್ಲಿ ನಡೆದ ಭಾಷಣಗಳು, ಓದಲಾದ ಪ್ರಬಂಧಗಳು, ನಡೆದ ಚರ್ಚೆಗಳು ಸಹ ಉಚ್ಚಅಂತಸ್ತಿನ ವಾಗಿದ್ದು, ಕೇವಲ ವೈದ್ಯರನ್ನು ಮಾತ್ರವಲ್ಲದೆ ವೈದ್ಯಾಭಿಮಾನಿಗಳಾಗಿಯೂ, ವಿದ್ಯಾಪಕ್ಷಪಾತಿಗಳಾಗಿಯೂ ಇದ್ದ ಅನೇಕ ಇತರ ದೊಡ್ಡ ಮನುಷ್ಯರನ್ನೂ ಮಹಿಳೆ ಯರನ್ನೂ ಆಕರ್ಷಿಸಿತ್ತೆಂಬುದು ಗಮನಾರ್ಹವಾದ ವಿಚಾರ.

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ತಮ್ಮ ಅನೇಕಾನೇಕ ರಾಜಕೀಯ ಕಾರ್ಯ ಗಳಲ್ಲೂ ವಿರಾಮ ಮಾಡಿಕೊಂಡು ದಯಮಾಡಿಸಿ **ಮಾನ್ಯಮಂತ್ರಿವರ್ಯರಾದ ಶ್ರೀಮಾನ್ ಗುಂಡಪ್ಪಗೌಡರು,** ಬಿ.ಎ., ಬಿ ಎಲ್. ರವರು **ಈ ಸಮ್ಮೇಳನಗಳ ಪ್ರಾರಂಭೋತ್ಸವವನ್ನು ಜರುಗಿಸಿದ್ದು** ಈ ಸಮ್ಮೇಳನಕ್ಕೆ ಶೋಭೆಯನ್ನುಂಟು ಮಾಡಿದ್ದು ಮಾತ್ರವಲ್ಲದೆ ಅಲ್ಲಿ ನೆರೆದಿದ್ದ ಅಶೇಷವೈದ್ಯರಿಗೂ, ಆಯುರ್ವೇದಾಭಿ ಮಾನಿಗಳಿಗೂ ನವಚೈತನ್ಯವನ್ನೂ ಮುಂದಿನ ಆಶೆಯ ಬೆಳಕನ್ನೂ ಬೀರಿದಂತಾ ಯಿತು. ಆ ಮಹನೀಯರ ಆಂತರಿಕವಾದ ಆಯುರ್ವೇದಾಭಿಮಾನವು ಅವರ ಅಮೃತವಾಣಿಯಿಂದ ಹೊರಹೊರಟು ನಮ್ಮಗಳ ನಿರೀಕ್ಷಣೆಯನ್ನು ಸಾರ್ಥಕಗೊಳಿ ಸಿತು. ಅವರ ಔದಾರ್ಯವನ್ನೂ ಸಹಾಯ ಹಸ್ತವನ್ನು ಕಾರ್ಯಗತಮಾಡಿಕೊಳ್ಳುವ ಭಾರವು ವೈದ್ಯರುಗಳ ಮೇಲೆ ಹೊರೆಯಾಗಿ ನಿಂತಿತು. ಅದಕ್ಕಾಗಿ ಸಭೆಯವರೆಲ್ಲರೂ ಜಯಜಯಕಾರದೊಡನೆ ಅವರ ಅಭಯದಾನವನ್ನೂ ಅವರ ಅಮೌಲ್ಯವಾದ ಸಲಹೆ ಗಳನ್ನೂ ಅಂಗೀಕರಿಸಿದರು. ಮತ್ತು ಅವರ ಶುಭಾಶಯಗಾಗಿ ವಂದಿಸಿದರು.

**ನಿಖಿಲಕರ್ಣಾಟಕಾಯುರ್ವೇದ ಸಮ್ಮೇಳನಕ್ಕೆ-ವೇ॥ ಬ್ರ॥ ಶ್ರೀ॥ ಗುರು ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳವರು ಅಧ್ಯಕ್ಷರಾಗಿ** ಚುನಾಯಿತರಾಗಿ ಬಂದದ್ದು ನಮ್ಮ ಪುಣ್ಯ. ಇವರ ವಿದ್ವತ್ಪ್ರಭೆಯೂ, ಅದಕ್ಕನುಗುವಾದ ಸೌಜನ್ಯವೂ ಅವರ ವ್ಯಕ್ತಿಗತ ತೇಜಸ್ಸೂ ಸರ್ವರನ್ನೂ ಮುಗ್ಧಗೊಳಿಸುವಂತಿತ್ತು. ಇವರ ಸರಳ ತೆಯೂ, ಶಾಂತತೆಯೂ ಇತರರಿಗೆ ಮಾರ್ಗದರ್ಶಕವಾಗಿದ್ದವೆಂದರೆ ಅತಿಶಯೋಕ್ತಿ ಯಲ್ಲ. ಇವುಗಳ ಸಹಾಯದಿಂದ ಸಮ್ಮೇಳನದ ಕಾರ್ಯಕಲಾಪಗಳು ಲೇಶವೂ ಕಾಲ ಮೀರದಂತೆ ಕ್ರಮಬದ್ಧವಾಗಿ ಜರಗಲು ಅವಕಾಶವಾಯಿತು.

**ಮೈಸೂರು ಸಂಸ್ಥಾನದ ಸಮ್ಮೇಳನಾಧ್ಯಕ್ಷತೆಗೆ—ಶ್ರೀಮಾನ್ ಭಿಷಗ್ರತ್ನ ಪಾಳ್ಯದ ವೆಂಕಟಾಚಲಪಂಡಿತರವರು** ದೊರೆತದ್ದು ನಮ್ಮಗಳ ಸುಯೋಗ. ಇವರನ್ನು ಮೈಸೂರಿನವರೆಂಬ ದೃಷ್ಟಿಯಿಂದ ಚುನಾಯಿಸಿದ್ದಲ್ಲ. ಇಡೀ ಮೈಸೂರು ದೇಶದಲ್ಲೇ ಇರುವ ವಯೋವೃದ್ಧ, ಜ್ಞಾನವೃದ್ಧರಾಗಿ ಆಯುರ್ವೇದ ಸೇವೆಯಲ್ಲಿ ಮುಪ್ಪಾಗಿರುವವರಲ್ಲೊಬ್ಬರಾದ್ದರಿಂದ, ಆ ದೃಷ್ಟಿಯಿಂದ ಇವರಿಗೆ ಈ ಮೊದಲನೆಯ ಸಮ್ಮೇಳನದಲ್ಲೆ ಅಧ್ಯಕ್ಷತೆಯ ಗೌರವವು ದೊರೆಯತಕ್ಕದೆಂದು ಇವರನ್ನೇ ಆ ಸ್ಥಾನಕ್ಕೆ ಪ್ರಾರ್ಥಿಸಲಾಯಿತು. ಅವರಿಗೆ ದೇಹಾಲಸ್ಯವಾಗಿದ್ದರೂ ಲಕ್ಷಿಸದೆ ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಸಮ್ಮೇಳನವನ್ನು ಜರುಗಿಸಿದ್ದಕ್ಕಾಗಿ ಅವರ ಉಪಕಾರವು ಸ್ಮರಣೀಯವು.

**ಪ್ರದರ್ಶನಶಾಖೆಯು** ಹಿಂದೆ ಸೂಚಿಸಿರುವಂತೆ ಶ್ರೀ|| ಉಭಯ ನಾಗೇಶರಾಯರುಗಳ ಪರಿಶ್ರಮ ಮತ್ತು ಅವಿಶ್ರಾಂತವಾದ ಕಾರ್ಯನಿರ್ವಾಹದ ಫಲವಾಗಿ ಸುವ್ಯವಸ್ಥೆಗೊಳಿಸಲ್ಪಟ್ಟಿತ್ತಾದರೂ, **ಶ್ರೀಯುತ ಗಂಗಾಧರವಿಷ್ಣು ಪುರಾಣಿಕ್ ಪನವೇಲ್‌ರವರ ಪ್ರಾರಂಭೋತ್ಸವದ** ವಿನಹಶೋಭೆಗೊಳ್ಳುತ್ತಿರಲಿಲ್ಲ. ಈ ಮಹಾಶಯರು ಕನ್ನಡಿಗರೇ ಅಲ್ಲದಿದ್ದಾಗ್ಯೂ ಅವರ ಆಯುರ್ವೇದದ ಪರಿಸ್ಥಿತಿಯ ಮತ್ತು ವ್ಯವಸ್ಥಾತ್ಮಕಜ್ಞಾನದ ಲಾಭವನ್ನು ನಾವುಗಳು ಪಡೆದುಕೊಳ್ಳಬೇಕೆಂಬ ಆಸೆಯಿಂದ ಅವರಿಗೆ ಆಹ್ವಾನಕೊಟ್ಟಕೂಡಲೆ ಅವರು ಅಂಗೀಕರಿಸಿ ಬೊಂಬಾಯಿನಿಂದ ಇಲ್ಲಿಗೆ ಎಷ್ಟೋ, ಶ್ರಮದಿಂದಲೂ ತಮ್ಮ ಸ್ವಂತ ಮಾರ್ಗವ್ಯಯದಿಂದಲೂ ದಯಮಾಡಿಸಿ, ನಮ್ಮಗಳೊಡನೆ ಸರಸದಿಂದ ಸೇರಿ, ಕಾರ್ಯಗಳನ್ನು ಸಾಂಗಗೊಳಿಸಿದ್ದಲ್ಲದೆ, ತಮ್ಮ ಸೈಜವಾದ ಮತ್ತು ಸರಳವಾದ ಪ್ರಭೆಯಿಂದ ಸಭೆಯಾದ್ಯಂತವನ್ನೂ ತಮ್ಮ ಕಡೆಗೆ ಆಕರ್ಷಿಸಿಕೊಂಡರೆನ್ನಬಹುದು.

**ಮಾನ್ಯಅತಿಥಿಗಳೆಲ್ಲರ ಆಗಮನ**—ತಾ|| 27-12-41 ನೇ ಸಾಯಂಕಾಲ ಸಮ್ಮೇಳನದ ಪ್ರಾರಂಭಕರಾದ ಮಾನ್ಯಮಂತ್ರಿವರ್ಯ ಶ್ರೀಮಾನ್ ಹೆಚ್.ಬಿ. ಗುಂಡಪ್ಪ ಗೌಡರು ಬಿ.ಎ., ಬಿ.ಎಲ್., ರವರು ಸಕಾಲದಲ್ಲಿ ದಯಮಾಡಿಸಿ ತಮ್ಮ ಸರ್ಕಾರಿ ಬಿಡಾರದಲ್ಲಿ ಇಳಿದಿದ್ದರು.

ಮಾನ್ಯ ಅತಿಥಿಗಳೆಲ್ಲರೂ ಆದಿನ ದಯಮಾಡಿಸುವ ಕಾಲಗಳನ್ನು ತಿಳಿದು ಕ್ಲಿಪ್ತ ಕಾಲಕ್ಕೆ ಸರಿಯಾಗಿ ರೈಲ್ವೆಸಿಲ್ದಾಣದಲ್ಲಿ ಸ್ವಾಗತಾಧ್ಯಕ್ಷರು, ಜನರಲ್ ಸೆಕ್ರಿಟೆರಿಯವರು ಮೊದಲ್ಗೊಂಡು ಸ್ವಾಗತಸಮಿತಿಯ ಕಾರ್ಯನಿರ್ವಾಹಕರ್ತರೆಲ್ಲರೂ ಹಾಜರಿದ್ದು, ಸರ್ವರನ್ನೂ ಸ್ವಾಗತಿಸಿ, ಅವರವರ ಬಿಡಾರಗಳಿಗೆ ಬೀಳ್ಕೊಟ್ಟರು.

ಸಮ್ಮೇಳನಾಧ್ಯಕ್ಷರನ್ನು ಅವರ ಪರಿವಾರ ಸಹಿತ ಸರ್ಕಾರದವರು ರಾಜ ಅತಿಥಿಗಳನ್ನಾಗಿ ಅಂಗೀಕರಿಸಿ ಮರ್ಯಾದಿಸಿದ್ದು ನಮ್ಮ ಸಮ್ಮೇಳನಕ್ಕೆ ಅತಿಶಯ ಗೌರವ ಕೊಟ್ಟಂತಾಯಿತು.

ಪ್ರದರ್ಶನೋದ್ಘಾಟಕರಾದ ಶ್ರೀಮಾನ್ ಜಿ. ವಿ. ಪುರಾಣೀಕರವರು ಪರಿವಾರ ಸಹಿತ ತಮ್ಮ ಸ್ವಂತ ಇಚ್ಛೆಯಿಂದ ಮಾಡರ್ನ ಹಿಂದೂ ಹೋಟಲಲ್ಲಿ ಇಳಿದರು.

ದ್ರವ್ಯಸಂಭಾಷಾಪರಿಷತ್ತಿನ ಅಧ್ಯಕ್ಷರಾದ ಶ್ರೀಮಾನ್ ಆಯುರ್ವೇದಭೂಷಣ ಎಂ. ವಿ. ಶಾಸ್ತ್ರಿಗಳು ಮಂಗಳೂರು ಮತ್ತು ರಸಾಯನಸಂಭಾಷಾಪರಿಷದಧ್ಯಕ್ಷರಾದ ಶ್ರೀಮಾನ್ ವೈದ್ಯ ಬಿ.ಆರ್. ಹರಿದಾಸ್, ಮಂಗಳೂರು ಸಹ ತಮ್ಮ ಸ್ವಂತ ಮಿತ್ರ ಗೃಹಗಳಲ್ಲಿ ಇಳಿದುಕೊಂಡಿದ್ದರು. ಮಿಕ್ಕ ಮಹನೀಯರೆಲ್ಲರೂ ವಿಶಾಲವಾದ ಎಗ್ಜಿಬಿಷನ್ ಕಟ್ಟಡದಲ್ಲೇ ಪರಸ್ಪರ ಉತ್ಸಾಹದಿಂದ ನೆರೆದಿದ್ದರು.

ನಿಖಿಲ ಕರ್ಣಾಟಕ ಮಂಡಳದ ಸೆಕ್ರೆಟರಿಯವರಾದ ಶ್ರೀಮಾನ್ ವೈದ್ಯ ಎ. ಕೆ. ರಾಯಬಾಗ್‌ಕರ್‌ರವರು ಸಂಸಾರ ಸಹಿತವೂ ತಮ್ಮ ಸಹಾಯಕ ಸೆಕ್ರೆಟರಿಯವರೊಡನೆಯೂ ಅದೇ ಕಟ್ಟಡದಲ್ಲಿ ಪ್ರತ್ಯೇಕ ಬಿಡಾರದಲ್ಲಿ ತಮ್ಮ ಆಫೀಸನ್ನು ನಡಿಸಿಕೊಳ್ಳುತ್ತಿದ್ದರು. ವಿಶ್ರಾಂತಿ ಪಡೆಯಲಿದ್ದ ಅಧ್ಯಕ್ಷರು ಮತ್ತು ಉಪಾಧ್ಯಕ್ಷರೂ, ಮೇಲಾಗಿ ಬೊಂಬಾಯಿ ಗೌ|| ಆಯುರ್ವೇದಿಕ್ ಮೆಡಿಕಲ್‌ಬೋರ್ಡಿನ ಕರ್ಣಾಟಕ ಸದಸ್ಯರಾದ ಶ್ರೀ ಜೆ. ಜಿ. ಕುಲಕರ್ಣಿಯವರು, ಆರೋಗ್ಯಮಂದಿರದ ಸಂಚಾಲಕರೂ ಸಹ ದಯಮಾಡಿಸಿ ಸಮ್ಮೇಳನಕ್ಕೆ ಕಳೆಯನ್ನುಂಟುಮಾಡಿದ್ದರು.

ಕರ್ಣಾಟಕದ ನಾನಾ ಭಾಗಗಳಿಂದ (ಮೈಸೂರು ದೇಶವೂ ಸೇರಿ) ಶ್ರಮವಹಿಸಿ ಅತ್ಯುತ್ಸಾಹದಿಂದ ದಯಮಾಡಿಸಿದ್ದ ಮಾನ್ಯ ಪ್ರತಿನಿಧಿಗಳೂ, ಪ್ರೇಕ್ಷಕ ಮಹಾಶಯರೂ ಮಾನ್ಯ ಮಹಿಳೆಯರೂ ಸಂಭ್ರಮದಿಂದ ಸ್ವಾಗತಮಂಡಳಿಯ ವೈದ್ಯ ಮತ್ತು ವೈದ್ಯೇತರ ಸದಸ್ಯರೊಂದಿಗೆ ಕಲೆತು ಸರಸಸಲ್ಲಾಪಗಳೊಡನೆ ಸಮ್ಮೇಳನಾವರಣದಲ್ಲೇ ಬಿಡಾರ ಮಾಡಿದ್ದರು.

ಆ ದಿನ ರಾತ್ರಿ ಭೋಜನಾನಂತರ, ಮೊದಲೇ ಪ್ರಕಟಿಸಿದ್ದಂತೆ ಸಮ್ಮೇಳನಾವರಣದಲ್ಲಿ ನಿಖಿಲಕರ್ಣಾಟಕಾಯುರ್ವೇದಮಂಡಳಿ, ಹುಬ್ಬಳ್ಳಿಯ **ಸ್ಥಾಯಿಸಮಿತಿಯ** ಅಧಿವೇಶನವು ಶ್ರೀ ಆದ್ಯಅನಂತಾಚಾರ್ಯರವರ ಅಧ್ಯಕ್ಷತೆಯಲ್ಲಿ ನಡೆಯಿತು.

ಮರುದಿನ **28-12-41** ನೇ ಪ್ರಾತಃಕಾಲದಿಂದ ಮುಂದೆ ಕೊಟ್ಟಿರುವ **ಕಾರ್ಯಕ್ರಮಪಟ್ಟಿ** ಯಂತೆ ಸಾಂಗವಾಗಿ ಕಾರ್ಯಕಲಾಪಗಳು ಜರುಗಿದವು.

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ

ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—೧೯೪೧




ಮೈಸೂರು ಸಂಸ್ಥಾನದ ಆರೋಗ್ಯಶಾಖಾ ಸಚಿವರಾದ

**ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡರು, B.A., B.L.,**

**ಸಮ್ಮೇಳನೋದ್ಘಾಟಕರು.**

# ಸಮ್ಮೇಳನಗಳ ವಿವರವಾದ ಕಾರ್ಯಕ್ರಮ

ತಾ|| ೨೮-೧೨-೧೯೪೮ನೇ ಭಾನುವಾರದ ದಿವಸ

ಬೆಳಿಗ್ಗೆ ೭-೩೦ ರಿಂದ ೮-೩೦ ಗಂ ವರೆಗೆ—ಎಗ್ಜಿಬಿಷನ್ ಕಟ್ಟಡದಿಂದ ಟೌನ್ ಹಾಲಿಗೆ ಅಧ್ಯಕ್ಷರುಗಳ ಮತ್ತು ಪ್ರತಿನಿಧಿಗಳ ಮೆರವಣಿಗೆ.

ಬೆಳಿಗ್ಗೆ ೮-೩೦ ರಿಂದ ೧೧ ಗಂ. ವರೆಗೆ ಟೌನ್‌ಹಾಲಿನಲ್ಲಿ ಸಭೆ

ಮಂಗಳಗೀತೆಗಳು—ಶ್ರೀವನಿತಾಸದನದ ಬಾಲಕಿಯರಿಂದ

ಸ್ವಾಗತಪದ್ಯಪಠನ—ಸಂಸ್ಕೃತ—ವಿದ್ವಾನ್ ಶ್ರೀ ಎಂ. ಎನ್. ಸೂರ್ಯನಾರಾಯಣಶಾಸ್ತ್ರಿಗಳಿಂದ

,, ಕನ್ನಡ—ಶ್ರೀ ಮಾಯಗಗೌಡರವರಿಂದ

,, ಲಾವಣಿ—ಶ್ರೀವಿಜಯೇಂದ್ರಮೂರ್ತಿಯವರಿಂದ

ಸ್ವಾಗತಾಧ್ಯಕ್ಷಭಾಷಣ—ಸ್ವಾಗತಾಧ್ಯಕ್ಷರಾದ ಶ್ರೀ ಅಂಬಳೆ ಸುಬ್ರಹ್ಮಣ್ಯ ಅಯ್ಯರ್ ಬಿ.ಎ.,ರವರಿಂದ

ಸಮ್ಮೇಳನ ಪ್ರಾರಂಭೋತ್ಸವಭಾಷಣ—ಮಾನ್ಯಮಂತ್ರಿವರ್ಯ ಶ್ರೀಮಾನ್ ಹೆಚ್. ಬಿ. ಗುಂಡಪ್ಪಗೌಡರು ಬಿ.ಎ., ಬಿ.ಎಲ್., ರವರಿಂದ

ಸಮ್ಮೇಳನಾಧ್ಯಕ್ಷರುಗಳ ನಾಮನಿರ್ದೇಶ—ಸ್ವಾಗತಾಧ್ಯಕ್ಷರಿಂದ

,, ಸಮರ್ಥನೆ—ಕರ್ನಾಟಕದ ನಾನಾಭಾಗದ ಪ್ರತಿನಿಧಿಗಳಿಂದ

೧೨ನೇ ನಿಖಿಲ ಕರ್ಣಾಟಕಾಯುರ್ವೇದ ಸಮ್ಮೇಳನದ ಅಧ್ಯಕ್ಷರ ಭಾಷಣ, ಅಧ್ಯಕ್ಷರಾದ ಶ್ರೀ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳು ಬಳ್ಳಾರಿ-ಯವರಿಂದ.

ಆಗಿನ ಸಭೆಗೆ ವಂದನಾಸಮರ್ಪಣೆ—ಸಮ್ಮೇಳನದ ಜನರಲ್ ಸೆಕ್ರೆಟರಿ ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳವರಿಂದ.

ಪುಷ್ಪಹಾರವಿನಿಯೋಗ ಮತ್ತು ಆ ಸಭೆಯ ಮುಕ್ತಾಯ.

೧೧ ರಿಂದ ೧೧-೩೦ ಅದೇ ಸ್ಥಳದಲ್ಲಿ ವಿಷಯನಿರ್ಧಾರಣ ಸಮಿತಿಯ ರಚನೆ (ಅಧ್ಯಕ್ಷರಿಂದ)

ಮ. ೨-೩೦ ರಿಂದ ೫-೩೦ ವರಿವಿಗೆ ಚಿಕಿತ್ಸಾಸಂಭಾಷಾ ಪರಿಷತ್

ಅಧ್ಯಕ್ಷರು—ಶ್ರೀ ಡಿ. ವಿ. ರಾಮರಾವ್ ಆ॥ ವಿ॥ ಮೆಡಿಕಲ್ ಆಫೀಸರ್, ಮುನಿಸಿಪಲ್ ಆಯುರ್ವೇದಿಕ್ ಡಿಸ್ಪೆನ್ಸರಿ, ಗದಗ್-ರವರು.

ಆರಂಭಭಾಷಣಕಾರರು—ಶ್ರೀ ವೈ. ಪಾರ್ಥನಾರಾಯಣ ಪಂಡಿತರು, ಪ್ರೊಪ್ರೈಟರ್, ಮೈಸೂರು ಫಾರ್ಮಸಿ, ಶಿವಮೊಗ್ಗ—ರವರು.

ಪ್ರಬಂಧಗಳು, ಭಾಷಣಗಳು ಮತ್ತು ಚರ್ಚೆಗಳು.

---

ಸಾಯಂಕಾಲ ೫-೪೫ ರಿಂದ ೬-೩೦ ರ ವರಿಗೆ—

## ಪ್ರದರ್ಶನೋದ್ಘಾಟನೋತ್ಸವ.

ಉದ್ಘಾಟಕರು—ಶ್ರೀಮಾನ್ ಗಂಗಾಧರವಿಷ್ಣುಶಾಸ್ತ್ರೀ, ಪುರಾಣಿಕ್ ಪನವೇಲ್‌ರವರು.
(ಶ್ರೀ ಧೂತಪಾಪೇಶ್ವರ ಔಷಧಾಲಯದ ಮಾಲೀಕರು).

ಪರಿಚಯಭಾಷಣ—ಪ್ರದರ್ಶನಶಾಖಾಧ್ಯಕ್ಷರಾದ ಶ್ರೀಮಾನ್ ಎನ್. ನಾಗೇಶರಾವ್, ಎಂ.ಎ. ರವರಿಂದ.

ವಂದನಾಸಮರ್ಪಣೆ—ಶ್ರೀ ವೈದ್ಯ ಕೆ. ಪಿ. ಪುರಾಣೀಕರು-ಮೈಸೂರು-ರಿಂದ.

ರಾತ್ರಿ ೮-೩೦ ರಿಂದ ೧೧ರ ವರಿಗೆ

ವಿಷಯನಿರ್ಧಾರಣ ಸಮಿತಿಯ ಸಭೆ—ಶ್ರೀ ಅಧ್ಯಕ್ಷರು ಮತ್ತು ಚುನಾಯಿತ ಪ್ರತಿನಿಧಿಗಳು ಸೇರಿ. (ನಿ.ಕೆ.ಮಂ.)

(ತಾ॥ ೨೯ ಮತ್ತು ೩೦ನೇ ದಿನಗಳ ಕಾರ್ಯಕ್ರಮಗಳನ್ನು ಮುಂದೆ ಆಯಾ ದಿನಗಳಲ್ಲಿ ಕೊಡಲಾಗಿದೆ.)

---

ನಿಖಿಲಕರ್ಣಾಟಕದ 12ನೆಯ ಮತ್ತು ಮೈಸೂರು ಸಂಸ್ಥಾನದ 1ನೆಯ
ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941



ಶ್ರೀಮಾನ್ ಅಂಬ್ಲೆ ಸುಬ್ರಹ್ಮಣ್ಯಯ್ಯರವರು B.A.,
(ರಿ॥ ಎಕ್ಸೈಜ್ ಕಮಿಷನರ್, ಮೈಸೂರು)

ಸ್ವಾಗತಾಧ್ಯಕ್ಷರು

# ಸಮ್ಮೇಳನ ಕಾರ್ರ‍್ಯಾರಂಭ.

---

### ತಾ|| ೨೮-೧೨-೧೯೪೧ನೇ ಭಾನುವಾರದ ದಿವಸ

**ಬೆಳಿಗ್ಗೆ ೭-೩೦ ಗಂ. ಯಿಂದ ೧೧ ಗಂ. ವರಿಗೆ ಮೆರವಣಿಗೆ**

ಸಮ್ಮೇಳನಾಂಗವಾಗಿ ಆದಿನ ಪ್ರಾತಃಕಾಲ ೭|| ಗಂಟೆಗೆ ಸರಿಯಾಗಿ ಸಮ್ಮೇಳನಗಳ ಅಧ್ಯಕ್ಷರುಗಳು, ನಿವೃತ್ತರಾಗಲಿದ್ದ ಅಧ್ಯಕ್ಷರು, ಉಪಾಧ್ಯಕ್ಷರು, ಮಂಡಳದ ಸೆಕ್ರೆಟರಿಗಳು, ಪರಿಷತ್ತುಗಳ ಅಧ್ಯಕ್ಷರುಗಳು ಇವರುಗಳ ಮೆರವಣಿಗೆಯು ಸ್ವಾಗತಾಧ್ಯಕ್ಷರಿಂದೊಡಗೂಡಿ ಮೋಟಾರ್‌ಕಾರುಗಳಲ್ಲಿ ಎಗ್ಜಿಬಿಷನ್ ಕಟ್ಟಡದಿಂದ ಹೊರಟು ಇರ್ವಿನ್‌ರೋಡ್, ದೊಡ್ಡಪೇಟೆ ಮುಂತಾದ ರಾಜವೀಧಿಗಳ ಮುಖಾಂತ್ರ ಹಾದು ಟವನ್‌ಹಾಲನ್ನು ಬೆಳಿಗ್ಗೆ ೮|| ಗೆ ಸೇರಿತು. ಅನೇಕಾನೇಕ ವೈದ್ಯರೂ ಸಾರ್ವಜನಿಕರೂ ಕಿಕ್ಕಿರಿದು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಸುಶ್ರಾವ್ಯವಾದ ನಾಗಸ್ವರಸಹಿತ ವಾದ್ಯಗಳು ಮೊಳಗುತ್ತಿದ್ದವು.

**ಬೆಳಿಗ್ಗೆ ೮-೩೦ ರಿಂದ ೧೧-೩೦ ರ ವರಿಗೆ—ಟೌನ್‌ಹಾಲಿನಲ್ಲಿ ಸಭೆ.**

ಟವನ್‌ಹಾಲ್ ಸಭಾಂಗಣವು ಪಟ್ಟಣದ ಉನ್ನತಾಧಿಕಾರಿಗಳಿಂದಲೂ ಪುರಪ್ರಮುಖರುಗಳಿಂದಲೂ ಸ್ವಾಗತಸದಸ್ಯರಿಂದಲೂ, ಪ್ರತಿನಿಧಿಗಳಿಂದಲೂ ಆಹ್ವಾನಿತ ಮಾನ್ಯ ಮಹಿಳೆಯರಿಂದಲೂ ಕಿಕ್ಕಿರಿಯುತ್ತಿದ್ದು ಮೆರವಣಿಗೆಯಲ್ಲಿ ಬಂದ ಮಾನ್ಯ ಅತಿಥಿಗಳಿಗೆಲ್ಲಾ ಆದರ ಪೂರ್ವಕವಾದ ಸ್ವಾಗತವು ದೊರೆಯಿತು.

ಮಾನ್ಯಮಂತ್ರಿವರ್ಯ ಶ್ರೀಮಾನ್ ಹೆಚ್. ಬಿ. ಗುಂಡಪ್ಪಗೌಡರೂ ಸಕಾಲದಲ್ಲಿ ದಯಮಾಡಿಸಿ ಆಸನಾರೂಢರಾದರು. ಪರಸ್ಪರ ಪರಿಚಯ ಮತ್ತು ಕುಶಲ ಪ್ರಶ್ನೆಗಳಾದಮೇಲೆ ಮಿಕ್ಕ ಮಾನ್ಯ ಅತಿಥಿಗಳೆಲ್ಲರೂ ಸುಖಾಸೀನರಾದರು. ನಂತರ ಕಾಲಕ್ಕೆ ಸರಿಯಾಗಿ ರಾಜಧಾನಿಯ ಶ್ರೀ ವನಿತಾಸದನದ ಬಾಲಕಿಯರ ದೇವತಾ ಪ್ರಾರ್ಥನೆಯೊಡನೆ ಸಭಾಕಾರ್ರ‍್ಯವು ಪ್ರಾರಂಭವಾಯಿತು. ಶ್ರೀಮಾನ್ ವಿದ್ವಾನ್ ಎಂ. ಎನ್. ಸೂರ್ರ‍್ಯನಾರಾಯಣಶಾಸ್ತ್ರಿಗಳವರಿಂದ ಸಂಸ್ಕೃತದಲ್ಲೂ ಶ್ರೀಮಾನ್ ಮಾಯಿಗಗೌಡರವರಿಂದ ಕನ್ನಡದಲ್ಲೂ, ಶ್ರೀಮಾನ್ ವಿದ್ಯಾರ್ಥಿ ಶ್ರೀ ವಿಜಯೇಂದ್ರಮೂರ್ತಿಯವರಿಂದ ಲಾವಣಿರೂಪದಲ್ಲೂ ದೇವತಾಪ್ರಾರ್ಥನೆಯೂ, ಮಾನ್ಯ ಮಂತ್ರಿವರ್ಯರ, ಅಧ್ಯಕ್ಷರುಗಳ, ಪ್ರತಿನಿಧಿಗಳ, ಆಹ್ವಾನಿತರ ಸ್ವಾಗತಪದ್ಯಗಳ ಪಠನವಾದ ಮೇಲೆ ಸ್ವಾಗತಾಧ್ಯಕ್ಷರು ತಮ್ಮ ಭಾಷಣದಿಂದಸರ್ವರಿಗೂ ಸ್ವಾಗತವನ್ನು ಬಯಸಿ, ಮಾನ್ಯ **ಶ್ರೀಮಾನ್ ಹೆಚ್. ಬಿ. ಗುಂಡಪ್ಪಗೌಡರವರನ್ನು** ಸಮ್ಮೇಳನೋದ್ಘಾಟನಕ್ಕಾಗಿ ಪ್ರಾರ್ಥಿಸಿದರು.

**ಶ್ರೀಯುತರು** ಸಭಿಕರ ಉತ್ಸಾಹಪೂರಿತವಾದ ಕರತಾಡನಗಳ ಮಧ್ಯೆ ತಮ್ಮ ಆಸನದಿಂದೆದ್ದು,ಅವರ ವ್ಯಕ್ತಿತ್ವ ಮತ್ತು ಅಧಿಕಾರಸ್ಥಾನಕ್ಕೆ ಸಲ್ಲುವಂತಹ ಗಂಭೀರವೂ

ಅರ್ಥಗರ್ಭಿತವೂ, ಆಶಾದಾಯಕವೂ ಆದ ತಮ್ಮ ಅಮೋಘವಾದ ಭಾಷಣವನ್ನು ಮಾಡಿ ಸರ್ವರಿಗೂ ಸುಖಾಗಮನವನ್ನು ಕೋರಿ, ಸಮ್ಮೇಳನಗಳನ್ನು ಉದ್ಘಾಟನ ಮಾಡಿದರು.

ತರುವಾಯ ೧೨ನೇ ನಿಖಿಲಕರ್ಣಾಟಕಾಯುರ್ವೇದ ಸಮ್ಮೇಳನಾಧ್ಯಕ್ಷತೆಯನ್ನು ವಹಿಸಬೇಕೆಂದು ವೇ|| ಬ್ರ|| ಶ್ರೀ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳು, ಬಳ್ಳಾರಿ-ಇವರನ್ನೂ, ಮೈಸೂರು ಸಂಸ್ಥಾನದ ಪ್ರಥಮ ಸಮ್ಮೇಳನಾಧ್ಯಕ್ಷತೆಯನ್ನು ವಹಿಸಬೇಕೆಂದು ಶ್ರೀಭಿಷಗ್ರತ್ನ ಪಾಳ್ಯಂ ವೆಂಕಟಾಚಲಪಂಡಿತರವರನ್ನೂ ಪ್ರಾರ್ಥಿಸಲಾಯಿತು. ತದನಂತರ ಕರ್ಣಾಟಕದ ನಾನಾ ಭಾಗಗಳಿಂದ ದಯಮಾಡಿಸಿದ್ದ ಪ್ರತಿನಿಧಿಗಳಿಂದ ಬೇರೆ ಬೇರೆಯಾಗಿ ಆ ಪ್ರಾರ್ಥನೆಯು ಸಮರ್ಥಿಸಲ್ಪಟ್ಟನಂತರ, ಶ್ರೀಮಾನ್ ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳವರು ಸಭಿಕರ ಹರ್ಷಧ್ವನಿಯ ಮಧ್ಯೆ ಎದ್ದುನಿಂತು, ತಮ್ಮ ಮೃದುಮಧುರವಾದ, ಶಾಸ್ತ್ರಸಮ್ಮತಿಯಿಂದಲೂ ಅನುಭವಗಳಿಂದಲೂ ವೈದ್ಯರಲ್ಲಿ ನವಸ್ಫೂರ್ತಿಯನ್ನು ಹುಟ್ಟಿಸಬಹುದಾದ ಅಮೋಘ ಭಾಷಣವನ್ನು ಮಾಡಿ ಸಭಿಕರನ್ನೆಲ್ಲಾ ತಲೆದೂಗಿಸಿದರು.

ಇದಾದಮೇಲೆ ಸ್ವಾಗತಸಮಿತಿಯ ಜನರಲ್ ಸೆಕ್ರಿಟೆರಿಯವರು ಸಮಯೋಚಿತವಾದ ಮಾತುಗಳಿಂದ, ಸ್ವಾಗತಸಮಿತಿಯ ಪ್ರಾರ್ಥನೆಯನ್ನು ಮನ್ನಿಸಿ ದಯಮಾಡಿಸಿ ಸಮ್ಮೇಳನಪ್ರಾರಂಭೋತ್ಸವವನ್ನು ನೆರವೇರಿಸಿದ ಶ್ರೀಮಾನ್ ಮಾನ್ಯ ಹೆಚ್. ಬಿ. ಗುಂಡಪ್ಪಗೌಡರಿಗೂ, ಅಲ್ಲಿಗೆ ಸ್ವಾಗತಸಮಿತಿಯ ಆಹ್ವಾನವನ್ನು ನಿರ್ಲಕ್ಷಿಸದೆ ದಯಮಾಡಿಸಿದ್ದ ಸಮಸ್ತ ದೊಡ್ಡಮನುಷ್ಯರಿಗೂ ಮಾನ್ಯಮಹಿಳೆಯರಿಗೂ, ಮೇಲಾಗಿ ಆ ದಿನದ ಮಂಗಳ ಗೀತೆಯನ್ನೂ ಸ್ವಾಗತ ಪದ್ಯಗಳನ್ನೂ ಸಭೆಯಲ್ಲಿ ಸುಸ್ಪಷ್ಟವಾಗಿ ಪಠಿಸಿದ ಬಾಲಕಿಯರಿಗೂ ಮಹನೀಯರುಗಳಿಗೂ ವಂದನೆಗಳನ್ನರ್ಪಿಸಿದರು. ಮತ್ತು ಆ ಪ್ರಾತಃಕಾಲದ ಸಭೆಗೆ ಸರ್ವ ವಿಧದಲ್ಲೂ ಸಹಾಯಮಾಡಿದ ಸಿಟಿ ಮುನಿಸಿಪಲ್ ಅಧಿಕಾರಿಗಳಿಗೆ ತಮ್ಮ ಕೃತಜ್ಞತಾಪೂರ್ವಕ ವಂದನೆಯನ್ನರ್ಪಿಸಿ ಆದಿನ ಬೆಳಗಿನ ಸಭಾ ಕಾರ್‍ಯಗಳು ಮುಗಿದವೆಂದೂ ಮುಂದಿನ ಕಾರ್ಯಕಲಾಪಗಳೆಲ್ಲವೂ ಎಗ್ಸಿಬಿಷನ್ ಕಟ್ಟಡದಲ್ಲಿ ಆದಿನ ಮಧ್ಯಾಹ್ನ ೨-೩೦ ಘಂಟೆಗೆ ಪ್ರಾರಂಭವಾಗುವದೆಂದು ವಿಜ್ಞಾಪಿಸಿ ಅಂದಿನ ಸಭೆಯನ್ನು ಪೂರ್ತಿಗೊಳಿಸಿದರು.

ನಂತರ ಅಲ್ಲಿ ನೆರೆದಿದ್ದ ವೈದ್ಯಸ್ವಾಗತ ಸದಸ್ಯರು ಮತ್ತು ಪ್ರತಿನಿಧಿಗಳೊಳಗಿನಿಂದ ಪದ್ಧತಿಯ ಪ್ರಕಾರ ಚುನಾವಣೆ ನಡೆದು ವಿಷಯನಿಯಾಮಕ ಕಮಿಟಿಯು ಸ್ಥಾಪಿತವಾಗಿ ಆದಿನ ಬೆಳಗಿನ ಎಲ್ಲ ಕಾರ್ಯಗಳೂ ಕ್ರಮವಾಗಿ ಪೂರೈಸಿದವು.

॥ ಶ್ರೀ ಧನ್ವಂತರಯೇ ನಮಃ ॥

## 12ನೇ ನಿಖಿಲಕರ್ಣಾಟಕದ ಮತ್ತು 1ನೇ ಮೈಸೂರುಸಂಸ್ಥಾನದ ಆಯುರ್ವೇದ ಸಮ್ಮೇಳನಗಳ ಪ್ರಾರಂಭೋತ್ಸವಕಾಲದಲ್ಲಿ ಪಠಿಸಿದ

# ಸ್ವಾಗತಗೀತಾ

(ಸಂಸ್ಕೃತ)

ಯೋ ವ್ಯಾಧಿವಹ್ನಿಲಸದರ್ಚಿಪರೀತದೇಹಾ ।
ನುದ್ಧರ್ತುಮತ್ರ ಭುವನೇಽವತತಾರ ಮರ್ತ್ಯಾನ್ ॥
ಧನ್ವನ್ತರಿಸ್ಸ ದಿಶತಾದ್ಭವತೇ ಸುಭವ್ಯಾ ।
ನ್ಯದ್ಯಾತಮದ್ಯ ದಧತೇ ಭಿಷಜಾಂ ಸಭಾಯಾಃ ॥೧॥

ದಾಕ್ಷ್ಯಂ ಯಸ್ಯ ವಿಲೋಕ್ಯ ಕರ್ಮಣಿ ಭೃಶಂ ಪ್ರಾದಾದಿಮಾಂ ರಾಜಕಂ ।
ಆರೋಗ್ಯಪ್ರವಿಭಾಗಮನ್ತ್ರಿಪದವೀಂ ಯಸ್ಮೈ ವಿನೀತಾತ್ಮನೇ ॥
ತಾಮೇತಾಂ ಪರಿಪಾಲಯನ್ಮತಿಮತಾಮಾಡ್ಯೋ ಬಿಡೌಜಾ ಯಥಾ ।
ಸೋಽಯಂ ಜ್ಞಾನಮಹೋದಧಿರ್ವಿಜಯತೇ ಗುಂಡಪ್ಪಗೌಡೋ ಮಹಾನ್ ॥೨॥

ಕಾಲಾಚ್ಯಾಂವ್ಯವಹಾರವಿತ್ತ ಮತಿಮನ್ ಕಾರುಣ್ಯವಾರಾಂನಿಧೇ ।
ಅತ್ರಾಗತ್ಯ ಮಹೋತ್ಸವಂ ಪ್ರಥಯತೋ ಗುಂಡಪ್ಪಗೌಡಪ್ರಭೋ ॥
ವಾರ್ತಂ ಭೂರಿ ತವೋಪದಾಃ ಕರಪುಟೇಃ ಕೃತ್ವಾ ಮುಹುಃ ಸಾದರಂ ।
ವೈದ್ಯಾನಾಂ ಮಹತೀ ಸಭಾ ತವ ಸಮಾಶಾಸ್ತೇ ಚ ಸುಸ್ವಾಗತಮ್ ॥೩॥

ಕ್ಷೇತ್ರೇ ಪ್ರತೀತೇ ಪನವೇಲನಾಮ್ನಿ । ಯೋ ಧೂತಪಾಪೇಶ್ವರಶಬ್ದರಮ್ಯಾಂ ॥
ಸಂಚಾಲಯನ್ಭೇಷಜಮುಖ್ಯಶಾಲಾ ಮಾಸೀತ್ತಮೇನಂ ಸಮಿತಿರ್ಯಯಾಚೇ ॥೪॥

ವಸ್ತುಪ್ರದರ್ಶನಮಹೋತ್ಸವಮತ್ರ ಕರ್ತುಂ
ವಿಷ್ಣೋದರೇಕ್ಷಿತಪದಾರ್ಥಸಮೂಹವಿಜ್ಞಃ ।
ಏಷೋ ಗೃಹೀತನರವೇಷಮ್ವೃಕಣ್ಡುಸೂನು
ರ್ನಾಕಾದುಪೇತ್ಯ ವರಪೀಠಮುಪಾಸ್ತ ನೂನಮ್ ॥೫॥

ಶ್ರೀಯುತಗಙ್ಗಾಧರವಿಷ್ಣುಶಾಸ್ತ್ರಿಪದಕಲಿತಪುರಾಣಿಕಸುಧೀಃ ।
ವಸ್ತುಪ್ರದರ್ಶನಮಹೋತ್ಸವಮಾತನೋತಿ ಪೂರುಷಧೌರೇಯಃ ॥೬

ಶ್ರೀಮನ್ನೌಷಧತನ್ತ್ರಮರ್ಮಸುಸಖೇ ವಿಜ್ಞಾನರಾಕಾವಿಧೋ ।
ವಸ್ತೂನಾಮುಪದರ್ಶನೋತ್ಸವಮಮುಂ ಕುರ್ವನ್ತಮತ್ಯಾದರಾತ್ ॥
ನೈಪಥ್ಯೈಸ್ಸುಷಮೈರ್ಮನೋಜ್ಞತನುಭಿರ್ವೈದ್ಯಾಪದೇಶೈಃಸುರೈಃ ।
ಶ್ಲಾಘ್ಯೇ ತ್ವಾಮುಪಸೇವ್ಯಮಾನಮವನಾವಾಚಾರ್ಯಧನ್ವನ್ತರಿಮ್ ॥೭॥

ಶ್ರೀಗುರುಭಾಸ್ಕರಾಚಾರ್ಯರಾಮಚನ್ದ್ರಬುಧೋತ್ತಮಃ ।
ಅಧ್ಯಕ್ಷಪದಮಧ್ಯಾಸ್ತೇ ಭಿಷಕ್ಪ್ರಾರ್ಥನಯಾಧುನಾ ॥೮॥

ಆಯುರ್ವೇದಮಹೋದಧೇರನುಪಮೈರಾತ್ಮೀಯಮೇಧಾಪ್ಲವೈ ।
ರಾನೀತೈರ್ಗದನಿಸ್ಸೃತಾಪ್ರತಿಹರ್ತಾ ಭೈಷಜ್ಯರತ್ನೈಸ್ಸದಾ ॥
ಆರೋಗ್ಯಾಢ್ಯತಯಾ ಮನೋಜ್ಞವಪುಷೋ ಯೋ ವಾ ಕರೋತಿ ಧ್ರುವಂ ।
ತಸ್ಮೈ ತೇ ತನುತಾಚ್ಚಿರಾಯ ಭಗವಾನ್ ಧನ್ವನ್ತರಿರ್ವಾಞ್ಛಿತಮ್ ॥೯॥

ಧನ್ಯಾ ಮಹಿಶೂರಪುರೀ ಧನಧಾನ್ಯಸಮುಜ್ಜ್ವಲಾ ।
ಸ್ವಯಮುತ್ಸಹತೇ ಕರ್ತುಂ ಭಿಷಕ್ಸಂಮೇಲನೋತ್ಸವಂ ॥೧೦॥

ಸೀತಾರಾಘವಶಬ್ದಮಞ್ಜುಲತಮಾಂ ಭೈಷಜ್ಯಶಾಲಾಮಿಮಾಂ ।
ಕಸ್ತೂರೀಘುಟಿಕಾದಿಭಿಸ್ಸುರಭಿತಾಂ ರುಗ್ಣೋಽಪಿ ದೃಷ್ಟ್ವಾ ಜನಃ ॥
ಆರೋಗ್ಯಂ ಭಜತೇ ವಯಸ್ಯ ನನು ಕಿಂ ವಚ್ಮ್ಯೌಷಧಾನಾಂ ಬಲಂ ।
ತಸ್ಯಾಯಂ ಸತು ವೆಙ್ಕಟಾಚಲಸುಧೀರ್ನೇತಾ ಚಿರಂ ವರ್ಧತಾಮ್ ॥೧೧॥

ಲಕ್ಷ್ಮೀವನ್ಸುಗುಣಪ್ರಸೂನಸುರಭೇ ಕಾರುಣ್ಯಪೂರ್ಣೋದಧೇ ।
ಏತಸ್ಯಾ ಭಿಷಜಾಂ ಮಹೋನ್ನತಗೃಹೈರ್ದೇವಾನ್ ಹಸಂತ್ಯಾಃ ಪುರಃ ॥
ಆಯುರ್ವೇದವಿದಾಮಿಮಾಂ ತು ಮಹಿತಾಂ ಸಮ್ಮೇಲನಾಧ್ಯಕ್ಷತಾಂ ।
ಬಿಭ್ರಾಣಸ್ಯ ಮನೀಷಿತಂ ಪ್ರದಿಶತಾದಾಚಾರ್ಯಧನ್ವನ್ತರಿಃ ॥೧೨॥

ಧೀಮನ್ ಶ್ರೀಜಯಚಾಮರಾಜನೃಪತೇ ಸೌಂದರ್ಯಭೂಷಾಮಣೇ
ವಿದ್ಯಾಕೈರವಶಾರದಾಬ್ಜ ಸತತಂ ಪ್ರದ್ಯೋತಿಭಾಸಾಂನಿಧೇ ।
ರತ್ನಾನಾಂ ದ್ಯುತಿಭಿಸ್ಸಮುನ್ನತವಪುಸ್ಸಿಂಹಾಸನೇ ತಿಷ್ಠತೇ
ತುಭ್ಯಂ ದಾಶತು ದೀರ್ಘಮಾಯುರವನೌ ದೇವಸ್ಸಧನ್ವನ್ತರಿಃ ॥೧೩॥

ಭಾರದ್ವಾಜಕುಲೋತ್ತಂಸೋ ವಿದುಷಾಂ ಪಾದಧೂರ್ವಹಃ ||
ಚಕ್ರೇ ಪದ್ಯಮಿದಂ ಸರ್ವಂ ರಾಮಶರ್ಮಾ ಸತಾಂ ಪ್ರಿಯಃ ||೧೪||

ಪ್ರಾಚ್ಯನವ್ಯನ್ಯಾಯಶಾಸ್ತ್ರೇ ತಥಾ ಸಾಹಿತ್ಯವರ್ತ್ಮನಿ |
ವಿದ್ವಾನಿತಿ ಸಮಾಖ್ಯಾತೋ ರಾಮಾನುಜಮತಾನುಗಃ ||೧೫||



## ಮಂಗಳಪದ್ಯ ಪಂಚರತ್ನ

(ಕನ್ನಡ)

॥ ವಾರ್ಧಿಕಷಟ್ಪದಿ ॥

ಶ್ರೀಮನ್ಮಹೀಶೂರಸಂಸ್ಥಾನದೊಡೆಯರಾ |
ಪ್ರೇಮಾನ್ವಿತರ್ ಯಾದವಾನ್ವಯಾಂಬುಧಿಚಂದ್ರ |
ರಾಮೋದದಿಂದ ನಮ್ಮ ಜಯಚಾಮರಾಜೇಂದ್ರರಾರನುಗ್ರಹದಿಂದಲಿ ||
ಪ್ರೇಮದಿಂ ರಾಜ್ಯಭಾರವನೆಸಗುತಿರ್ದಪರೊ |
ಚಾಮುಂಡಿ ಜಗದಂಬೆಯಾಶ್ರಿತಾಲಂಬೆಯಾ |
ಸಾಮಗಾನಪ್ರೀತೆ ಲಲಿತೆ ಗಿರಿಸಂಜಾತೆಯಾವಗಂ ಪೊರೆಗೆಮ್ಮನು ||೧||

ವೇದಶಾಸ್ತ್ರಪುರಾಣಗಳ್ಗೆ ತೌರೂರೆನಿಸು |
ತಾದಿಯಿಂ ಸೊಗಯಿಪಾಯುರ್ವೇದಕೋವಿದರ |
ನಾದರಿಸುತೌಷಧಂಗಳನುಚಿತವರಿದಿತ್ತು ಬಸಿರಿಯರ ಬಾಣತಿಯರಾ ||
ಆದಮಾರಯ್ವರಲೆ ಮಕ್ಕಳಂ ನಮ್ಮೊಡೆಯ |
ರಾದೂಸರಿಂದಿಂದು ಮೈಸೂರನಗರದೊಳ |
ಗೈದೆ ನೆರೆದಪುದಲ್ತೆ ನಿಖಿಲಕರ್ಣಾಟಕಾಯುರ್ವೇದಸಂಮೇಳನಂ ||೨||

ಆರೋಗ್ಯಶಾಖೆಯಾಮಂತ್ರಿವರ್ಯರು ಸುಧೀ |
ಪಾರನುತ ಹೆಚ್. ಬಿ. ಗುಂಡಪ್ಪಗೌಡರು ನಲ್ಮೆ |
ದೋರುತಾಗಮಿಸಿ ಸಂಮೇಳನಕ್ಕಿದಕೆ ತಾವ್ ಕಳಶವಿಟ್ಟಿರ್ಪರಲ್ತೆ ||
ಈರಾರನೆಯದಿದುವೆಯಧಿವೇಶನವು ಭಳಿರೆ |
ಭೂರಿವೈಭವದಗ್ರಪೀಠದೊಳ್ಮೆರೆದಿಹರು |
ಸೂರೀಂದ್ರಗುರುಭಾಸ್ಕರಾಚಾರ್ಯರಾಮಚಂದ್ರಸ್ವಾಮಿಗಳು ಮಾನ್ಯರು ||೩||

ಶ್ರೀಗುಣಗ್ರಾಹಿ ಸುಬ್ರಹ್ಮಣ್ಯಅಯ್ಯರವ |
ರೀಗಳೀ ಸ್ವಾಗತಸಭಾಧ್ಯಕ್ಷರೊಲ್ಮೆಯಿಂ |
ಸ್ವಾಗತವನೆಳಸುವರ್ ಸಚಿವೋತ್ತಮರ್ಗೆ ಸಿರಿಗುಂಡಪ್ಪಗೌಡರಿಂಗೇ ||
ಆ ಗುರೂತ್ತಮನಾದ ಧನ್ವಂತರಿಯೊರಲ್ಪು |
ರಾಗದಿಂದಾರೋಗ್ಯಭಾಗ್ಯವೀಗೆಲ್ಲರ್ಗೆ |
ಬೀಗುತಂ ಗುರುಭಾಸ್ಕರಾಚಾರ್ಯರಾಮಚಂದ್ರಸ್ವಾಮಿಗಳ್ಗೆ ಸಭೆಗೆ ||೫||

ಇಂತಪ್ಪ ಸಂಮೇಳನಂಗಳತಿಶಯಮೆನಲು |
ಸಂತತಂ ಬಳೆಗೆಮ್ಮ ಮೈಸೂರಿನೊಳ್ ಸಕಲ |
ಚಿಂತಿತಾರ್ಥಮನನುಗ್ರಹಿಪ ಚಾಮುಂಡಾಂಬೆಯೊಲ್ಮೆಯಿಂ ಯುದ್ಧಭಯವು ||
ಶಾಂತಿಸಲಿ ಸಾರ್ವಭೌಮರ್ಗೆ ಜಯವಕ್ಕೆ ಭೂ |
ಕಾಂತವರಜಯಚಾಮರಾಜೇಂದ್ರರಾಪ್ತರಾ |
ಸಂತತಿಯನೊಡಗೂಡಿ ಪಲಕಾಲವಿಳೆಯನಾಳಲಿ ಸತ್ಯಧರ್ಮರತರು ||೬||

ಆಸ್ಥಾನ ಪಂಡಿತ ನಂಜನಗೂಡು ಶ್ರೀಕಂಠಶಾಸ್ತ್ರಿಕೃತ.

॥ ಶ್ರೀ: ॥

(ಸ್ವಾಗತಾಧ್ಯಕ್ಷರಾದ ರಿ॥ ಎಕ್ಸೈಜ್ ಕಮೀಷನರ್

ಶ್ರೀಯುತ ಅಂಬ್ಲೆ ಸುಬ್ರಹ್ಮಣ್ಯಯ್ಯರ್ ಬಿ.ಎ. ರವರಿಂದ)

# ಸ್ವಾಗತಭಾಷಣ.

---

ಶ್ರೀಮಾನ್ ಗುಂಡಪ್ಪಗೌಡರೇ, ವೇ॥ ಬ್ರಂ॥ ಶ್ರೀ॥ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳೇ, ಪ್ರತಿನಿಧಿಗಳೇ, ಮಾನ್ಯಆಹ್ವಾನಿತ ಮಹಿಳೆಯರೇ ಮತ್ತು ಮಹಾಶಯರೇ—

ನಿಖಿಲ ಕರ್ನಾಟಕದ 12 ನೆಯ ಆಯುರ್ವೇದ ಸಮ್ಮೇಳನವನ್ನು ಈ ವರ್ಷ ಈ ರಾಜಧಾನಿಯಲ್ಲಿ ನಡೆಸಲು ಆಹ್ವಾನಿಸಿ ಅದರೊಂದಿಗೇ ನಮ್ಮ ಸಂಸ್ಥಾನದ ಎಲ್ಲ ವೈದ್ಯರ ಪ್ರಥಮ ಸಮ್ಮೇಳನವನ್ನೂ ಸೇರಿಸಿ, ಈ ಎರಡು ಸಮಾರಂಭಗಳ ಸಂದರ್ಭದಲ್ಲಿ ತಮ್ಮಗಳನ್ನೆಲ್ಲಾ ಸ್ವಾಗತಿಸುವ ಸುಯೋಗವು ನಮ್ಮಪಾಲಿಗೆ ಬಂದದ್ದಕ್ಕಾಗಿ ಮೈಸೂರು ಜಿಲ್ಲೆಯ ಮತ್ತು ಪಟ್ಟಣದ ಪ್ರಮುಖರಿಂದ ಕೂಡಿದ ಈ ಸ್ವಾಗತಸಮಿತಿಯು ಪರಮಾನಂದಭರಿತವಾಗಿದೆ.

ಆದರೆ ಈಗ ವದಗಿರುವ ಈ ರಾಕ್ಷಸೀ ಘೋರಯುದ್ಧದ ಅಪಘಾತದಿಂದ ಬಳಲುತ್ತಿರುವ ನಾವುಗಳು ಇದೊಂದು ಕೇವಲ ಸಂತೋಷಸಮಾರಂಭಮಾತ್ರವೆಂಬ ದೃಷ್ಟಿಯಿಡಲಾರದವರಾದಾಗ್ಯೂ, ಮಾನವ ಗಣಕ್ಕೆ, ಅಪ್ಪೇಕೆ-ಪ್ರಾಣಿಮಾತ್ರಕ್ಕೇ ಸುಖಕ್ಕಿಂತಲೂ ಕಷ್ಟದ ಸ್ಥಿತಿಯಲ್ಲೆ ನಿರ್ಭಯದಿಂದ ಸಹಕಾರಿಯಾಗಿ ಎದೆಗೊಟ್ಟು ನಿಲ್ಲುವ ಈ ವೈದ್ಯವೃತ್ತಿಯ ಮತ್ತು ತದನುಯಾಯಿಗಳ ಪ್ರಗತಿ ಮಾರ್ಗಗಳನ್ನು ಕುರಿತು ಚಿಂತಿಸಬೇಕಾದದ್ದು ನಾಗರೀಕರಾದವರೆಲ್ಲರ ಕರ್ತವ್ಯವಾಗಿದೆಯಾದುದ ರಿಂದ, ಅದೇ ದೃಷ್ಟಿಯಿಂದಲೇ ಈ ಸಮ್ಮೇಳನಗಳನ್ನು ಕೂಡಿಸುವ ಸಾಹಸ ಮಾಡ ಬೇಕಾಯಿತು. ಇಂತಹ ಸಮ್ಮೇಳನಗಳನ್ನು ಹಿಂದೆ 1930 ರಲ್ಲಿ ಇದೇ ರಾಜಧಾನಿ ಯಲ್ಲಿ ರಾಜಾನುಗ್ರಹದಿಂದಲೂ, ಸರಕಾರದ ಸ್ಥಳೀಯ ಸಂಸ್ಥೆಗಳ, ಅಭಿಮಾನಿ ಮಹಾಜನರ ಮತ್ತು ಪ್ರಮುಖ ವೈದ್ಯರುಗಳ ಸಹಾಯದಿಂದ ಯಶಸ್ವಿಯಾಗಿ ಜರುಗಿ ಸಿದ ಧೈರ್ಯದಿಂದ ಪುನಃ ಇದೇ ಸಾಹಸದಲ್ಲಿ ತೊಡಗಿದೆವು.

ಕಾಲದ ಸ್ಥಿತಿಗತಿಗಳು ಮೊದಲು ಮೊದಲು ನಮ್ಮನ್ನು ಎಷ್ಟೋಮಟ್ಟಿಗೆ ನಿರಾಶರನ್ನಾಗಿ ಮಾಡಿದವಾದರೂ, ಹಿಂದಿನಂತೆಯೇ ಈ ಸಲವೂ ತಕ್ಕಮಟ್ಟಿಗೆ ದೊರೆತ ಪ್ರೋತ್ಸಾಹವು ನಮ್ಮನ್ನು ಈ ಕಾರ್ಯದಲ್ಲಿ ಪುನಃ ಹುರಿದುಂಬಿಸಿತು. ಪರಮ ಕರುಣಾಶಾಲಿಗಳಾದ ನಮ್ಮ ಮಹಾಪ್ರಭುಗಳ ಉದಾರ ಸಹಾಯವು ನಮ್ಮನ್ನು ಈ ಕಾರ್ಯಕ್ಕೆ ಧೈರ್ಯದಿಂದ ಇಳಿಸಿತು. ಇದರ ಜೊತೆಗೆ ಆರೋಗ್ಯಶಾಖಾಮಂತ್ರಿ ವರ್ಯರಾದ **ಶ್ರೀಯುತ ಎಚ್. ಬಿ. ಗುಂಡಪ್ಪಗೌಡರು** ಬಿ.ಎ.ಬಿ.ಎಲ್. ರವರು ಈ ಸಮ್ಮೇಳನಗಳ ಪ್ರಾರಂಭೋತ್ಸವವನ್ನು ಜರುಗಿಸಲು ಅಂಗೀಕರಿಸಿದ್ದು ನಮ್ಮನ್ನು ಉತ್ತೇಜನಗೊಳಿಸಿತು. ಪನವೇಲದ ಸುಪ್ರಸಿದ್ಧ ಧೂತಪಾಪೇಶ್ವರ ಔಷಧಾಲಯದ ಮಾಲೀಕರೂ ಪ್ರಭಾವಶಾಲಿಗಳೂ ಆದ **ಶ್ರೀ ಗಂಗಾಧರವಿಷ್ಣುಶಾಸ್ತ್ರೀ ಪುರಾಣಿಕ** ಮಹಾಶಯರು ಅಷ್ಟೊಂದು ದೂರದಿಂದ ಇಲ್ಲಿಗೆ ದಯಮಾಡಿಸಿ ಪ್ರದರ್ಶನೋದ್ಘಾಟನ ಮಾಡಲು ಅಂಗೀಕರಿಸಿದ್ದು ನಮ್ಮನ್ನು ನಮ್ಮ ಕರ್ತವ್ಯಗಳಲ್ಲಿ ಕಣ್ತೆರಿಸಿತು. ಆಯುರ್ವೇದ ಶಾಸ್ತ್ರವೇತ್ತರಾಗಿಯೂ, ಕರ್ಮದಕ್ಷರಾಗಿಯೂ ನಿಷ್ಕಾಮಿಗಳಾಗಿ ಆಯುರ್ವೇದ ಸೇವೆಮಾಡುತ್ತಿರುವ ಬಳ್ಳಾರಿಯ **ವೇ॥ ಬ್ರ॥ ಶ್ರೀ॥ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳು** ಮತ್ತು ನಮ್ಮ ಮೈಸೂರು ಸಂಸ್ಥಾನದಲ್ಲಿ ಸುಪ್ರಸಿದ್ಧ ವೈದ್ಯವೃದ್ಧರಾಗಿ ತಮ್ಮ ಆಯುಸ್ಸೆಲ್ಲವನ್ನೂ ಈ ಆಯುರ್ವೇದದ ಸೇವೆಗಾಗಿಯೇ ಶ್ರಮಿಸಿರುವ ಶ್ರೀಯುತ **ಭಿಷಗ್ರತ್ನ ಪಾಳ್ಯಂ ವೆಂಕಟಾಚಲಪಂಡಿತರವರು** ಈ ಸಮ್ಮೇಳನಗಳ ಅಧ್ಯಕ್ಷತೆಗಳನ್ನು ವಹಿಸಿದ್ದೂ, ಸುಪ್ರಸಿದ್ಧ ಆಯುರ್ವೇದ ವಿದ್ವನ್ಮಣಿಗಳಾದ ಶ್ರೀಯುತ ಆಯುರ್ವೇದ ವಿದ್ವಾನ್ ಗದಗಿನ **ಡಿ. ವಿ. ರಾಮರಾಯರು, ಆಯುರ್ವೇದ ಭೂಷಣ ಎಂ. ವಿ. ಶಾಸ್ತ್ರಿಗಳು** (ಮಂಗಳೂರು), ಮತ್ತು ಇನ್ನೂ ಅನೇಕ ಉಪನ್ಯಾಸಕರು, ಭಾಷಣಕಾರರು ಇವರುಗಳು ಆಯುರ್ವೇದದ ಮುಖ್ಯತಿರುಳಾದ ಶಾಸ್ತ್ರವಿಚಾರಕ ಪರಿಷತ್ತುಗಳ ಅಧ್ಯಕ್ಷತೆ ಮತ್ತು ಕಾರ್ಯನಿರ್ವಾಹಗಳಿಗೆ ಅಣಿಯಾದುದೂ ಸಹ ನಮ್ಮನ್ನು ನಮ್ಮ ಉದ್ದೇಶಗಳಲ್ಲಿ ಕೃತಕೃತ್ಯರನ್ನಾಗಿ ಮಾಡಿದವು.

ಸ್ಥಳದಲ್ಲಿನ ಪ್ರಸಿದ್ಧ ವೈದ್ಯರುಗಳ ಅಭಿಮಾನಯುತ ಸಹಕಾರವೂ, ಇತರ ಜಿಲ್ಲಾಗಳಿಂದಲೂ ಪ್ರಾಂತಗಳಿಂದಲೂ ತಮ್ಮ ದೇಹಶ್ರಮವನ್ನೂ ಕಷ್ಟನಷ್ಟಗಳನ್ನೂ ತೃಣೀಕರಿಸಿ ಈ ಸಮಾರಂಭವನ್ನು ಒಂದು **ಆಯುರ್ವೇದ ಸೇವಾ ಮಂದಿರವೆಂಬ** ಮಟ್ಟಿನ ಪೂಜ್ಯತಾ ಮತ್ತು ಕರ್ತವ್ಯತಾ ಭಾವನೆಗಳಿಂದ ತಂಡ ತಂಡವಾಗಿ ಬಂದು ಇಲ್ಲಿ ನೆರೆದಿರುವ ಸುಪ್ರಸಿದ್ಧ ವೃದ್ಧ ಹಾಗೂ ತರುಣ ವೈದ್ಯರ

ನೈಜವಾದ ಉತ್ಸಾಹವು ನಮ್ಮನ್ನು ಮುಗ್ಧರನ್ನಾಗಿ ಮಾಡಿಬಿಟ್ಟದೆ. ಇಂತಹ ಅಪೂರ್ವ ಸನ್ನಿವೇಶದಲ್ಲಿ ಸ್ವಾಗತಸಮಿತಿಯ ಪರವಾಗಿ ತಮ್ಮೆಲ್ಲರನ್ನೂ ಸ್ವಾಗತಿಸಿ ತಮ್ಮಗಳಿಗೆ ಸುಖಾಗಮನವನ್ನು ಕೋರುವ ಭಾಗ್ಯವು ನನಗೆ ವದಗಿದುದು ನನ್ನ ಪುಣ್ಯವೇ ಸರಿ. ನಾನು ಕಾರ‍್ಯತಃ ವೈದ್ಯನಲ್ಲದಿದ್ದರೂ, ರಾಜಮಾನ್ಯತೆಯನ್ನು ಪಡೆದಿದ್ದ ಸುಪ್ರಸಿದ್ಧ ವೈದ್ಯರುಗಳ ವಂಶಜನಾದುದೇ ಇಂತಹ ಸುಯೋಗವು ದೊರೆಯಲು ಕಾರಣವಾಗಿರಬಹುದು.

ಹಿಂದಿನ ಸಮ್ಮೇಳನಗಳ ಯಶಸ್ಸಿಗೆ ಕಾರಣರಾಗಿದ್ದ ನನ್ನ ಪೂಜ್ಯ ಪಿತೃವರ‍್ಯರಾದ ಲೋಕಸೇವಾನಿರತ ಅಂಬ್ಲೆ ಅಣ್ಣಯ್ಯ ಪಂಡಿತರು, ಲೋಕಹಿತೈಷಿ ಎಚ್. ನಂಜುಂಡರಾಜೇ ಅರಸಿನವರು, ವೈದ್ಯರತ್ನ ಗುಂಡ್ಲು ಪಂಡಿತ ಲಕ್ಷ್ಮಣಾಚಾರ‍್ಯರು, ದಾನಶೂರರಾಗಿದ್ದ ಧರ್ಮಪ್ರಕಾಶ ಸಾಹುಕಾರ್ ಡಿ. ಬನುಮಯ್ಯನವರು ಮುಂತಾದ ಹಿರಿಯರು ಈ ಸಂದರ್ಭದಲ್ಲಿ ನಮ್ಮ ಕಣ್ಮರೆಯಾಗಿರುವುದು ನಮ್ಮ ದೌರ್ಭಾಗ್ಯ. ಮೇಲಾಗಿ ಈಗ ವದಗಿರುವ ಈ ಕರಾಳ ಯುದ್ಧದಲ್ಲಿ ನಮ್ಮೆಲ್ಲರ ತನುಮನಗಳೆಲ್ಲವೂ ಲೀನವಾಗಿರುವುದರಿಂದ ಇಂತಹ ಮಹತ್ಕಾರ‍್ಯಗಳಲ್ಲಿ ಏಕ ಮುಖವಾಗಿ ಗಮನ ಕೊಡಲಾಗದಿರುವುದು ಮತ್ತೊಂದು ದೊಡ್ಡ ಅನಾನುಕೂಲ. ಅಲ್ಲದೆ ಈ ಸಮ್ಮೇಳನಗಳು ಮೊದಲು ನಂದಿಯಲ್ಲಿ ನಡೆಯಬೇಕೆಂದು ಏರ್ಪಾಡಾಗಿದ್ದು, ನಂತರ ಕಾಲೋಚಿತವಾದ ಆಲೋಚನೆಗನುಸಾರವಾಗಿ ಈ ರಾಜಧಾನಿಯಲ್ಲಿ ಪ್ರಾರಂಭವಾದದ್ದು ಕೂಡ ಕೇವಲ ಈಗ 2-3 ತಿಂಗಳಿಂದೀಚಿನ ಕಾಲದಲ್ಲಿ. ಈ ಕಾರಣಗಳಿಂದ, ಅತಿಥಿಗಳ ಆದರಣೆಯಲ್ಲಿ ಹೆಸರು ಪಡೆದಿರುವ ಈ ಮೈಸೂರಿನ ಗೌರವಕ್ಕೆ ತಕ್ಕಂತಹ ಸೌಕರ‍್ಯಗಳನ್ನು ತಮ್ಮಗಳಿಗೆ ವದಗಿಸಿಕೊಡಲು ನಾವು ಪೂರ್ಣ ಶಕ್ತರಾಗದೆ ಇದ್ದಾಗ್ಯೂ, ನಮ್ಮ ಆದರದಲ್ಲಿ ಮಾತ್ರ ಏನೇನೂ ಕೊರತೆಯಿಲ್ಲವೆಂಬುದನ್ನು ವಿಜ್ಞಾಪಿಸದಿರಲಾರೆನು.

(City of gardens) ಉದ್ಯಾನಗಳ ಪಟ್ಟಣವೆಂದು ಪ್ರಸಿದ್ಧವಾಗಿರುವ ಈ ಸುಂದರ ರಾಜಧಾನಿಯನ್ನೊಳಗೊಂಡಿರುವ ಈ ಮೈಸೂರು ಸಂಸ್ಥಾನವು ಶ್ರೀ ಚಾಮುಂಡಾಂಬೆಯ ಪರಮಾನುಗ್ರಹಕ್ಕೆ ಪಾತ್ರರಾಗಿರುವ ಸಚ್ಚರಿತ್ರರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ವಡೆಯರ್ ಬಹದ್ದೂರ್‌ರವರ ಆಳ್ವಿಕೆಯಲ್ಲಿ ಸರ್ವತೋಮುಖವಾಗಿ ಅಭಿವೃದ್ಧಿಗೊಳ್ಳುತ್ತಾ ಇರುವಲ್ಲಿ, ದೇಶೀಯ ವೈದ್ಯದ ಕಡೆಗೂ ಪ್ರೋತ್ಸಾಹವು ದೊರೆಯುತ್ತಿದೆಯೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದಾಗಿದೆ. ಆಯುರ್ವೇದವು ಅನೇಕ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಕಷ್ಟ

ನಷ್ಟಗಳಿಗೆ ಗುರಿಯಾಗಿ ಭರತಖಂಡದಲ್ಲೆಲ್ಲಾ ಅಳಿದುಹೋಗುವ ರೀತಿಯಲ್ಲಿ ತೋರುತ್ತಿದ್ದಾಗ್ಯೆ, ಅತ್ಯಾದರದಿಂದ ಆಶ್ರಯಕೊಟ್ಟು ಅದರ ಹಿರಿಮೆಯನ್ನು ಕಾಯುತ್ತಿದ್ದವರು ಕರ್ಣಾಟಕ ದೇಶದ ರಾಜಮನೆತನದವರೇ ಎಂದರೂ ಅಡ್ಡಿಯಿಲ್ಲ. ಅನೇಕ ವೈದ್ಯಗ್ರಂಥಗಳ ರಚನೆಯನ್ನು ಸಹಾ ಸ್ವಂತವಾಗಿ ಮಾಡಿ ಮತ್ತು ಮಾಡಿಸಿ ಆಯುರ್ವೇದದಲ್ಲಿ ತಮ್ಮ ಅಮೋಘವಾದ ಆದರ ವಿಶ್ವಾಸಗಳನ್ನು ತೋರಿಸಿದವರಿವರು. ಇತರ ಸಂಸ್ಥಾನೀಕರು ಮತ್ತು ನಿಖಿಲ ಭಾರತದ ಸುಪ್ರಸಿದ್ಧ ವೈದ್ಯ ವಿದ್ವಾಂಸರುಗಳು ಜಾಗೃತಿಗೊಳ್ಳುವುದಕ್ಕಿಂತಲೂ ಎಷ್ಟೋ ಪೂರ್ವ ಅಂದರೆ ಈಗ್ಯೆ 50-60 ವರ್ಷಗಳ ಹಿಂದಿನಿಂದಲೂ ರಾಜಕೀಯ ಆಯುರ್ವೇದ ಪಾಠಶಾಲೆಯ ಮೂಲಕ ಅನೇಕ ಪ್ರಸಿದ್ಧ ವೈದ್ಯರನ್ನು ಶಾಸ್ತ್ರಜ್ಞರನ್ನಾಗಿಯೂ ಕರ್ಮದಕ್ಷರನ್ನಾಗಿಯೂ ತಯಾರಿಸುತ್ತಲೇ ಇದಾರೆ. ಮದರಾಸಿನಲ್ಲಿ ಆಯುರ್ವೇದಕ್ಕುಂಟಾದ ರಾಜಕೀಯ ಪುರಸ್ಕಾರಕ್ಕೆ ಮೂಲಕಾರಣರಾದ ದಿವಂಗತ **ವೈದ್ಯರತ್ನ ಪಂಡಿತ ಡಿ. ಗೋಪಾಲಾಚಾರ್ಯರವರು** ಮೈಸೂರಿನ ಪಾಠಶಾಲೆಯಿಂದ ಶಿಕ್ಷಿತರಾದವರೆಂದರೆ ನಿಮ್ಮಲ್ಲನೇಕರು ಆಶ್ಚರ್ಯಪಡಬಹುದು. ಅಲ್ಲಿಂದೀಚೆಗೆ ಈಗ್ಯೆ 32 ವರ್ಷಗಳ ಹಿಂದೆ ಆಧುನಿಕ ವ್ಯವಸ್ಥೆಗೆ ತಕ್ಕಂತೆ ಸುಸಂಸ್ಕೃತವಾದ ಸರ್ವಾಂಗಸುಂದರವಾದ ರಾಜಕೀಯ ಆಯುರ್ವೇದ ಮತ್ತು ಯುನಾನಿ ಮಹಾಪಾಠಶಾಲೆಯನ್ನು ಸ್ಥಾಪಿಸಿ ಅಲ್ಲಿ ತಯಾರಾದ ನೂರಾರು ವೈದ್ಯಶ್ರೇಷ್ಠರನ್ನು ಇಡೀ ಕರ್ಣಾಟಕದ ನಾನಾ ಪ್ರದೇಶಗಳಿಗೆಲ್ಲಾ ಹಂಚಿರುವರೆಂಬುದು ನಮಗೆಲ್ಲಾ ಸಂತೋಷದ ಸಂಗತಿ. ಇಷ್ಟೇ ಅಲ್ಲದೆ ಸುಪ್ರಸಿದ್ಧ ಚರಿತ್ರಾರ್ಹರಾದ ಗಂಗ, ಹೌಸಲ, ಬಳ್ಳಾಳ, ವಿಜಯನಗರದ ರಾಜರುಗಳ ಅದ್ಭುತ ಪರಾಕ್ರಮಕ್ಕೂ ದೈವಭಕ್ತಿಗೂ ಕಲಾಸೇವೆಗೂ ನೆಲೆಬೀಡಾಗಿ ಕರ್ಣಾಟಕದಲ್ಲೆಲ್ಲಾ ಪ್ರಸಿದ್ಧವಾದ ಪುರಾತನ ದೇಶವಿದು. ಮತತ್ರಯಾಚಾರ್ಯರುಗಳಾದ ಶ್ರೀಶಂಕರ, ಮಧ್ವ, ರಾಮಾನುಜರೂ, ಜೈನ ವೀರಶೈವ ಗುರುಗಳೂ ತಮ್ಮ ತಮ್ಮ ಆಧ್ಯಾತ್ಮಿಕ ಸಂಪತ್ತಿನ ಮಹಿಮೆಯಿಂದ ಸಹಸ್ರಶಃ ಶಿಷ್ಯವರ್ಗವನ್ನು ಪಡೆದು ತಮ್ಮ ತಮ್ಮ ನೆಲೆಗಳನ್ನು ಸ್ಥಾಪಿಸಿಕೊಂಡದ್ದು ಈ ದೇಶದಲ್ಲಿ. ಪುರಾತನವಾದ ವೇದವೇದಾಂಗ ಶಾಸ್ತ್ರಗಳನ್ನೆಲ್ಲಾ ಅಳಿಯದಂತೆ ಕಾಪಾಡಿಕೊಂಡು ಬರುತ್ತಿರುವುದಲ್ಲದೆ ಆಧುನಿಕ ವೈಜ್ಞಾನಿಕ ಮಾರ್ಗಗಳಲ್ಲೂ ಪೂರ್ಣ ಪರಿಶ್ರಮಗಳನ್ನು ಪಡೆದು, ಹರಿದುಹೋಗುತ್ತಿರುವ ನೀರನ್ನೂ ಹುದುಗಿಕೊಂಡಿರುವ ಅಪಾರವಾದ ಖನಿಜಸಂಪತ್ತನ್ನೂ ತಮ್ಮ ಹತೋಟಿಗೆ ತೆಗೆದುಕೊಂಡು ಪ್ರಜಾಕೋಟಿಯ ಸುಖಸಾಧನಗಳನ್ನು ಕಲ್ಪಿಸಿಕೊಡುತ್ತಿರುವ ಚಿನ್ನದ ನಾಡಿದು ಮೈಸೂರು. ಇಲ್ಲಿಲ್ಲದ ನಾಗರಿಕತೆಯಿಲ್ಲ, ಕಲಾಕೌಶಲ್ಯ

ವಿಲ್ಲ, ಜ್ಞಾನ ವಿಜ್ಞಾನಗಳಿಲ್ಲ ಎಂಬದಾಗಿ ಪ್ರಸಿದ್ಧರಾದ ಪರಕೀಯರಿಂದಲೂ ಹೊಗಳಿಸಿಕೊಳ್ಳುವ ಪುಣ್ಯಪಡೆದಿರುವ ದೇಶವಿದು. ಇಲ್ಲಿ ಇಂದು ನಾವೆಲ್ಲರೂ ತಮ್ಮ ಜೊತೆಯಲ್ಲಿ ಸೇರಿ ಆನಂದಿಸುವುದು ಸುಯೋಗವೇಸರಿ. ಆದರೆ ಇಂತಹ ಸನ್ನಿವೇಶಕ್ಕೆ ತಕ್ಕಷ್ಟು ಉತ್ಕರ್ಷತೆಯು ನಮ್ಮ ಆಯುರ್ವೇದ ಶಾಸ್ತ್ರಕ್ಕೂ ಬಂದಿದೆಯೆ ಎಂದು ಪ್ರಶ್ನಿಸುವವರಿಗೆ ಸಮಾಧಾನಕರವಾದಷ್ಟು ಉತ್ತರವನ್ನು ಹೇಳಲು ಮಾತ್ರ ಹಿಂಜರಿಯದೆ ವಿಧಿಯಿಲ್ಲ. ಇದಕ್ಕೆ ವಿದ್ಯಾವಂತರಾಗಿಯೂ, ವ್ಯವಹಾರ ಕುಶಲರಾಗಿಯೂ, ಆಢ್ಯರಾಗಿಯೂ ಇರತಕ್ಕ ನಾಗರೀಕರ ಅನಾದರವೂ, ಆಯುರ್ವೇದಾನುಯಾಯಿ ವೈದ್ಯರಲ್ಲನೇಕರ ಅನೈಕಮತ್ಯ, ಅವಜ್ಞತೆ, ಅಶ್ರದ್ಧೆಗಳೂ ಕಾರಣಗಳೆಂದರೂ ತಪ್ಪಾಗಲಾರದು. ಆಯುರ್ವೇದ ಚಿಕಿತ್ಸೆಯಿಂದಲೇ ಸ್ವತಃ ಪ್ರಯೋಜನ ಪಡೆಯುತ್ತಿದ್ದರೂ, ಅದನ್ನು ಬಹಿರಂಗವಾಗಿ ಪುರಸ್ಕರಿಸುವುದು ತಮ್ಮ ಮರ್ಯಾದೆಗೂ ಘನತೆಗೂ ತಕ್ಕದ್ದಲ್ಲವೆಂದೆಣಿಸುವ ಮನೋದೌರ್ಬಲ್ಯವುಳ್ಳವರು ಎಲ್ಲ ಕಡೆಯಲ್ಲೂ ಇರುವಂತೆ ಇಲ್ಲಿಯೂ ಕಮ್ಮಿಯಿಲ್ಲವಾಗಿ ಅಂತವರಿಂದ ಬೆಂಬಲ ಬರುವುದು ಕಡಿಮೆ.

ಪ್ರಜೋಪಕಾರಿ ಕಾರ್ಯಗಳಿಗೂ ಪಾಶ್ಚಾತ್ಯ ವೈದ್ಯಸಹಾಯಕ್ಕೂ ಲಕ್ಷಗಟ್ಟಲೆಯಾಗಿ ದಾನಮಾಡಿ ಹೆಸರುಪಡೆದ ಧನಾಢ್ಯರೂ, ಪ್ರಶಂಸಾಕಾಂಕ್ಷಿಗಳೂ ಈ ದೇಶದಲ್ಲಿ ಕಮ್ಮಿಯಿಲ್ಲ. ಆದರೆ ಈ ಬಡ ಆಯುರ್ವೇದದ ವೃದ್ಧಿಗಾಗಿ ಯಥಾಶಕ್ತಿ ಸಹಾಯಮಾಡಿರುವವರು **ಶ್ರೀ ಗುಂಡ್ಲುಪಂಡಿತ ಲಕ್ಷ್ಮಣಾಚಾರ್ಯರು, ಶ್ರೀ ಅಣ್ಣಯ್ಯ ಪಂಡಿತರು, ಶ್ರೀ ಬಸುಮಯ್ಯನವರು ಮತ್ತು ಡಾ॥ ಸಿದ್ದಪ್ಪನವರು ಹೊರ್ತಾಗಿ** ಹೆಚ್ಚಿನ ಹೆಸರುಗಳನ್ನು ಜ್ಞಾಪಿಸಿಕೊಳ್ಳುವುದೇ ಕಷ್ಟವಾಗಿದೆ. ಈ ದೇಶದ ಸಂದಿಮೂಲೆಗಳಲ್ಲೆಲ್ಲಾ ಬೇಕಾದಷ್ಟು ಧರ್ಮಗಳು ಜರುಗಿವೆ; ನಿತ್ಯವೂ ಜರುಗುತ್ತಲೂ ಇವೆ; ಆದರೆ ಆಯುರ್ವೇದಕ್ಕೆ ಮಾತ್ರ ಎಲ್ಲಿಯೂ ಹೆಚ್ಚಾಗಿ ಕೇಳಬಂದಿಲ್ಲ.

ಹೀಗೆಂದ ಮಾತ್ರಕ್ಕೇ ಈ ದೇಶದಲ್ಲಿ ಪ್ರಸಿದ್ಧರಾಗಿ, ಕಾರ್ಯದಕ್ಷರೂ ಶಾಸ್ತ್ರಜ್ಞರೂ ಆದ ವೈದ್ಯರಿಲ್ಲವೆಂದಲ್ಲ. ಅವರಿಂದ ಪ್ರಜಾವರ್ಗಕ್ಕೆ ಸೇವೆ ನಡೆಯುತ್ತಿಲ್ಲವೆಂದಲ್ಲ. ಸಾಮಾನ್ಯವಾಗಿ ಮುಕ್ಕಾಲುಪಾಲು ಪ್ರಜೆಯ, ಅದರಲ್ಲೂ ಮೂಲೆಮುಟ್ಟಾಗಿರುವ ಪ್ರಜೆಯ ಆರೋಗ್ಯ ರಕ್ಷಣೆಯ ಭಾರವೇ ಇವರುಗಳ ಮೇಲೆ ಬಿದ್ದಿದೆ. ಆದರೇನು, ಇವರುಗಳು ತಮ್ಮ ತಮ್ಮಲ್ಲಿ ಐಕಮತ್ಯವನ್ನು ವೃದ್ಧಿಪಡಿಸಿಕೊಂಡು ತಮ್ಮ ಜ್ಞಾನವೃದ್ಧಿಗೂ ತಮ್ಮ ತಮ್ಮ ಸ್ಥಾನ ಮಾನಗಳ ರಕ್ಷಣೆಗೂ ತಕ್ಕ

ಪ್ರಯತ್ನಗಳನ್ನು ಮಾಡಿಕೊಳ್ಳಲು ಅನಾದರ ಮಾಡಿಬಿಟ್ಟಿರುವುದೇ ಇಷ್ಟಕ್ಕೆಲ್ಲಾ ಕಾರಣವಾಗಿರಬಹುದೆಂದರೆ ಮಾನ್ಯ ವೈದ್ಯರಾದ ತಾವುಗಳು ಮನ್ನಿಸುವಿರೆಂದು ನಂಬುತ್ತೇನೆ.

ಈಗೀಗ ಎಲ್ಲಕಡೆಯಲ್ಲಿಯೂ ವೈದ್ಯರಲ್ಲಿ ಜಾಗೃತಿಯುಂಟಾಗುತ್ತಿರುವುದು ಸಂತೋಷದ ಸಂಗತಿ. ಅದರಂತೆಯೇ ನಮ್ಮ ದೇಶದಲ್ಲೂ ಮುಖ್ಯವಾಗಿ ಇಡೀ ಕರ್ಣಾಟಕದಲ್ಲೂ ಆಗಿ ಈ ರೀತಿಯಾದ ಸಮ್ಮೇಳನ ನೆರೆದು ಅಲ್ಲಿ ಅನೇಕ ವಿಚಾರ ಗಳನ್ನು ಚರ್ಚಿಸಿ ನಿರ್ಧರಿಸುವುದಕ್ಕೂ, ಜ್ಞಾನಾರ್ಜನೆಗೂ, ಕಲಾನೈಪುಣ್ಯಸಾಧನೆಗೂ ನೆರವಾಗುವಂತೆ ಏರ್ಪಡಿಸುತ್ತಿರುವುದು ಅಭಿವೃದ್ಧಿಯ ಕುರುಹು ಎಂಬುದು ಖಂಡಿತ.

ಈ ಇಡೀ ಕರ್ಣಾಟಕವೆಂಬುದು ಮೈಸೂರು ಸಂಸ್ಥಾನದ ಜೊತೆಗೆ ಈಗ್ಯೆ ರಾಜಕಾರಣಗಳಿಗಾಗಿ ಬೊಂಬಾಯಿ, ಮದರಾಸು, ಹೈದರಾಬಾದು ಮುಂತಾದ ಸರ್ಕಾರಗಳಿಗೆ ಸೇರಿದ ಭಾಗಗಳನ್ನುಳ್ಳದ್ದಾಗಿದೆ. ಮಿಕ್ಕ ಸರ್ಕಾರಗಳಲ್ಲೆಲ್ಲಾ ಈಗಾಗಲೆ ವೈದ್ಯ ವೃತ್ತಿಯಲ್ಲಿರತಕ್ಕವರಿಗೆ ಒಂದು ಹತೋಟಿಯ ಕ್ರಮವು ಜಾರಿ ಯಲ್ಲಿರತಕ್ಕದ್ದು ವೈದ್ಯರ ಅಭಿವೃದ್ಧಿಗೆ ಶ್ರೇಯಸ್ಕರವೆ. ಅದೇ ತರಹದ ಹತೋಟಿಯೂ ತದ್ವಾರಾ ಅರ್ಹರಾದ ವೈದ್ಯರಿಗೆ ಪ್ರಾಶಸ್ತ್ಯವೂ ಸಹ ಈ ಮೈಸೂರು ದೇಶದಲ್ಲೂ ಜಾರಿಗೆ ಬರಬೇಕಾದದ್ದೂ ಯುಕ್ತವೆ. ಕ್ಷಿಪ್ರದಲ್ಲೆ ಬರಬಹುದಾದ ಲಕ್ಷಣಗಳೂ ಕಾಣಬರುತ್ತಿವೆ. ಆದರೆ ಅಂತಹ ಹತೋಟಿಯಿಂದ, ಬಹು ದಿನದಿಂದ ಅನುಭವಿ ಗಳಾಗಿ ಪ್ರಜಾಸೇವೆಮಾಡುತ್ತಿರುವ ಹಳೆಯ ವೈದ್ಯರಿಗೂ, ಒಂದೊಂದೇ ಮೂಲಿಕೆ ಗಳಿಂದ ಎಷ್ಟೋ ಮಹಾವ್ಯಾಧಿಗಳನ್ನು ಗುಣಪಡಿಸುವ ಅನಕ್ಷರಸ್ಥರಾದ ಅನುಭವ ಶಾಲಿಗಳಿಗೂ ಅನ್ಯಾಯವಾಗದಂತೆಯೂ, ಮುಂದೆ ಅವಿದ್ಯಾವಂತರಾದ ಕುಹುಕಿ ವೈದ್ಯರು ಹೆಚ್ಚಬಾರದಾದರೂ ಇದುವರೆಗೆ ಜನತಾ ಸೇವೆಮಾಡುತ್ತಿರುವ ಯಾರೊ ಬ್ಬರಿಗೂ ಬಾಧಕವಾಗದಂತೆಯೂ ತಮ್ಮ ತಮ್ಮ ಸ್ಥಾನಮಾನಗಳ ರಕ್ಷಣೆ ಮಾಡಿ ಕೊಳ್ಳುವುದು ಹೇಗೆ ಎಂಬೀಮುಂತಾದ ಗಹನ ವಿಚಾರಗಳನ್ನೆಲ್ಲಾ ನಿರ್ಧರಿಸಲು ಈಗ ಒಳ್ಳೆಯ ಅವಕಾಶವಿದೆ. ಧನಸಂಗ್ರಹದ ಆಸೆಯಿಂದ ಗಾಂಧರ್ವ ಲೋಕಸ್ಥ ವಾದ ದೊಡ್ಡ ದೊಡ್ಡ ಆಯುರ್ವೇದ ಸಂಸ್ಥೆಗಳ ಹೆಸರಿಟ್ಟುಕೊಂಡು ಕೆಲವರು ಆಯುರ್ವೇದ–ದ್ರೋಹಿಗಳು ತಿರುಳಿಲ್ಲದ ಪ್ರಶಸ್ತಿಪತ್ರಗಳ ವಿಕ್ರಯದಿಂದ ತಿಳಿಯದ ವೈದ್ಯರಿಗೆ ಪ್ರಶಸ್ತಿಗಳ ಮರುಳುಹಿಡಿಸುತ್ತಿರುವುದೂ, ಆ ಪ್ರಶಸ್ತಿಗಳ ನೆಪದಿಂದ ಅಜ್ಞರಾದ ರೋಗಿಗಳಿಗೆ ವಂಚನೆಯಾಗುತ್ತಿರುವುದೂ ಈಚೀಚೆಗೆ ಅತಿಯಾಗಿ ಪ್ರಜಾನೆಮ್ಮದಿಗೂ ಸದ್ವೈದ್ಯರ ಕೀರ್ತಿಗೂ ಸಂಚಕಾರ ಬರುವಂತಾಗುತ್ತಿದೆ.

ಇಂತಹವು ಸರ್ಕಾರದ ಕಾಯಿದೆಯಿಂದ ನಿಂತುಹೋಗುವವರೆಗೂ ಆತ್ಮ ವಿಶ್ವಾಸವುಳ್ಳ ಕಾರ್ಯದಕ್ಷನಾದ ಯಾವ ವೈದ್ಯನೂ ಇಂತಹ ಬೇಳ್ವಿಗೆ ಮರುಳಾಗ ದಿರುವಂತೆ ಮಾಡುವುದೂ ನಿಮ್ಮಗಳ ಕ್ಷೇಮಕ್ಕೆ ಅತ್ಯಗತ್ಯವು.

ಆಯುರ್ವೇದ ಪಾರಂಗತರಾದ—ಮೇಲಾಗಿ ಎಷ್ಟೋ ಕಾಲಗಳಿಂದ ಅದರ ಕಷ್ಟ ಸುಖಗಳ ಅನುಭವಿಗಳಾದ—ತಮ್ಮಗಳ ಮುಂದೆ ಇಂತಹ ಸೂಚನೆಗಳನ್ನಾ ಗಲಿ ಆಯುರ್ವೇದದ ಪ್ರಶಂಸೆಯನ್ನಾಗಲಿ, ಅದರ ಉತ್ಕರ್ಷಾಪಕರ್ಷಗಳ ಕಾರಣ ಗಳನ್ನಾಗಲಿ ನಾನು ವಿಮರ್ಶಿಸಲು ಪ್ರಯತ್ನಿಸಿ ತಮ್ಮ ಅಮೌಲ್ಯವಾದ ಕಾಲವನ್ನು ವ್ಯರ್ಥಪಡಿಸುವುದಾದರೆ ಅದೆಂದಿಗೂ ನನ್ನ ಜಾಣತನವಾಗಲಾರದು. ಮುಖ್ಯವಾಗಿ ಬೇರೆ ಬೇರೆ ದೂರದೇಶದ ವೈದ್ಯಮಹಾಶಯರೆಲ್ಲರೂ ನೆರೆದಿರುವ ಈ ಸುಸಮಯ ದಲ್ಲಿ ತಮ್ಮ ತಮ್ಮಲ್ಲಿ ಕೃತಕವಾದ ಏನೇ ಅಂತಸ್ತುಗಳಿರಲಿ, ಭಿನ್ನಾಭಿಪ್ರಾಯ ಗಳಿರಲಿ, ಅವುಗಳೆಲ್ಲವನ್ನೂ ಸಾಮರಸ್ಯದಿಂದ ಸರಿದೂಗಿಸಿಕೊಂಡು ಭ್ರಾತೃಭಾವ ದಿಂದ ತಾವೆಲ್ಲರೂ ಒಂದೇ ಸಭೆಯಲ್ಲಿಸೇರಿ ಯಶಸ್ವಿಯಾಗಿ ಕಾರ್ಯನಿರ್ವಾಹಮಾಡಿ ಕೊಂಡದ್ದಾದರೆ ನಮ್ಮ ಪ್ರಯತ್ನವೂ ಶ್ರಮವೂ ಸಾರ್ಥಕವಾದಂತಾಯಿತೆಂದೂ, ಆಯುರ್ವೇದಕ್ಕೆ ತಮ್ಮ ಸೇವೆಯನ್ನು ಸಲ್ಲಿಸಿದಂತಾಯಿತೆಂದೂ ಸ್ವಾಗತಸಮಿತಿಯು ಭಾವಿಸುತ್ತದೆ. ಮತ್ತು ತಾವೆಲ್ಲರೂ ಅದೇರೀತಿಯ ಘನೋದ್ದೇಶಸಾಧನೆಗಾಗಿಯೇ ಇಷ್ಟೊಂದು ಶ್ರಮವಹಿಸಿ ಇಲ್ಲಿ ನೆರೆದಿರುವಿರೆಂದೂ ಸಂಪೂರ್ಣವಾಗಿ ನಂಬಿಕೆಯಿದೆ.

ತಮ್ಮ ಕಾರ್ಯಕಲಾಪಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆ—ನಮ್ಮ ಜನಪ್ರಿಯರಾದ ಮಂತ್ರಿವರ್ಯ ಶ್ರೀ ಹೆಚ್. ಬಿ. ಗುಂಡಪ್ಪಗೌಡರವರು ಸಮ್ಮೇ ಳನಗಳ ಪ್ರಾರಂಭೋತ್ಸವವನ್ನು ನಡೆಯಿಸಬೇಕೆಂತಲೂ ಶ್ರೀ ಗುರುಭಾಸ್ಕರಾ ಚಾರ್ಯರಾಮಚಂದ್ರಸ್ವಾಮಿಗಳವರು ನಿಖಿಲ ಕರ್ನಾಟಕದ 12 ನೆಯ ಸಮ್ಮೇ ಳನದ ಅಧ್ಯಕ್ಷತೆಯನ್ನೂ, ಶ್ರೀ ಭಿಷಗ್ರತ್ನ ಪಾಳ್ಯಂ ವೆಂಕಟಾಚಲಪಂಡಿತ ರವರು ಮೈಸೂರು ಸಂಸ್ಥಾನದ ಪ್ರಥಮ ವೈದ್ಯಸಮ್ಮೇಳನದ ಅಧ್ಯಕ್ಷತೆ ಯನ್ನೂ ವಹಿಸಿ ಕಾರ್ಯನಿರ್ವಾಹಮಾಡಬೇಕೆಂದು ಪ್ರಾರ್ಥಿಸುತ್ತೇನೆ. ತಮ್ಮೆಲ್ಲರಿಗೂ ಮತ್ತೊಮ್ಮೆ ಸುಖಾಗಮನವನ್ನು ಬಯಸುತ್ತೇನೆ.

ಇತಿ ತಮ್ಮ ವಿಶ್ವಾಸಪಾತ್ರ,

ಮೈಸೂರು
ತಾ|| 28-12-1941.

ಅಂಬ್ಲೆ ಸುಬ್ರಹ್ಮಣ್ಯ ಅಯ್ಯರ್,
ಸ್ವಾಗತಾಧ್ಯಕ್ಷ.

ನಿಖಿಲ ಕರ್ಣಾಟಕ ಆಯುರ್ವೇದ ಸಮ್ಮೇಳನದ ೧೨ನೇ ಅಧಿವೇಶನದ
ಮತ್ತು ಮೈಸೂರು ಸಂಸ್ಥಾನದ ಆಯುರ್ವೇದ ಸಮ್ಮೇಳನದ
ಪ್ರಥಮ ಅಧಿವೇಶನದ ಪ್ರಾರಂಭೋತ್ಸವವನ್ನು
ಮೈಸೂರಿನಲ್ಲಿ ನೆರವೇರಿಸುತ್ತಾ

ಆರೋಗ್ಯ ಮತ್ತು ಸ್ಥಳೀಯ ಸಂಸ್ಥೆಗಳ ಶಾಖೆಯ ಸಚಿವರಾದ

# ಹೆಚ್. ಬಿ. ಗುಂಡಪ್ಪಗೌಡರು ಅಪ್ಪಣೆಕೊಡಿಸಿದ ಭಾಷಣ.

೧೯೪೭ನೇ ಡಿಸೆಂಬರ್ ೨೮ನೇ ತಾರೀಖು, ಭಾನುವಾರ.

---

ಸ್ವಾಗತ ಸಮಿತಿಯ ಅಧ್ಯಕ್ಷರೇ, ಮಹಿಳೆಯರೇ ಮತ್ತು ಮಹನೀಯರೇ,

ನಿಖಿಲ ಕರ್ಣಾಟಕ ಆಯುರ್ವೇದ ಸಮ್ಮೇಳನದ ೧೨ನೇ ಅಧಿವೇಶನದ ಮತ್ತು ಮೈಸೂರು ಸಂಸ್ಥಾನದ ಆಯುರ್ವೇದ ಸಮ್ಮೇಳನದ ಪ್ರಥಮ ಅಧಿವೇಶನದ ಪ್ರಾರಂಭೋತ್ಸವವನ್ನು ನೆರವೇರಿಸಲು ನನಗೆ ಅವಕಾಶವನ್ನು ದೊರಕಿಸಿಕೊಟ್ಟುದಕ್ಕಾಗಿ ನಿಮ್ಮೆಲ್ಲರನ್ನೂ ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಈ ಸಮ್ಮೇಳನದಲ್ಲಿ ಭಾಗವಹಿಸಿ, ಆಯುರ್ವೇದದಲ್ಲಿ ನನಗಿರುವ ನಂಬಿಕೆಯನ್ನು ವ್ಯಕ್ತಪಡಿಸುವ ಸುಯೋಗವು ಲಭ್ಯವಾದುದಕ್ಕೆ ನನಗೆ ಬಹಳ ಸಂತೋಷವುಂಟಾಗಿದೆ. ನಿಖಿಲ ಕರ್ಣಾಟಕ ಆಯುರ್ವೇದ ಮಂಡಲವು ೧೯೩೪ ರಲ್ಲಿ ಸ್ಥಾಪಿತವಾಗಿ ಕಾರ್ಯರಂಗಕ್ಕಿಳಿದು, ಪ್ರಾಚೀನವಾದರೂ ಕಾರಣಾಂತರಗಳಿಂದ ಹೀನಸ್ಥಿತಿಗೆ ಇಳಿದಿರುವ ಆಯುರ್ವೇದಶಾಸ್ತ್ರವನ್ನುದ್ಧಾರಮಾಡಿ, ಜನರಿಗೆ ಅದರ ವಿಚಾರದಲ್ಲಿ ಹೆಚ್ಚು ಆದರಭಾವನೆಯುಂಟಾಗುವಂತೆ ಮಾಡುತ್ತಿರುವುದು ನಿಜವಾಗಿಯೂ ಸಂತೋಷಕರವಾದ ವಿಷಯ. ಆದರೆ ಈಗ ನಡೆದಿರುವ ಕೆಲಸವು ತೀರ ಸ್ವಲ್ಪವೆಂಬುದನ್ನೂ ಇನ್ನೂ ಹೆಚ್ಚಾದ ಕೆಲಸವನ್ನು ನಿರ್ವಹಿಸಿ ಆಯುರ್ವೇದದ ಮಹತ್ವವು ನಮ

ಜನರಿಗೆ ಗೊತ್ತಾಗುವಂತೆ ಮಾಡಬೇಕಾಗಿದೆಯೆಂಬುದನ್ನೂ ತಾವುಗಳು ಮರೆಯ ಲಾಗದು.

ಆಯುರ್ವೇದವೆಂದರೆ "ಅಕಾಲಮೃತ್ಯುವನ್ನು ಹರಿಸಿ, ಆಯುಸ್ಸನ್ನು ಕೊಡ ತಕ್ಕದ್ದು" ಎಂಬುದಾಗಿ ಪಂಡಿತರು ಅರ್ಥಮಾಡಿದ್ದಾರೆ. ಆಯುರ್ವೇದವು ಭಾರತ ವರ್ಷದಲ್ಲಿ ಪ್ರಾಚೀನಕಾಲದಿಂದಲೂ ಹೆಸರುವಾಸಿಯಾಗಿರುವ ಶಾಸ್ತ್ರ. ವೇದಗಳಂತೆ ಇದೂ ಕೂಡ ದೇವದತ್ತವಾದುದೆಂದು ನಮ್ಮ ಪೂರ್ವಜರು ಅಭಿಪ್ರಾಯಪಟ್ಟಿ ದ್ದಾರೆ. ಧನ್ವಂತರಿ, ಚರಕ, ರಸಾರ್ಣವ, ಸಿದ್ಧವಿದ್ಯಾ, ಶುಶ್ರುತ, ಮೊದಲಾದ ಮಹಾಮಹಿಮಾನ್ವಿತ ಪಂಡಿತರ ಹೆಸರುಗಳು ಇಂದೂ ಭಾರತಭೂಮಿಯಲ್ಲಿ ಮನೆ ಮಾತಾಗಿವೆ. ಇಷ್ಟು ಉನ್ನತಸ್ಥಿತಿಯಲ್ಲಿದ್ದು ಭಾರತೀಯರ ಕೀರ್ತಿಪ್ರತಿಷ್ಠೆಗಳನ್ನು ಹೆಚ್ಚಿಸಿದ್ದ ಈ ಶಾಸ್ತ್ರವು ಇಂದು ಖಿಲವಾಗಿರುವುದಕ್ಕಾಗಿ ವ್ಯಸನಪಡದೆ ಇರುವ ದೇಶಾಭಿಮಾನಿಯೊಬ್ಬರೂ ಇಲ್ಲವೆಂದೇ ನನ್ನ ನಂಬಿಕೆ. ಪಾಶ್ಚಾತ್ಯ ವೈದ್ಯಶಾಸ್ತ್ರದ ಆಘಾತಕ್ಕೆ ಸಿಕ್ಕಿ ಸರ್ಕಾರಗಳಿಂದಲೂ ಸಾರ್ವಜನಿಕರಿಂದಲೂ ಹೆಚ್ಚು ಪ್ರೋತ್ಸಾ ಹವು ದೊರೆಯದೆ ಇದ್ದ ಸಂದರ್ಭಗಳಲ್ಲಿಯೂ ಕೂಡ, ಈ ದೇಶೀಯ ವೈದ್ಯ ಶಾಸ್ತ್ರವು ತೀರ ನಾಶವಾಗದೆ ಯಥಾಶಕ್ತಿ ಸೇವೆ ಮಾಡುತ್ತಿರುವುದನ್ನು ನೋಡಿದರೆ, ಈ ವೈದ್ಯದ ಮಹತ್ವವೆಷ್ಟೆಂಬುದು ವ್ಯಕ್ತಪಡುವುದು. ಅದರಲ್ಲಿ ಎಷ್ಟು ಸತ್ವವಡಗಿದೆ ಯೆಂಬುದು ಗೋಚರವಾಗುವುದು.

ಇಷ್ಟು ಉನ್ನತಸ್ಥಿತಿಯಲ್ಲಿದ್ದ ಆಯುರ್ವೇದವು ಇಂದು ಸಾಕಾದಷ್ಟು ಪ್ರೋತ್ಸಾಹವಿಲ್ಲದೆ ಬೂದಿಮುಚ್ಚಿದ ಕೆಂಡದಂತೆ ಇರಲು ಕಾರಣಗಳೇನೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗಿದೆ. ಪಾಶ್ಚಿಮಾತ್ಯ ಚಿಕಿತ್ಸಾಪದ್ಧತಿಗಳಿಗೆ ನಮ್ಮ ದೇಶದಲ್ಲಿ ಹೆಚ್ಚು ಪ್ರೋತ್ಸಾಹವು ದೊರೆತು ಸರ್ಕಾರಗಳಿಗೂ, ಪ್ರಜಾವರ್ಗಕ್ಕೂ ಅದರಲ್ಲಿ ವ್ಯಾಮೋಹ ಹುಟ್ಟುತ್ತಾ ಬಂದುದು ಮೊದಲನೆಯ ಕಾರಣ. ಮಹಾ ಜನರೂ, ಸರ್ಕಾರದವರೂ ದೇಶೀಯ ವೈದ್ಯಚಿಕಿತ್ಸಾಕ್ರಮವನ್ನು ಉಪೇಕ್ಷೆಮಾಡುತ್ತಾ ಬಂದು ಅದಕ್ಕೆ ತಕ್ಕ ಪ್ರೋತ್ಸಾಹ ಕೊಡದೆ ಹೋದುದು ಎರಡನೆಯ ಕಾರಣ. ಪಾಶ್ಚಿಮಾತ್ಯ ದೇಶಗಳಲ್ಲಿ ವೈದ್ಯರು ವೈದ್ಯಶಾಸ್ತ್ರವು ಸರ್ವತೋಮುಖವಾಗಿ ಮುಂದು ವರಿಯಬೇಕೆಂಬ ವಿಶಾಲದೃಷ್ಟಿಯಿಂದ ಪರಿಶೋಧನೆಗಳನ್ನು ನಡೆಸಿ ಕಂಡುಹಿಡಿದ

ಹೊಸ ಹೊಸ ವಿಧಾನಗಳನ್ನು ಆಚರಣೆಗೆ ತರುತ್ತಿರುವಂತೆ, ನಮ್ಮ ವೈದ್ಯರು ಮಾಡದೆ, ತಮಗೆ ಗೊತ್ತಿದ್ದ ವಿಷಯಗಳನ್ನು ಗುಟ್ಟಾಗಿಟ್ಟುಕೊಂಡುಬರುತ್ತಾ ಬಂದುದು ಈ ವೈದ್ಯಶಾಸ್ತ್ರವು ಬೆಳೆಯುವುದಕ್ಕೆ ಅವಕಾಶವಿಲ್ಲದೆ ಕ್ಷೀಣಿಸುವುದಕ್ಕೆ ಕಾರಣವಾಯಿತು. ಜನರಲ್ಲಿ ಇದರ ಮೇಲಿದ್ದ ವಿಶ್ವಾಸವು ಕಡಿಮೆಯಾಗುತ್ತಾ ಬಂದಿತು. ವೈದ್ಯಚಿಕಿತ್ಸೆಗೆ ಸಂಬಂಧಪಟ್ಟ ಗ್ರಂಥಗಳು ದೊರೆಯುವುದೇ ಅಪರೂಪ ವಾಗಿದೆ. ಇದರಿಂದ ವೈದ್ಯಚಿಕಿತ್ಸಾ ಜ್ಞಾನವು ಬೆಳೆಯುವುದಕ್ಕೆ ಸಾಧ್ಯವಿಲ್ಲವಾಯಿತು. ಪರಂಪರಾಗತವಾಗಿ ಬಂದ ವೈದ್ಯವೃತ್ತಿಯನ್ನು ಅವಲಂಬಿಸಿದವರಲ್ಲನೇಕರು ವೈದ್ಯ ಶಾಸ್ತ್ರದ ಬೆಳವಣಿಗೆಗೆ ಸಾಧಕವಾದ ಪರಿಶೋಧನೆಗಳ ಕಡೆಗೆ ಹೆಚ್ಚು ಲಕ್ಷ್ಯ ಕೊಡದೆ ಕೇವಲ ಉದರಂಭರಣಕ್ಕಾಗಿ ಆ ವೃತ್ತಿಯನ್ನು ಅವಲಂಬಿಸುತ್ತಾ ಬಂದುದು ಕೂಡ ಈ ಶಾಸ್ತ್ರದ ಅವನತಿಗೆ ಒಂದು ಕಾರಣ. ಈ ಎಲ್ಲಾ ಕಾರಣಗಳಿಂದ, ಇಂದು ಆಯುರ್ವೇದವು ಕ್ಷೀಣಸ್ಥಿತಿಯಲ್ಲಿದ್ದರೂ ಇದು ತಲತಲಾಂತರದಿಂದ ನಮ್ಮ ಸಾಮಾನ್ಯ ಜನರಲ್ಲಿ ಹರಡಿ ರಕ್ತಗತವಾಗಿರುವುದರಿಂದ ಪೂರ್ತಿಯಾಗಿ ನಶಿಸಿ ಹೋಗುವುದಕ್ಕೆ ಅವಕಾಶವಾಗಲಿಲ್ಲ. ಇತ್ತೀಚೆಗೆ ಸ್ವದೇಶೀ ಭಾವನೆಯು ಜನರಲ್ಲಿ ಹರಡಿದುದರ ಪರಿಣಾಮವಾಗಿ ಆಯುರ್ವೇದಕ್ಕೆ ಮನ್ನಣೆಯೂ, ಪುರಸ್ಕಾರವೂ ದೊರೆಯುವುದಕ್ಕೆ ಅವಕಾಶವಾಯಿತು. ಪಾಶ್ಚಿಮಾತ್ಯ ವೈದ್ಯಚಿಕಿತ್ಸಾಕ್ರಮವನ್ನು ನಾವು ಅನುಸರಿಸುತ್ತಿರುವ ಮಾತ್ರದಿಂದಲೇ ತಲತಲಾಂತರದಿಂದ ಅನುಭವಸಿದ್ಧ ವಾಗಿ ಬಂದ ಆಯುರ್ವೇದವನ್ನು ಉಪೇಕ್ಷೆ ಮಾಡಬೇಕೆಂದು ಅರ್ಥವಲ್ಲ. ನಮ್ಮ ಪೂರ್ವಿಕರು ಕಷ್ಟಪಟ್ಟು ಗಳಿಸಿದ ಈ ಶಾಸ್ತ್ರದ ಅನುಭವಗಳನ್ನು ಈಗಿನ ಕಾಲಕ್ಕೆ ತಕ್ಕಂತೆ ಕ್ರೋಡೀಕರಿಸಿ ನಮ್ಮ ಆಯುರ್ವೇದವು ತನ್ನ ಗತವೈಭವವನ್ನು ಮತ್ತೆ ಗಳಿಸುವಂತೆ ಅವಕಾಶವಾಗಲೆಂದು ನನ್ನ ಅಭಿಲಾಷೆ.

ಆಯುರ್ವೇದವು ನಮ್ಮ ದೇಶದ ಸ್ಥಿತಿಗತಿ, ಮತಾಚಾರ ಸಂಪ್ರದಾಯ, ಹವಾಗುಣಗಳಿಗೆ ಅನುಗುಣವಾಗಿರುವ ಶಾಸ್ತ್ರ. ಗಿಡಮೂಲಿಕೆಗಳಿಂದ ತಯಾರಾ ಗುವ ಆಯುರ್ವೇದ ಔಷಧಿಗಳನ್ನು ಸುಲಭ ದರದಲ್ಲಿ ಬಡವರಿಗೂ ಬಲ್ಲಿದರಿಗೂ ದೊರಕಿಸಿಕೊಡಬಹುದು. 'ಅಲೋಪತಿಕ್' ಚಿಕಿತ್ಸಾಸೌಕರ್ಯಕ್ಕಾಗಿ ಸರ್ಕಾರದ ವರು ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡುತ್ತಿದ್ದರೂ ಎಲ್ಲರಿಗೂ ಸಾಕಾದಷ್ಟು

ಪ್ರಮಾಣದಲ್ಲಿ ಚಿಕಿತ್ಸಾ ಸೌಕರ್ಯಗಳು ದೊರೆಯುತ್ತಿಲ್ಲವೆಂಬ ಆಕ್ಷೇಪಣೆಗಳು ಕೇಳಿ ಬರುತ್ತಿವೆ. ಆ ಚಿಕಿತ್ಸಾ ಸೌಕರ್ಯಕ್ಕಾಗಿ, ಸರ್ಕಾರದಿಂದ ಒಬ್ಬರಿಗೆ ಸರಾಸರಿ ಎಂಟಾಣೆಯಂತೆ ವೆಚ್ಚವಾಗುತ್ತಿದೆ. ಆದರೆ ದೇಶೀಯ ವೈದ್ಯಚಿಕಿತ್ಸೆಗಾಗಿ ಒಬ್ಬರಿಗೆ ಸರಾಸರಿ ಆರು ಕಾಸಿಗಿಂತ ಹೆಚ್ಚು ಖರ್ಚಾಗಲಾರದು. ಹಳ್ಳಿಗಾಡುಗಳಲ್ಲಿ ವಾಸ ಮಾಡುವ ಲಕ್ಷಾಂತರ ಪ್ರಜೆಗಳು ದೇಶೀಯ ಔಷಧಿಗಳನ್ನೇ ಈಗಲೂ ಕೂಡ ಉಪ ಯೋಗಿಸುತ್ತಿದ್ದಾರೆ. ಘೋರ ಸಂಗ್ರಾಮವು ನಡೆಯುತ್ತಿರುವ ಈ ಸಮಯದಲ್ಲಂತು 'ಅಲೋಪತಿಕ್' ಔಷಧಿಗಳ ಬೆಲೆ ವಿಪರೀತವಾಗಿ ಏರಿ ಕೆಲವು ಸಂದರ್ಭಗಳಲ್ಲಿ ಅವುಗಳು ಸಿಗುವುದುಕೂಡ ಕಷ್ಟವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ದೇಶೀಯ ವೈದ್ಯರು ಮುಂದೆಬಂದು ತಮ್ಮ ಘನವೃತ್ತಿಯಿಂದ ಮಹಾಜನರ ಸೇವೆ ಸಲ್ಲಿಸಿ, ದೇಶೀಯವೈದ್ಯವೃತ್ತಿಗೆ ಹೆಚ್ಚು ಪ್ರೋತ್ಸಾಹವನ್ನು ದೊರಕಿಸಿಕೊಳ್ಳಬೇಕಾಗಿದೆ.

ಆಯುರ್ವೇದ ಪಂಡಿತರ ಮೇಲೆ ಇಂದು ಅಪಾರವಾದ ಜವಾಬ್ದಾರಿ ಬಿದ್ದಿದೆ. ಆಯುರ್ವೇದ ಶಾಸ್ತ್ರದ ಘನತೆಯನ್ನು ಹೆಚ್ಚಿಸಿ ಅದರ ಮೊದಲಿನ ಸ್ಥಾನವನ್ನು ಅದಕ್ಕೆ ಗಳಿಸಿಕೊಡುವುದರ ಜೊತೆಗೆ ತಮ್ಮ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳುವುದಕ್ಕೂ ಅವರು ಇಂದು ಬಹಳ ಕೆಲಸಮಾಡಬೇಕಾಗಿದೆ. ಅವರು ಆಯುರ್ವೇದ ಶಾಸ್ತ್ರ ವನ್ನು ಚನ್ನಾಗಿ ಅಧ್ಯಯನಮಾಡಬೇಕಾಗಿದೆ. ಪಾಶ್ಚಿಮಾತ್ಯ ಚಿಕಿತ್ಸಾಕ್ರಮವನ್ನು ಸಶಾಸ್ತ್ರೀಯವಾಗಿ ಶಾಲಾ ಕಾಲೇಜುಗಳಲ್ಲಿ ಕಲಿಯುವಂತೆ, ಆಯುರ್ವೇದ ಶಾಸ್ತ್ರ ವನ್ನೂ ಕೂಡ, ಮೈಸೂರಿನಲ್ಲಿ ಏರ್ಪಡಿಸಿರುವಂತಹ ಆಯುರ್ವೇದ ಕಾಲೇಜಿನಲ್ಲಿ ಅಧ್ಯಯನಮಾಡಬೇಕು. ಈ ರೀತಿ ಅಧ್ಯಯನಮಾಡಿ ಪದವಿಗಳನ್ನು ಪಡೆದವರು ಮಾತ್ರವೇ ಆಯುರ್ವೇದ ವೃತ್ತಿಯನ್ನು ಅವಲಂಬಿಸುವುದಕ್ಕೆ ಆಸ್ಪದವಿರುವುದಾದರೆ, ಈ ವೃತ್ತಿಯು ಉತ್ತಮಗೊಳ್ಳುವುದು ; ಜನರಿಗೆ ನಂಬಿಕೆಯು ಹೆಚ್ಚುವುದು. ಶಾಸ್ತ್ರೀ ಯವಾದ ರೀತಿಯಲ್ಲಿ ಆಯುರ್ವೇದವನ್ನು ಅಭ್ಯಾಸಮಾಡಿ ಪದವಿಗಳನ್ನು ಪಡೆದ ವರಿಗೆ ಪ್ರೋತ್ಸಾಹ ಕೊಡುವ ಸಂದರ್ಭದಲ್ಲಿ ಆಯುರ್ವೇದ ಶಾಸ್ತ್ರದ ಘನತೆಗೆ ಲೋಪ ತಂದಿರುವ ಶಾಸ್ತ್ರವನ್ನರಿಯದ ಪಂಡಿತರಿಂದ ಮಹಾಜನರಿಗೆ ತೊಂದರೆ ಯಾಗದಂತೆ ನೋಡಿಕೊಳ್ಳುವುದು ಅತ್ಯಾವಶ್ಯಕ. ಈ ದೃಷ್ಟಿಯಿಂದಲೇ ಮದರಾಸು, ಮುಂಬೈ ಮತ್ತು ಸಂಯುಕ್ತಪ್ರಾಂತಗಳ ಸರ್ಕಾರಗಳವರು ಈ ವಿಷಯದಲ್ಲಿ ತಕ್ಕ

ಕಾನೂನುಗಳನ್ನು ಮಾಡಿದ್ದಾರೆ. ಮೈಸೂರಿನಲ್ಲಿಯೂ ಕೂಡ ಆ ಬಗೆಯ ಕಾನೂನು ಗಳನ್ನು ಮಾಡುವ ಆವಶ್ಯಕತೆ ಇದೆ; ಆದರೆ ಹಾಗೆ ಶಾಸನಮಾಡುವಾಗ, ಕಾಲೇಜು ಗಳಲ್ಲಿ ವ್ಯಾಸಂಗಮಾಡಿ ಉತ್ತೀರ್ಣರಾದ ಪದವೀಧರರಿಗೆ ಪ್ರೋತ್ಸಾಹವನ್ನು ಕೊಡು ವುದು ಮಾತ್ರವಲ್ಲದೆ, ವಂಶಪಾರಂಪರ್ಯವಾಗಿ ವೈದ್ಯವೃತ್ತಿಯನ್ನು ಅವಲಂಬಿಸಿರುವ ಸಮರ್ಥರೂ ಅನುಭವಿಗಳೂ ಆದ ವೈದ್ಯರಿಗೂ ತಕ್ಕ ಪ್ರೋತ್ಸಾಹವು ದೊರೆಯುವು ದಕ್ಕೆ ಅವಕಾಶವಿರುವಂತೆ ನೋಡಿಕೊಳ್ಳಬೇಕಾಗಿದೆ.

ಆಯುರ್ವೇದಶಾಸ್ತ್ರಜ್ಞರು, ತಮಗೆ ತಿಳಿದಿರುವ ಅಂಶಗಳನ್ನು ಹಿಂದಿನಂತೆ ತಮ್ಮಲ್ಲಿಯೇ ರಹಸ್ಯವಾಗಿಟ್ಟುಕೊಳ್ಳದೆ, ಅವುಗಳನ್ನು ಗ್ರಂಥಗಳ ರೂಪದಲ್ಲಿ ಪ್ರಕಟಿಸಿ ಆ ಶಾಸ್ತ್ರದಲ್ಲಿರುವ ಮಹತ್ತರವಾದ ಅಂಶಗಳನ್ನು ಎಲ್ಲರಿಗೂ ತಿಳಿಸಬೇಕು. ಇದರಿಂದ ಶಾಸ್ತ್ರವು ಬೆಳೆಯುವುದಕ್ಕೆ ಅನುಕೂಲವಾಗುವುದು. ಸಂಸ್ಕೃತದಲ್ಲಿಯೂ ಇತರ ಭಾಷೆಗಳಲ್ಲಿಯೂ ಇರುವ ಆಯುರ್ವೇದ ಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕಾರ್ಯಕ್ರಮವನ್ನು ಈ ಬಗೆಯ ಸಮ್ಮೇಳನಗಳೂ ಸಂಘಗಳೂ ಕೈಗೊಳ್ಳಬೇಕು. ಪಾಶ್ಚಿಮಾತ್ಯ ವೈದ್ಯಶಾಸ್ತ್ರವನ್ನು ಬಲ್ಲವರು ದೊಡ್ಡ ದೊಡ್ಡ ಸಂಘಗಳನ್ನು ಮಾಡಿಕೊಂಡು ಶಾಸ್ತ್ರದ ಉದ್ಧಾರದ ದೃಷ್ಟಿಯಿಂದಲೇ ಹಗಲಿರುಳೂ ಸೇವೆ ಸಲ್ಲಿಸುತ್ತಿರುವಂತೆ ನಮ್ಮ ಆಯುರ್ವೇದ ಪಂಡಿತರೂ ಕೂಡ, ಸಂಘಗಳನ್ನು ಸ್ಥಾಪಿಸಿಕೊಂಡು ಆಯುರ್ವೇದದ ಅಭಿವೃದ್ಧಿಗೆ ಸಹಾಯಕರಾಗ ಬೇಕು. ಗ್ರಂಥಗಳ ರಚನೆ, ವೈದ್ಯವೃತ್ತಿಗೆ ತಕ್ಕ ಪ್ರೋತ್ಸಾಹ ದೊರೆಯುವ ವಿಚಾರ, ವೈದ್ಯರು ತಕ್ಕ ಯೋಗ್ಯತಾಸಿದ್ಧತೆಯನ್ನು ಪಡೆದಿರುವ ವಿಚಾರವನ್ನು ಪರಿಶೀಲಿಸು ವುದು, ದಾರಿತಪ್ಪಿ ನಡೆಯುವ ಪಂಡಿತರಮೇಲೆ ಶಿಸ್ತಿನ ಕಾರ್ಯಕ್ರಮವನ್ನು ಕೈಗೊಳ್ಳುವುದು—ಇವೇ ಮುಂತಾದ ಕೆಲಸಕಾರ್ಯಗಳನ್ನು ನಿರ್ವಹಿಸುವ ಜವಾ ಬ್ದಾರಿಯನ್ನು ಈ ಬಗೆಯ ಸಂಘಗಳು ಪರಿಶೀಲಿಸುವುದು ಒಳ್ಳೆಯದು. ಈ ಸಮ್ಮೇಳನದಲ್ಲಿ ಸೇರಿರುವ ವೈದ್ಯಮಹಾಶಯರೆಲ್ಲರೂ ಈ ಸೂಚನೆಗಳನ್ನು ನೆನಪಿ ನಲ್ಲಿಡುವರೆಂದು ನಾನು ನಂಬಿದ್ದೇನೆ.

ಆಯುರ್ವೇದ ಪಂಡಿತರು ರೋಗಾದಿಗಳನ್ನು ನಿವಾರಿಸುವ ವಿಚಾರದ ಕಡೆ ಲಕ್ಷ್ಯಕೊಡುವುದಲ್ಲದೆ ಆರೋಗ್ಯರಕ್ಷಣಾಕ್ರಮದ ವಿಚಾರದಲ್ಲಿ ತಕ್ಕ ಕಾರ್ಯಕ್ರಮ

ಗಳನ್ನು ಕೈಗೊಳ್ಳಬೇಕಾದುದು ಅತ್ಯಗತ್ಯವೆಂಬುದನ್ನು ನಾನು ಒತ್ತಿ ಹೇಳಬೇಕಾಗಿದೆ. ರೋಗವು ಬಂದಮೇಲೆ ವಾಸಿಮಾಡುವುದಕ್ಕಿಂತ ಅದು ಬರದಂತೆ ತಡೆಯುವುದೇ ಮೇಲು. ಇಲ್ಲಿ ನೆರೆದಿರುವ ಪಂಡಿತರು ಈ ವಿಚಾರದಲ್ಲಿ ಹೆಚ್ಚು ಪರಿಶೋಧನೆ, ಪ್ರಚಾರಗಳನ್ನು ಕೈಗೊಳ್ಳಬೇಕೆಂದು ನಾನು ಸೂಚಿಸುತ್ತೇನೆ. ಸಾಂಕ್ರಾಮಿಕ ವ್ಯಾಧಿಗಳನ್ನು ತಡೆಯುವ ವಿಷಯದಲ್ಲಿ ನೀವು ಹೆಚ್ಚು ಗಮನ ಕೊಟ್ಟಿಲ್ಲವೆಂದೇ ನನ್ನ ಭಾವನೆ. ಈ ರೋಗಗಳನ್ನು ತಡೆಯುವ ಬಗೆ, ಅವು ಬಂದರೆ ಅವುಗಳ ನಿವಾರಣೆಗೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳು—ಇವುಗಳ ವಿಚಾರದಲ್ಲಿ ಪಾಶ್ಚಿಮಾತ್ಯರಂತೆ ನೀವೂ ವಿಶೇಷ ಆಸಕ್ತಿಯನ್ನು ವಹಿಸಬೇಕಾಗಿದೆ. ಇತ್ತೀಚೆಗೆ ಸಾಂಕ್ರಾಮಿಕ ರೋಗಗಳ ದೆಸೆಯಿಂದ ನಮ್ಮ ದೇಶದಲ್ಲಿ ಬಹುಮಂದಿ ಸಾಯುತ್ತಿದ್ದಾರೆ ಮಲೇರಿಯಾ ಮೊದಲಾದ ರೋಗಗಳನ್ನು ತಡೆಯುವ ಕಾರ್ಯಕ್ರಮವನ್ನು ಕೈಗೊಳ್ಳುವ ವಿಚಾರದಲ್ಲಿಯೂ ನಮ್ಮ ವೈದ್ಯರು ಬಹು ಆಸಕ್ತಿ ವಹಿಸಬೇಕಾಗಿದೆ. ಮಲೇರಿಯ ವ್ಯಾಧಿಯೊಂದರಿಂದಲೇ ದೇಶಕ್ಕೆ ಆಗುತ್ತಿರುವ ಅಪಾರ ಕಷ್ಟನಷ್ಟಗಳನ್ನು ನಾನು ಈ ಸಮಯದಲ್ಲಿ ನಿಮ್ಮೆಲ್ಲರ ಗಮನಕ್ಕೆ ತರಬಯಸುತ್ತೇನೆ. ಇಂಡಿಯಾದೇಶದಲ್ಲಿ ನಿಮಿಷಕ್ಕೆ ಇಬ್ಬರಂತೆ ಅಂದರೆ ವರ್ಷಂಪ್ರತಿ ೨೦ ಲಕ್ಷ ಮಂದಿ ಈ ರೋಗಕ್ಕೆ ಬಲಿಯಾಗುತ್ತಿದ್ದಾರೆಂಬುದಾಗಿ ಅಂಕಿ ಅಂಶಗಳಿಂದ ಗೊತ್ತಾಗಿದೆ. ಈ ರೋಗದ ದೆಸೆಯಿಂದ ನರಳುವ ಜನರ ಶಕ್ತಿಯು ಕುಗ್ಗಿಹೋಗಿ, ಅವರ ಸಂಪಾದನೆಯ ಮಟ್ಟವು ತಗ್ಗಿ, ದೇಶಕ್ಕೆ ಸುಮಾರು ೫೦ ಕೋಟಿ ರೂಪಾಯಿಗಳಷ್ಟು ಪ್ರತಿವರ್ಷವೂ ನಷ್ಟವಾಗುತ್ತಿರುವುದೆಂದು ನಿಪುಣರು ಅಂದಾಜುಮಾಡಿದ್ದಾರೆ. ಮೈಸೂರುದೇಶದ ಮಲೆನಾಡಿನಲ್ಲಿ ಈ ರೋಗವು ಹಿಂದಿನಿಂದಲೂ ಅನರ್ಥವನ್ನುಂಟುಮಾಡುತ್ತಿರುವುದರ ಜೊತೆಗೆ, ಜಲಾಶಯಗಳು ನಿರ್ಮಾಣವಾಗಿ, ನಾಲೆಗಳ ಮೂಲಕ ನೀರನ್ನು ಜಮೀನುಗಳಿಗೆ ಒದಗಿಸುತ್ತಿರುವ ಕೆಲವು ಕ್ಷೇತ್ರದಲ್ಲಿ ಕೂಡ, ಈ ರೋಗವು ಇತ್ತೀಚೆಗೆ ಉಲ್ಬಣಾವಸ್ಥೆ ಹೊಂದಿರುವ ಅಂಶವು ನಿಮ್ಮ ಗಮನಕ್ಕೆ ಬಂದಿರಬೇಕು. ಇರ್ವಿನ್ ನಾಲಾ ಪ್ರದೇಶದಲ್ಲಿ ಈ ರೋಗದಿಂದ ರೈತರಿಗೆ ಆಗುತ್ತಿರುವ ಹಾವಳಿಯನ್ನು ತಪ್ಪಿಸಲು ಸರ್ಕಾರದವರು ವಿಶೇಷ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದ್ದಾರೆ. ಈ ರೋಗ ನಿವಾರಣೆಗೆ ' ಅಲೋಪತಿಕ್ ' ವೈದ್ಯ ಚಿಕಿತ್ಸಾ ಕ್ರಮದ ಪ್ರಕಾರ ಕ್ವಿನೈನ್

ಉತ್ತಮವಾದ ಔಷಧಿಯೆಂದು ಪರಿಗಣಿಸಲ್ಪಟ್ಟವೆ. ಈ ಔಷಧಿಯ ಸರಬರಾಯಿ ಗಾಗಿ ಸರ್ಕಾರದವರು ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡುತ್ತಿದ್ದಾರೆ. ಆಯುರ್ವೇದ ಪಂಡಿತರು ಈ ರೋಗದ ನಿವಾರಣೆಗಾಗಿ ಇನ್ನೂ ಸುಲಭವಾದ ಮತ್ತು ಪರಿಣಾಮಕಾರಿಯಾದ ಚಿಕಿತ್ಸಾ ವಿಧಾನವನ್ನು ಕಂಡುಹಿಡಿದು ತೋರಿಸಿ ಕೊಟ್ಟಲ್ಲಿ ಬಹಳ ಉಪಕಾರ ಮಾಡಿದಂತಾಗುತ್ತದೆ. ಸರ್ಕಾರದವರು ಅಂತಹ ಸಂದರ್ಭಗಳಲ್ಲಿ ನಿಮಗೆ ವಿಶೇಷ ಪ್ರೋತ್ಸಾಹವನ್ನು ನೀಡುವುದರಲ್ಲಿ ಯಾವ ಸಂದೇ ಹವೂ ಇಲ್ಲ.

ಮಹನೀಯರೇ, ಮೈಸೂರು ಸಂಸ್ಥಾನದಲ್ಲಿ ದೇಶೀಯ ವೈದ್ಯಕ್ಕೆ ಸ್ವಲ್ಪ ಹೆಚ್ಚಾಗಿ ಪುರಸ್ಕಾರವಿದ್ದರೂ ಕೂಡ ಸ್ಥಿತಿಯು ಇತರ ಕಡೆಗಳಲ್ಲಿರುವಂತೆಯೇ ಇದೆ. ಮೈಸೂರು ಸರ್ಕಾರದವರು ಆಯುರ್ವೇದ ಕಾಲೇಜನ್ನು ೧೯೦೮ ರಲ್ಲಿ ಸ್ಥಾಪಿಸಿ ದೇಶೀಯ ವೈದ್ಯಕ್ಕೆ ಪ್ರೋತ್ಸಾಹವನ್ನು ನೀಡಿದರು. ಆದರೆ ಈ ಕಾಲೇಜಿನಿಂದ ಹೊರಬಿದ್ದ ಪದವೀಧರರಿಗೆ ಸರಿಯಾದ ಪ್ರೋತ್ಸಾಹ ದೊರೆಯದೆ ದೇಶಕ್ಕೆ ಅವರಿಂದ ಹೆಚ್ಚು ಪ್ರಯೋಜನವಾಗುತ್ತಿಲ್ಲವೆಂಬ ಆಕ್ಷೇಪಣೆಯೂ ಕೇಳಿಬರುತ್ತಿದೆ. ಪಾಶ್ಚಿ ಮಾತ್ಯ ಚಿಕಿತ್ಸಾ ವಿಧಾನದ ಕಾಲೇಜಿನಲ್ಲಿಯೂ ಶಾಲೆಯಲ್ಲಿಯೂ ಓದಿ ಉತ್ತೀರ್ಣ ರಾದ ವೈದ್ಯರಿಗೆ ಕೊಡುತ್ತಿರುವಷ್ಟು ಪ್ರೋತ್ಸಾಹದಲ್ಲಿ ಅರ್ಧ ಭಾಗವನ್ನೂ ಕೂಡ ಆಯುರ್ವೇದ ಕಾಲೇಜಿನಿಂದ ಹೊರಬೀಳುವ ಪದವೀಧರರಿಗೆ ಕೊಡುತ್ತಿಲ್ಲವೆಂಬ ಆಕ್ಷೇಪಣೆಗಳು ಬಂದಿವೆ. ಆಯುರ್ವೇದ ಕಾಲೇಜಿನಲ್ಲಿ ತೇರ್ಗಡೆಯಾದ ವೈದ್ಯರಿಗೆ ಸ್ಥಳೀಯ ಸಂಸ್ಥೆಗಳವರು ನೀಡುತ್ತಿರುವ ಪ್ರೋತ್ಸಾಹವು ಒಂದು ನಿರ್ದಿಷ್ಟಪ್ರಮಾಣ ರೂಪದಲ್ಲಿ ದೇಶವಾದ್ಯಂತವೂ ದೊರೆಯುತ್ತಿಲ್ಲವೆಂದು ಆಕ್ಷೇಪಿಸಲಾಗಿದೆ. ಸರ್ಕಾರ ದವರು ಈ ವಿಷಯವನ್ನು ಆಲೋಚಿಸಿ ತಕ್ಕ ಪ್ರೋತ್ಸಾಹವು ಅವರಿಗೆ ದೊರೆಯು ವಂತೆ ಮಾಡಲು ಸಿದ್ಧರಾಗಿದ್ದಾರೆಂದೂ ನೇರವಾದ ಸಹಾಯವನ್ನು ಅವರಿಗೆ ನೀಡಲು ತೀವ್ರಾಸಕ್ತಿಯಿಂದ ಕೂಡಿರುವವರಾಗಿದ್ದಾರೆಂದೂ, ಈ ಸಂದರ್ಭದಲ್ಲಿ ನಾನು ಭರವಸೆ ಕೊಡುತ್ತೇನೆ. ಆದರೆ ಈ ಭರವಸೆಯನ್ನು ಅವರು ತಮ್ಮ ಸ್ವಸಾ ಮರ್ಥ್ಯದಿಂದ ಸಾರ್ಥಕಪಡಿಸಿಕೊಳ್ಳಬೇಕು.

ಮಹಾಶಯರೇ, ಇಷ್ಟು ಹೇಳಿ ನಾನು ನಿಖಿಲ ಕರ್ಣಾಟಕದ ಆಯುರ್ವೇದ ಸಮ್ಮೇಳನದ ೧೨ನೇ ಅಧಿವೇಶನದ ಮತ್ತು ಮೈಸೂರಿನ ಆಯುರ್ವೇದ ಸಮ್ಮೇಳನದ ಪ್ರಥಮ ಅಧಿವೇಶನದ ಪ್ರಾರಂಭೋತ್ಸವವನ್ನು ಸಂತೋಷದಿಂದ ನೆರವೇರಿಸುತ್ತೇನೆ. ನಿಮ್ಮ ಕಾರ್ಯಕಲಾಪಗಳು ಸುಗಮವಾಗಿ ನಡೆದು ತನ್ಮೂಲಕ ದೇಶಕ್ಕೆ ಫಲಕಾರಿಯಾಗಲೆಂದು ಹಾರೈಸುತ್ತೇನೆ.

——

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

ಸಿ.ಕ. ೧೨ನೆ ಆಯುರ್ವೇದ ಸಮ್ಮೇಳನ, ಮೈಸೂರು—1941



ಶ್ರೀ॥ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳವರು,
ಬಳ್ಳಾರಿ.
**ಅಧ್ಯಕ್ಷರು.**

ಮೈಸೂರು ಸಂಸ್ಥಾನದ ೧ನೆ ಆ. ಸಮ್ಮೇಳನ—1941



ಶ್ರೀ॥ ಭಿಷಗ್ರತ್ನ ಪಾಳ್ಯಂ ವೆಂಕಟಾಚಲಪಂಡಿತರವರು,
ಎಸ್. ಎಸ್. ಆರ್. ವೈದ್ಯಶಾಲಾ, ಮೈಸೂರು.
**ಅಧ್ಯಕ್ಷರು.**



॥ ಶ್ರೀಃ ॥

॥ ಶ್ರೀ ಧನ್ವಂತರಯೇ ನಮಃ ॥

ನಿಖಿಲ ಕರ್ಣಾಟಕದ ೧೨ ನೇ ಆಯುರ್ವೇದ ಸಮ್ಮೇಳನ,
ಮೈಸೂರು.

(ತಾ॥ 28. 29. 30 ನೇ ಡಿಸೆಂಬರ್ 1941.)

# ಅಧ್ಯಕ್ಷರ ಭಾಷಣ

(ಬ್ರ॥ ಶ್ರೀ॥ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳವರು
ಬಳ್ಳಾರಿ ಯವರಿಂದ)

ಮೈಸೂರು.
1941.



॥ ಶ್ರೀ ಧನ್ವಂತರಿ ಪ್ರಸನ್ನ ॥

# ನಿಖಿಲ ಕರ್ಣಾಟಕದ ೧೨ನೆ ಆಯುರ್ವೇದ ಸಮ್ಮೇಳನ, ಮೈಸೂರು.

## ಅಧ್ಯಕ್ಷರ ಭಾಷಣ.

---

ಸ್ವಾಗತಾಧ್ಯಕ್ಷ ಮಹಾಶಯರೇ, ವೈದ್ಯಸಹೋದರ ಸೋದರಿಯರೇ, ಪ್ರತಿನಿಧಿಗಳೇ,

ಬಯಲು ಸೀಮೆಯಲ್ಲಿರುವ ಬಳ್ಳಾರಿಯಲ್ಲಿನ ಬಯಲುಗಾಳಿಗೆ ಭಾವಶಬಲಿತನಾಗಿ ನನ್ನ ಮನೆಯಲ್ಲಿ ತದೇಕ ಭಾವನೆ ಚಿಂತನೆಗಳಿಂದ ಆವುದೋ ಪದ್ಯಗಳನ್ನು ಬರೆದುಕೊಳ್ಳುತ್ತಾ, ವಿಶ್ವಾಸದಿಂದ ನನ್ನಲ್ಲಿ ಬರುವ ರೋಗಗ್ರಸ್ತರಿಗೆ ಯಥೋಚಿತ ಚಿಕಿತ್ಸೆಗಳನ್ನು ಮಾಡುತ್ತಾ, ಆಯುರ್ವೇದ ವಿದ್ಯಾರ್ಥಿಗಳಾಗಿ ಬರುವವರಿಗೆ ಆಯುರ್ವೇದ ವಿದ್ಯೆಯನ್ನು ನನಗೆ ತಿಳಿದಿರುವಷ್ಟು ಬೋಧಿಸುತ್ತಾ (ವಂಶಕ್ರಮವಾಗಿ ಬಂದ ಕಾರಣ)ಕಾಲವನ್ನು ಕಳೆಯುತ್ತಿದ್ದ ನಾನು ಎಷ್ಟೂ ಈ ಸ್ಥಾನಕ್ಕೆ ಅರ್ಹನಲ್ಲ. ಸ್ವಪ್ನದಲ್ಲಿಯೂ ಈ ಸ್ಥಾನವನ್ನು ಆಶಿಸಿರಲಿಲ್ಲ. ಚಿರಸೌಹಾರ್ದ್ರತೆಯುಳ್ಳ ಮಿತ್ರರೂ, ಸಮರ್ಥರೂ, ಈ ಸ್ಥಾನಮಾನಮರ್ಯಾದೆಗಳನ್ನು ಸಮಗ್ರವಾಗಿ ಬಲ್ಲವರೂ ಕಳೆದ ಸಮ್ಮೇಳನಗಳ ಅಧ್ಯಕ್ಷರೂ, ತಮ್ಮ ಸೋದರಿಯನ್ನು ಪೋಷಿಸುವ ನಿಯಮಸೂತ್ರಗಳಲ್ಲಿ ಆಯುರ್ವೇದ ಚರಿತ್ರೆಯನ್ನು ಮಥನಮಾಡಿ, ಯಥಾಶಕ್ತಿಯಿಂದ, ಅದರ ಶ್ರೇಷ್ಟತೆಯನ್ನು ಹೊರಪಡಿಸಿದವರೂ, ಎಷ್ಟೋ ಕಷ್ಟಗಳನ್ನು ಪಟ್ಟು, ದೇಶೀಯ-ವಿದೇಶೀಯ ವೈದ್ಯ ಸಂಪ್ರದಾಯದವರೊಡನೆ, ಹೋರಾಡಿ, ತಮ್ಮ ಸೋದರಿಯನ್ನು ಇಷ್ಟುಮಟ್ಟಿಗೆ ಬೆಳೆಸಿದವರೂ, ಮಾಜಿ ಅಧ್ಯಕ್ಷರೂ ಆದ ಬ್ರ॥ ಶ್ರೀ॥ ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳು (A.V.Bh. C., L.M.P.) ಇವರೂ, ನಿ. ಕ. ಆ. ಮಂಡಳದ ಕಾರ್ಯದರ್ಶಿಗಳಾದ ಬ್ರ॥ ಶ್ರೀ॥ ವೈದ್ಯ ಎ. ಕೆ. ರಾಯಬಾಗ್‌ಕರರೂ, ಬ್ರ॥ ಶ್ರೀ॥ ವೈದ್ಯ ಬುರ್ಲಿಮಹಾಶಯರೂ, ಡಾ॥ ರಂಗನಾಥನಾಯಕರೂ, ಶ್ರೀಯುತರಾದ ನಿ. ಕ. ಆ. ಮಂಡಳದ ಮಾನ್ಯಸದಸ್ಯರೆಲ್ಲರೂ, ಈ 12 ನೆಯ ಸಮ್ಮೇಳನದ ಸ್ವಾಗತಾಧ್ಯಕ್ಷರೂ, ಸುಪ್ರಸಿದ್ಧ ವೈದ್ಯವಂಶೀಯರೂ ರಿಟೈರ್ಡ್ ಎಕ್ಸೈಜ್ ಕಮಿಷನರ್ ಬ್ರ॥ ಶ್ರೀ॥ ಅಂಬಳೆ ಸುಬ್ರಹ್ಮಣ್ಯ

ಅಯ್ಯರ್, ಬಿ. ಎ. ಅವರೂ, ತತ್ಸಂಘ ಸಭ್ಯರೂ, ನನ್ನ ಮೇಲಿನ ಅಹೇತುಕ ಸೌಹಾರ್ದತೆಯಿಂದ, ಸರ್ವವಿಧದಲ್ಲಿಯೂ ನನ್ನನ್ನು ಈ ಸ್ಥಾನದಲ್ಲಿ ಕೂಡುವಂತೆ ಮಾಡಿರುವರು. ನಾನು ನಿಜವಾಗಿಯೂ ಕಾರ್ಯ ಬಲ್ಲವನಲ್ಲ. ಈ ಮಹಾಶಯರ ಮೈತ್ರೀಬಲವು ನನ್ನನ್ನು ಈ ಸ್ಥಾನಕ್ಕೆ ಒಪ್ಪುವಂತೆ ಮಾಡಿದೆ. ಇವರ ಆದರ ಪೂರ್ವಕವಾದ ಮೈತ್ರಿಗೆ ನಾನು ಎಷ್ಟೋ ಕೃತಜ್ಞನು. ಇವರುಗಳ ಸಂಘಸೇವೆಯು ಅಮೋಘವೂ ಅಮೂಲ್ಯವೂ ಮತ್ತು ನಿರುಪಮಾನವೂ. ಇವರನ್ನು ಸ್ಮರಿಸದಿದ್ದಲ್ಲಿ ನನ್ನ ಕರ್ತವ್ಯವು ಪೂರ್ಣವಾಗಲಾರದು. ಇವರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು. ಇನ್ನು ಮುಂದೆ ಇವರ ಆಜ್ಞಾದರಗಳೇ ನನಗೆ ಅತ್ಯಂತ ಶರಣ್ಯಗಳು, ಕಾರ್ಯಪ್ರವರ್ತಕಗಳು. ತಾವುಗಳು ಮುಂದಿದ್ದು ನನ್ನನ್ನು ನಡೆಯುವಂತೆ ಮಾಡುವುದೇ ಅಭ್ಯರ್ಥನೆಯು.

ಮಹಾಶಯರೆ, ಇದು ಮಹಿಶೂರ ಮಹಾಪ್ರಭುಗಳ ರಾಜಧಾನಿ. ನಿ.ಕ.ಆ. ಮಂಡಳಕನ್ಯಕೆಗೆ 12 ನೇ ವರ್ಷ ಬಿದ್ದಿದೆ. ವರಾನ್ವೇಷಣೆಗಾಗಿ ಈ ಕನ್ಯೆಯ ಪಾಲಕರು, ಆತುರಗೊಳ್ಳುತ್ತಿದ್ದರು; ನೂತನ ಪಟ್ಟಾಭಿಷಿಕ್ತರಾದ ಶ್ರೀ ಶ್ರೀ ಮಹಿಶೂರ ಮಹಾಪ್ರಭುಗಳ ಪ್ರಾಂಗಣದಲ್ಲಿ ಹನ್ನೆರಡು ವರ್ಷಗಳುಳ್ಳ ಕನ್ಯೆ ಅಧೋವದನಳಾಗಿ, ದೀನಳಂತೆ ಇರುವುದಕ್ಕೆ ಅರ್ಹಳೇ!!! ಅಲ್ಲ. ಅಲ್ಲ. ಈಕೆಯು ತನ್ನ ಪ್ರಭುವಿನ ಅರಮನೆಗೆ ಬಂದಿರುವಳು. ಈಕೆಯ ಕೋರಿಕೆಗಳು ಸಫಲವಾಗದಿರವು. ನಿ. ಕ. ಆ. ಸೋದರರು, ತಮ್ಮ ಸೋದರಿಯ ವೈಭವವನ್ನು ನೋಡಿ, ಆನಂದಪಡುವ ಸುಸಮಯವಿದು. ತನ್ನ ಸೋದರರ ಅಖಂಡ ವೈಭವವನ್ನು ವೃದ್ಧಿಪಡಿಸಲಿ ಈಕೆ. ಶ್ರೀ ಧನ್ವಂತರಿಯು ಈಕೆಯನ್ನು ಕಾಪಾಡಲಿ.

## "ಪ್ರಶ್ನೋಪನಿಷತ್ತಿನಲ್ಲಿ"

"ಪ್ರಶ್ನೋಪನಿಷತ್ತಿನಲ್ಲಿ" ಸುಕೇಶ-ಭಾರದ್ವಾಜ, ಶೈಬ್ಯಾದಿಗಳು, ಬ್ರಹ್ಮ ತತ್ವಜಿಜ್ಞಾಸಿಗಳಾಗಿ, ಪಿಪ್ಪಲಾದಿ ಮಹರ್ಷಿಯನ್ನು, ಪ್ರಜೆಗಳು ಹೇಗೆ ಹುಟ್ಟಿದರೆಂದು ಪ್ರಶ್ನಿಸಲು, ಬ್ರಹ್ಮನಿಷ್ಠನಾದ ಪಿಪ್ಪಲಾದಿಯು, ಬ್ರಹ್ಮನು ತಪಸ್ಸಿನಿಂದ ಅಗ್ನೀಷೋಮಾತ್ಮಕವಾದ ಯುಗ್ಮವನ್ನು ಸೃಜಿಸಿ ಶೀತೋಷ್ಣಯೋಗದಿಂದ ಪ್ರಜೆಗಳನ್ನು ಹುಟ್ಟುವಂತೆ ಮಾಡಿದನೆಂದು, ಅದರ ಪರಿಣಾಮ ಪ್ರಕಾರಗಳನ್ನೂ ತದ್ಗತಿಗಳನ್ನೂ ವಿಶದೀಕರಿಸಿದನು. ತದನುಕರಣಧಾರಕದೈವಗಳಾದ ಪಂಚಭೂತ

ಗಳನ್ನು ಶರೀರ ಆರಂಭಕಗಳಾಗಿಯೂ, ಇಂದ್ರಿಯಗಳನ್ನು ಶರೀರಧಾರಕಗಳೆಂದೂ ಹೇಳಿರುವನು.

### "ಛಾಂದೋಗ್ಯದಲ್ಲಿ"

"ಛಾಂದೋಗ್ಯದಲ್ಲಿ" "ನವೈವಾ ಚೋನ ಚಕ್ಷೂಂಷೀ", ಇತ್ಯಾದಿಗಳಿಂದ, ಕರಣಗಳು, ವಿಕಲಗಳಾದರೂ, ಜೀವಿಯು ಬದುಕುತ್ತದೆ. ಜೀವವು ವಿಕಲವಾದಲ್ಲಿ, ಜೀವಿ ಜೀವಿಸದು. ಸರ್ವೇಂದ್ರಿಯ ವ್ಯಾಪಾರಗಳು ಪ್ರಾಣಾಯತ್ತವೆಂದೂ, ಪ್ರಾಣಕ್ಕೆ ಅನ್ನವು ಕಾಣಯಾಚಿ (ಆಶ್ರಯ)ವೆಂದೂ" ಹೇಳಿರುವನು. "ಶಾರೀರಕೋಪನಿಷತ್ತಿನಲ್ಲಿ" ಪೃಥಿವ್ಯಾದಿ ಪಂಚಭೂತಸಮವಾಯ" ಶರೀರವನ್ನು ಸ್ಪಷ್ಟವಾಗಿ ವಿಶದೀಕರಿಸಿರುವುದು.

### "ಬೃಹದಾರಣ್ಯದಲ್ಲಿ"

"ಆದಿತ್ಯಾಗ್ನಿವಾಯ್ವಾತ್ಮನಾ ತ್ರಿಪ್ರಕಾರಮಾತ್ಮಾನಂ ಸ್ವಯಮೇವ, ಕಾರ್ಯಕರಣ ಸಂಘಾತಂ ವ್ಯಭಜತ್" ಎಂದಿರುವುದು.

### "ಗರ್ಭೋಪನಿಷತ್ತಿನಲ್ಲಿ"

ಪಂಚಾತ್ಮಕಂ ಪಂಚಸುವರ್ತಮಾನಂ। ಷಡಾಶ್ರಯಂ ಷಡ್ಗುಣಯೋಗಯುಕ್ತಂ॥ ತಂ ಸಪ್ತಧಾತುಂ ತ್ರಿಮಲಂ ತ್ರಿಯೋನಿಂ। ಚತುರ್ವಿಧಾಹಾರಮಯಂ ಶರೀರಂ॥" ಇತ್ಯಾದಿಗಳಿಂದ, ಎಷ್ಟೋ ಯುಗಗಳ ಹಿಂದೆಯೇ ನಮ್ಮ ಆಯುರ್ವೇದವು ಸರ್ವಾವಯವಗಳಿಂದ ಇತ್ತೆಂದು ವಿಶ್ವವೆಲ್ಲವೂ ಕೇಳಿಸುವಂತೆ, ಉರ್ಧ್ವಬಾಹುಗಳಿಂದ ಸಾರಲು ಸಮರ್ಥರಾಗಿದ್ದೇವೆ. ಗತ ಸಮ್ಮೇಳನಗಳಲ್ಲಿ ತತ್ ಪ್ರಾಶಸ್ತ್ಯವನ್ನು ಅನೇಕ ಮಹನೀಯರೂ, ವೈದ್ಯರೂ, ಚರ್ಚಿಸಿರುವರು. ತಮ್ಮ ಸ್ವತ್ವವಾದ ಇದನ್ನು ಎಲ್ಲರಿಗೂ ತಿಳಿಸಿರುವರು. ತಚ್ಚರಿತ್ರೆಯನ್ನು ವಿಪುಲವಾಗಿ ವಿಮರ್ಶಿಸುವುದಿಲ್ಲ ನಾನು; ಆದರೂ ಸಂಪ್ರದಾಯವನ್ನು ಅನುಸರಿಸಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ.

### "ಕಾಯಚಿಕಿತ್ಸೆ"

ಈ ಚಿಕಿತ್ಸೆಯನ್ನು ಕುರಿತು ವಿಚಾರಿಸಿದಲ್ಲಿ, ಇತಿಹಾಸಗಳಲ್ಲಿ ಎಷ್ಟೋ, ಪುರಾಣಗಳಲ್ಲಿ ಎಷ್ಟೋ, ಆಧಾರಗಳಿವೆ. ಅವುಗಳಲ್ಲಿ ಲಿಂಗಪುರಾಣದಲ್ಲಿ ಷಣ್ಮುಖನು

ಶಿವನನ್ನು "ತಂದೆಯೇ ನೀನು ವೃದ್ಧನು. ಏನಾದರೂ ರಸಾಯನವನ್ನು ತೆಗೆದು ಕೊಳ್ಳಬಾರದೇ" ಎಂದು ಕೇಳುವಲ್ಲಿ ಮೃತ್ಯುಂಜಯನು "ಮಮಾಯುರ್ಗ್ರಸತೇ ಕಾಲಃ ಕುತಃ ಪುತ್ರ ರಸಾಯನಂ" ಎಂದು ಉತ್ತರಕೊಟ್ಟಿರುವನು. ಇದು ವ್ಯಾಸನ ಕಾಲದ್ದಾಗಿದೆ. ಆದರೂ ಅಂತಹ ಕಾಲಮೃತ್ಯುವನ್ನು ಒತ್ತಟ್ಟಿಗಿಟ್ಟು ಅಕಾಲ ಮೃತ್ಯುವಿಗಾದರೂ ನಿವಾರಣೋಪಾಯವು ಪ್ರಾಣಿಮಾತ್ರಕ್ಕೆ ಅವಶ್ಯಕವಾಗಿ ಬೇಕಷ್ಟೆ? ಇದನ್ನು ಬೋಧಿಸತಕ್ಕದ್ದು ವೈದ್ಯಶಾಸ್ತ್ರವು. ಇಂತಹ ವೈದ್ಯಶಾಸ್ತ್ರವು ವಿಶ್ವಪ್ರಾಣಿ ಪ್ರಾಣಸಂವರ್ಧಕವಾದ ಆಯುರ್ವೇದವಲ್ಲದೆ ಮತ್ತಾವುದು? ಸಂಪ್ರದಾಯಭೇದ ಗಳಿದ್ದರೂ, ಈಗ ಪ್ರಪಂಚದ ನಾನಾಭಾಗಗಳಲ್ಲೂ ಪ್ರಚಾರದಲ್ಲಿದ್ದು ಪ್ರಾಣರಕ್ಷಣಾ ಕಾರ್ಯದಲ್ಲಿ ತೊಡಗಿರುವ ವೈದ್ಯಶಾಸ್ತ್ರಗಳೆಲ್ಲವೂ ಈ ಆಯುರ್ವೇದದ ಶಾಖೋಪಶಾಖೆ ಗಳೆಂಬುದನ್ನು ನಾನು ಇಲ್ಲಿ ಪುನಃ ವಿವರಿಸಬೇಕಾದ್ದೇ ಇಲ್ಲ. 1938ನೆ ಆಗಸ್ಟ್ 31 ನೇ ತಾರೀಖಿನಲ್ಲಿ ನಮ್ಮ ಮದರಾಸು ರಾಜಧಾನಿಗೆ ಪ್ರಧಾನ ಮಂತ್ರಿಗಳಾಗಿದ್ದ ಮಾನ್ಯ ಶ್ರೀ ಸೀ. ರಾಜಗೋಪಾಲಾಚಾರ್ಯರವರು, ಗವರ್ನ ಮೆಂಟ್ ಇಂಡಿಯನ್ ಮೆಡಿಕಲ್‌ಸ್ಕೂಲ್‌ನಲ್ಲಿ ಆ ಸ್ಕೂಲು ಪ್ರಿನ್ಸಿಪಾಲರಾದ ಶ್ರೀ ಜಿ. ಶ್ರೀನಿವಾಸಮೂರ್ತಿಯವರ ಅಧ್ಯಕ್ಷತೆಯಲ್ಲಿ ವೈದ್ಯವಿದ್ಯಾರ್ಥಿಗಳಿಗೆ ಹಿತೋಪದೇಶ ವನ್ನು ಮಾಡುತ್ತಾ "ವೈದ್ಯವೆನ್ನುವುದು ಹಿಂದೂ ವೈದ್ಯವು, ಯನಾನಿ ವೈದ್ಯವು, ಪಾಶ್ಚಾತ್ಯ ವೈದ್ಯವು ಎಂಬ ಭೇದಾತ್ಮಕಗಳಲ್ಲ. ಉಡುಪು, ಜಾತಿ, ಮರ್ಯಾದೆ ಇವು ಗಳು ದೇಶದೇಶಕ್ಕೂ ಭಿನ್ನವಾದಹಾಗೆ ಸತ್ಯವು ಭಿನ್ನವಾಗಲಾರದು. ಯಾವ ಶಾಸ್ತ್ರವೇ ಆಗಲೀ, ಯಾವ ದೇಶಕ್ಕಾಗಲೀ, ಯಾವ ಜಾತಿಗಾಗಲೀ, ಸೇರಿದವು ಗಳಲ್ಲ. ಶಾಸ್ತ್ರಗಳಲ್ಲಿನ ಸತ್ಯಸಿದ್ಧಾಂತಗಳು ಪ್ರಪಂಚಕ್ಕೆಲ್ಲಾ ಬೇಕಾದವುಗಳೇ. ವೈದ್ಯವೂ ಒಂದು ಶಾಸ್ತ್ರ. ಈ ಶಾಸ್ತ್ರದಲ್ಲಿನ ಸತ್ಯ ಸಿದ್ಧಾಂತಗಳು ಪ್ರಪಂಚಕ್ಕೆಲ್ಲಾ ಬೇಕಾದವು. ಯಾವ ಔಷಧಗಳಾಗಲೀ ಯಾವ ಮನುಷ್ಯನಿಗಾದರೂ, ಒಂದೇ ವಿಧವಾದ ಕೆಲಸವನ್ನು ಮಾಡುವುದು. ಪ್ರಾಚ್ಯ ವೈದ್ಯವೂ, ಪಾಶ್ಚಾತ್ಯ ವೈದ್ಯವೂ, ಎಂದು ಭಿನ್ನಭಿನ್ನವಾಗಿ ಏರ್ಪಡಿಸುವುದು ಉಚಿತವಲ್ಲ. ಹೀದೂದೇಶದ ಚರಿತ್ರೆ ಯನ್ನು ನಾನು ಓದಿದಾಗ ಅಪ್ರಾಚ್ಯರು ಅಂದರೆ ಪಾಶ್ಚಾತ್ಯರು, ವೈದ್ಯವೇನೆಂಬು ದನ್ನು ತಿಳಿದುಕೊಳವುದಕ್ಕೆ ಮುಂಚೆಯೇ, ಈ ಶಾಸ್ತ್ರವು ಹಿಂದೂ ದೇಶದಲ್ಲಿ ಉಚ್ಚ ಸ್ಥಿತಿಯನ್ನು ಪಡೆದಿತ್ತು. ಹಿದೂವೈದ್ಯರು ಪರ್ಷಿಯಾ ದೇಶದಲ್ಲಿಯೂ, ಬಾಗ್‌ದಾದ ನಲ್ಲಿಯೂ ರಾಜವೈದ್ಯರಾಗಿ ನಿಯಮಿತರಾಗಿದ್ದರು. ಸಂಸ್ಕೃತ ಭಾಷಾವಿಜ್ಞಾನವು ಆಯಾ ದೇಶಭಾಷೆಗಳಲ್ಲಿ ಅನುವಾದಿಸಲ್ಪಡುತ್ತಿತ್ತು. ಮಹಮದೀಯ ಪ್ರಭುಗಳು

ಆರ್ಯವಿಜ್ಞಾನವನ್ನು ಪಾಶ್ಚಾತ್ಯದೇಶಗಳಿಗೆ ಹಂಚಿಕೊಟ್ಟರೆಂದು ತಿಳಿದು ಕೊಂಡೆನು. ಆಯುರ್ವೇದವು ನಿಜವಾಗಿಯೂ, ಈಗಿನ ಆಲೋಪತಿಯೆಂದು ವ್ಯವಹಾರದಲ್ಲಿರುವ ಆಂಗ್ಲ ವೈದ್ಯಕ್ಕೆ ತಂದೆಯಂತಿರುವುದು. ಆಯುರ್ವೇದವೂ ಅಲೋಪತಿಯೂ, ವಸ್ತುತಃ ಒಂದೇ. ಇವುಗಳಲ್ಲಿ ಭೇದವೇನೂ ಇಲ್ಲ. ಓಷಧೀ ಪದ್ಧತಿಯಿಂದ, ಭೇದವನ್ನು ಎಣಿಸಕೂಡದು. ಈ ಪದ್ಧತಿಗಳ ಏಕೀಕರಣವನ್ನು ವೈದ್ಯವಿದ್ಯಾರ್ಥಿಗಳು ತಿಳಿದುಕೊಳ್ಳಬೇಕು, ಸತ್ಯಾನ್ವೇಷಣ ಮಾಡಬೇಕು. ವ್ಯಾಧಿ ಗ್ರಸ್ತರನೇಕತರದವರಿರುವರು. ಔಷಧಿಗಳೂ ಅನೇಕವಾಗಿರುವ ನಮ್ಮ ದೇಶವು ಒಂದು ದೊಡ್ಡ ಪರಿಶೋಧನಾಲಯವು. ಪಾಶ್ಚಾತ್ಯದೇಶದಲ್ಲಿ ದೊರೆಯದ ಇಷ್ಟು ಅನುಕೂಲ ಗಳುನಿಮಗೆ ದೊರೆತಿವೆ. ವಿದ್ಯಾರ್ಥಿಗಳಿಗೆ ಇನ್ನೂ ಪರಿಶೋಧನಾಲಯಗಳು ಬೇಕೆ ನ್ನುವದರಲ್ಲಿ, ಮೀನುಗಳು ನೀರಿನಲ್ಲಿದ್ದುಕೊಂಡು ನೀರಿಲ್ಲ ನೀರಿಲ್ಲವೆಂದು ಅರಚಿದಂ ತಾಗುವುದು. ವೈದ್ಯರಲ್ಲಿ ತಾರತಮ್ಯವು ಮಾಯವಾಗಲಿ. ಸಂಬಳಗಾರರು ಆದರೂ, ಆಗದಿದ್ದರೂ ವೈದ್ಯರು ದೇಶಸೇವಕರು. ಇವರು ಸಂಘಸೇವೆಯಿಂದ ಸತ್ಯಾನ್ವೇಷಣ ವನ್ನು ಮಾಡಬೇಕು. ಈ ಗ್ರಾಂಟಿಲ್ಲವೆಂದೂ, ಆ ಗ್ರಾಂಟಿಲ್ಲವೆಂದೂ ವಿಚಾರಿಸು ತ್ತಿರುವುದು ಅಯುಕ್ತವು" ಎಂದು, ಸಭ್ಯರ ಹರ್ಷಧ್ವನಿಯು ರೇಗುವಂತೆ ತಮ್ಮ ಹಿತೋಪದೇಶವನ್ನು ಮಾಡಿದರು. ಇವೆಲ್ಲವೂ ಬಹಳ ಯೋಗ್ಯವಾದುವೆ. ಅನುಷ್ಠೇ ಯಗಳು, ವಿಚಾರ್ಯಗಳು, ಆದಾಗ್ಯೂ ಪದ್ಧತಿಗಳು ಭಿನ್ನ ಭಿನ್ನವೆಂಬುವ ವಿಷಯವು ಶ್ರೀಯವರಿಗೆ ವಿದಿತವಾಗಲಿಲ್ಲ. ಆಯುರ್ವೇದದಲ್ಲಿ "ಜನ್ಮಾದೌನಿಧನೇಚೈವ ಪ್ರಾಯೋವಿಶತಿದೇಹಿನಃ । ಅತಸ್ಸರ್ವವಿಕಾರಣಾಂ ಅಯಂ ರಾಜಾಪ್ರಕೀರ್ತಿತಃ ॥ ಉ. ತ. 39ನೇ ಅ. 8ನೇ ಶ್ಲೋಕದಲ್ಲಿ, "ರೋಗಾನೀಕರಾಟ್ಸ್ವಾದ ಜ್ವರ" ವನ್ನು ಚಿಕಿತ್ಸೆಮಾಡುವಲ್ಲಿ ಕೇವಲ ವಾತ ಪ್ರಧಾನ ಜ್ವರ ಪೂರ್ವರೂಪದಲ್ಲಿ "ಪಾಯ ಯೇತಘೃತಂ ಸ್ವಚ್ಛಂ ತತಸ್ಸಲಭತೇ ಸುಖಂ ವಿಧಿರ್ಮಾರುತಜೇಷ್ವೇಷಃ" ॥ ಸು. ಉ. ತ. ಜ್ವರ ಚಿಕಿತ್ಸಾ ಪ್ರಕಾರ ಪಾಶ್ಚಾತ್ಯ ವೈದ್ಯರೂ ಘೃತಪಾನ ಮಾಡಿಸುತ್ತಾ ರೆಯೇ ? ಜಗತ್ತೆಲ್ಲವನ್ನು ಒಂದು ದೇಹವೆಂದು ಎಣಿಸಿ, ತದಂತರ್ಗತಚರಾಚರ ವನ್ನು ಒಂದು ದೇಹವಾಗಿ ಭಾವಿಸುತ್ತಾ, "ವಿಸರ್ಗಾದಾನವಿಕ್ಷೇಪೈಃ ಸೋಮ ಸೂರ್ಯಾನಿಲಾಯಥಾ । ಧಾರಯಂತಿಜಗದ್ದೇಹಂ ಕಫಪಿತ್ತಾನಿಲಾಸ್ತಥಾ" (ಸು. ಸೂತ್ರಸ್ಥಾನಂ) ಜಗತ್ತಿಗೆ ಬೇಕಾದ ಪಾಂಚಭೌತಿಕ ಸಮವಾಯಸ್ಥೂಲರೂಪ ಸೋಮಸೂರ್ಯಾನಿಲಗಳನ್ನು ಜಗದಂತರ್ಗತ ಚರಾಚರಕ್ಕೆ ಬೇಕಾದ ಪಾಂಚ ಭೌತಿಕಸಮವಾಯಸೂಕ್ಷ್ಮರೂಪಕಫಪಿತ್ತಾನಿಲಾತ್ಮಕಗಳನ್ನಾಗಿ ನಿರೂಪಿಸಿದ ಆಯು

ರ್ವೇದ ಪದ್ಧತಿಯು ಭಿನ್ನವಲ್ಲವೇ? ಅಲೋಪತಿಯಲ್ಲಿ ಈ ತ್ರಿದೋಷ ತತ್ವವೂ, ವೈದ್ಯಸಂಪ್ರದಾಯದಲ್ಲಿ ಕಾಯಕಲ್ಪವೆಂಬ ಚಿಕಿತ್ಸಾವಿಧಾನವು ಇನ್ನೂ ಗೊತ್ತಿಲ್ಲ. ಅಷ್ಟೇಅಲ್ಲದೆ, ಪಂಚಭೂತಾತ್ಮಕಗಳಾಗಿ ನಿರ್ವಹಿಸಿದ ಆಯುರ್ವೇದ ಸರ್ವದ್ರವ್ಯ ಗಳೂ ಅಧಿಕಾಧಿಕ ಸಂಖ್ಯಾತ್ಮಕಗಳಾಗಿ ಹೇಳುವ ಅಪ್ರಾಚ್ಯ ಅಂದರೆ ಪಾಶ್ಚಾತ್ಯ ದ್ರವ್ಯಗಳು ಭಿನ್ನಗಳಲ್ಲವೇ? ಸೋದರರೇ, ಅಲೋಪತಿ ವೈದ್ಯರನ್ನು ದೂಷಿಸುವುದ ಲ್ಲವಿದು. ಆಯುರ್ವೇದಕ್ಕೂ ಮತ್ತು ಅಲೋಪತಿಗೂ ಇರುವ ಭೇದಗಳನ್ನು ಮಾತ್ರ ತಿಳಿಸುವುದು. ಇನ್ನು, " ಪುಷ್ಪಫಲಾಲಾಬೂ ಕಾಳಿಂದಕ—ತ್ರಪುಸೇರ್ವಾರು ಕರ್ಕಾರುಕ ಪ್ರಭೃತಿಷುಭೇದ್ಯ ವಿಶೇಷಾರ್ದರ್ಶಯೇತ್ । ಉತ್ಕರ್ತನ—ಪರಿಕರ್ತನಾನಿ ಚೋಪದೇಶಯೇತ್ । ದೃತಿ—ವಸ್ತಿ—ಪ್ರಸೇವಕ ಪ್ರಭೃತಿಷುಉದಕಪೂರ್ಣೇಷು ಭೇದ್ಯಾಯೋಗ್ಯಾಂ । ಸರೋಮಣಿಚರ್ಮಣಿ ಆತತೇ ಲೇಖ್ಯಸ್ಯ । ಮೃತಪಶುಶಿ ರಾಸು ಉತ್ಪಲ ನಾಳೇಷುಚವೇಧ್ಯಸ್ಯ । ಘುಣೋಪಹತವೇಣು—ನಳ—ನಾಳೇಷು ಶುಷ್ಕಾಲಾಬೂಮುಖೇಷು ಏಷ್ಯಸ್ಯ—ಪನಸ—ಬಿಂಬೀ—ಬಿಲ್ವಫಲಮಜ್ಜ—ಮೃತಪಶು ದಂತೇಷು ಆಹಾರ್ಯಸ್ಯ—ಮಧೂಚ್ಛಿಷ್ಟೋಪಲಿಪ್ತೇ—ಶಾಲ್ಮಲಿಫಲಕೇ—ವಿಸ್ರಾ ವ್ಯಸ್ಯ । ಸೂಕ್ಷ್ಮಘನವಸ್ತ್ರಾಂತಯೋರ್ಮೃದು ಚರ್ಮಾಂತಯೋಶ್ಚ ಸೀವ್ಯಸ್ಯ । ಪುಸ್ತಮಯ ಪುರುಷಾಂಗ ಪ್ರತ್ಯಂಗವಿಶೇಷೇಷು ಬಂಧಯೋಗ್ಯಾಂ । ಮೃದುಮಾಂಸ ಪೇಶ್ಯೇಷು ಉತ್ಪಲನಾಳೇಷು ಚ ಕರ್ಣಸಂಧಿಬಂಧಯೋಗ್ಯಾಂ । ಮೃದುಷುಮಾಂಸ ಖಂಡೇಷು ಅಗ್ನಿಕ್ಷಾರಯೋಗ್ಯಾಂ । ಉದಕ ಪೂರ್ಣಘಟಪಾರ್ಶ್ವಸ್ರೋತಸ್ಸುಅಲಾ ಬೂಮುಖಾದಿಷು ಚ ನೇತ್ರ ಪ್ರಣಿಧಾನವಸ್ತಿವ್ರಣವಸ್ತಿ, ಪೀಡನಯೋಗ್ಯಾಮಿತಿ "॥ ಸು. ಸೂ. 9. 3ನೇ ಸೂತ್ರದಲ್ಲಿ ಶಸ್ತ್ರಕರ್ಮ ಪಥವು ಉಪದೇಸಲ್ಪಟ್ಟಿದೆಯಲ್ಲವೆ? ಇಂಥ ಸುಲಭ ಶಸ್ತ್ರ ಪಥಾಭ್ಯಾಸವೇನಾಗಿದೆ? ಗ್ರಂಥಸ್ಥವಾಗಿದೆ. ಹೇಳಿದುದರಲ್ಲಿ ಅಗ್ನಿಕರ್ಮವು "ಕ್ಷಾರಾದಗ್ನಿರ್ಗರೀಯಾನ್ ಕ್ರಿಯಾಸು । ವ್ಯಾಖ್ಯಾತಸ್ತದ್ದಗ್ಧಾನಾಂ ರೋಗಾಣಾಂ ಅಪುನರ್ಭಾವಾತ್‌ಭೇಷಜ ಶಸ್ತ್ರಕ್ಷಾರೈಃ ಅಸಾಧ್ಯಾನಾಂ ತತ್ಸಾಧ್ಯ ತ್ವಾಚ್ಚ (ಸು.ಸೂ.ಅ. 12. ಸೂತ್ರ 1) ಹೀಗೆ ಕ್ಷಾರಕರ್ಮಕ್ಕಿಂತ ಗರೀಯವಲ್ಲವೇ?

ಹೀಗೆ, ದೇಶೀಯ ವಿದೇಶೀಯ ವೈದ್ಯಪದ್ಧತಿಗಳು ಭಿನ್ನಗಳು. ಆಚಾರ ಆಹಾರಗಳೂ ಭಿನ್ನಗಳು. ಶೀತೋಷ್ಣವಾತಗಳೂ ಭಿನ್ನಗಳು. ಆದರೂ ಅವುಗಳ ನ್ನೆಲ್ಲಾ ಸರಿತೂಗಿಸಿಕೊಳ್ಳುವ ಶಕ್ತಿಯು ಮನುಷ್ಯನಿಗಿರುವುದರಿಂದ ವಿಶ್ವಕ್ಷೇಮಚಿಂತ ನೆಗೆ ಯಾವ ವೈದ್ಯವಾದರೂ ಗ್ರಾಹ್ಯವೇ ಆದರೂ, ಹೊತ್ತುಹೊತ್ತಿಗೆ ತಿಂಡಿಯಿಲ್ಲದೆ ಅಲ್ಲಾಡುವ ಬಡವರಲ್ಲಿ ಅನಾರೋಗ್ಯವು ಒದಗಿದರೆ ದೇಶಾಂತರಗಳಿಂದ ಬರುವ

ಅಧಿಕ ಕ್ರಯವುಳ್ಳ ಔಷಧಗಳು ಬಡವರಿಗೆ ಸುಲಭವಾಗುತ್ತದೆಯೇ? ಪ್ರಾಂತಶೀತ ವಾತಾದಿಗಳು, ಗರ್ಭಾದಿಯಾಗಿ, ಸಾತ್ಮ್ಯಗಳಾದ ಪ್ರಾಣಿಗಳಿಗೆ ಪ್ರಾಂತಶೀತವಾತಾದಿ ಸಾತ್ಮ್ಯದ್ರವ್ಯಗಳು ಉಪಕರಿಸುವಂತೆ, ವಿದೇಶೀಯ ಶೀತವಾತಾದಿ ಪುಷ್ಟ ದ್ರವ್ಯಗಳು ಉಪಕರಿಸುವುವೇ? ಪ್ರತ್ಯೇಕತ್ವವನ್ನು ಸರ್ವವಿಧದಿಂದ ಸರ್ವರೂ ಅಭ್ಯರ್ಥಿಸುತ್ತಿರುವಾಗ ಆಯುರ್ವೇದಕ್ಕೂ ಪ್ರತ್ಯೇಕತೆ ಬೇಡವೆ? ವಿಜ್ಞಾನವನ್ನು ಮಥಿಸುವುದಕ್ಕೂ ಪ್ರತ್ಯೇಕತೆಯು ಅವಸರವು.

ಇಂತಹ ಸನ್ನಿವೇಶದಲ್ಲಿ, ವಿದೇಶೀ ವೈದ್ಯಶಾಸ್ತ್ರಾನುಯಾಯಿಗಳು ರಾಜಬಲ ದಿಂದಲೂ ತದ್ವಾರಾ ಸಮಾಜ ಬಲದಿಂದಲೂ ಮತ್ತರಾಗುವಷ್ಟುಮಟ್ಟಿನ ಅನು ಕೂಲದಲ್ಲಿರುವಾಗ್ಯೆ ಈ ಬಡ ಆಯುರ್ವೇದಾನುಯಾಯಿಗಳು ತಕ್ಕ ಮಾನ್ಯತೆ ಯಿಲ್ಲದೆ, ಪೂಜ್ಯತೆಯಿಲ್ಲದೆ, ಹೊಟ್ಟೆಗಿಲ್ಲದೆ, ತಮ್ಮ ಸೇವೆಗೆ ತಕ್ಕ ಸ್ಥಾನಮಾನಗಳಿಲ್ಲದೆ ಬಳಲಿ ಬೆಂಡಾಗುತ್ತಿದ್ದರೂ ಅಂಥವರಿಂದ ನಿಶ್ಚಲವಾದ ದೇಶಸೇವೆಯನ್ನು ನಿರೀಕ್ಷಿಸುವುದು ಹೇಗೆ ನ್ಯಾಯವೋ ಹೇಳಲಾರೆ.

## "ಶಲ್ಯತಂತ್ರ ಪ್ರಾಶಸ್ತ್ಯ"

ಭಾರತ ರಾಮಾಯಣಗಳು ಇತಿಹಾಸಗಳು. ಭಾರತವು ಈ ಕಲಿಯುಗದ ಹಿಂದಿನ ಯುಗಾಂತರದ್ದು· ರಾಮಾಯಣವು ಪಂಚಮ ತ್ರೇತಾಯುಗದ ಚತುರ್ಥಭಾಗದಲ್ಲಿನದು. ಭೂಗೋಳದಲ್ಲಿ ಪಶ್ಚಿಮಾಶಾಗಹನಾರಣ್ಯಗಳಲ್ಲಿ ಮಾನವ ಸಂಚಾರ ವಿಲ್ಲದಿರುವಾಗಲೇ ಪ್ರವರ್ಧಮಾನವಾಗಿದ್ದುದು ನಮ್ಮ ಶಲ್ಯತಂತ್ರವು, ಎನ್ನುವುದಕ್ಕೆ ಈ ಕಾಲಗಣನೆಯನ್ನು ಉದಾಹರಿಸುವೆನು. ಯುಗಗಳು ಕೃತ ತ್ರೇತಾ ದ್ವಾಪರ ಕಲಿಗಳೆಂದು ನಾಲ್ಕಲ್ಲವೇ! ಈ ಚತುರ್ಯುಗದ ಸಂಘಾತವು ಒಂದು ಮಹಾಯುಗವು. ಎಪ್ಪತ್ತೊಂದು ಮಹಾಯುಗಗಳು ಒಂದು ಮನ್ವಂತರವು. ಈಗ್ಗೆ ಆರು ಮನುಗಳಕಾಲ ಕಳೆದುಹೋಗಿವೆ. ಇದು ಏಳನೆಯ ಮನ್ವಂತರವು. ಈ ವೈವಸ್ವತ ಮನ್ವಂತರದಲ್ಲಿ 28 ನೇ ಮಹಾಯುಗವು ನಡೆಯುತ್ತಲಿದೆ. ಈ ಮನ್ವಂತರದಲ್ಲಿ ಐದನೇ ಮಹಾಯುಗದಲ್ಲಿನ ತ್ರೇತಾಯುಗದಲ್ಲಿ ನಾಲ್ಕನೆಯ ಭಾಗದಲ್ಲಿ ಮುವತ್ತು ಸಾವಿರ ವರ್ಷಗಳು ಏಷ್ಯವಿರುವಾಗ ಶ್ರೀರಾಮನ ಕಾಲವು. ಈ ರಾಮಕಾಲೇತಿಹಾಸವನ್ನು ತಿಳಿಸುವ ರಾಮಾಯಣದಲ್ಲಿ ಸುಂದರಕಾಂಡದ 28 ನೇ ಸರ್ಗದ, 6 ನೇ ಶ್ಲೋಕದಲ್ಲಿ, ಸತೀ ತಿಲಕಳಾದ ಸೀತಾದೇವಿಯು, "ನೂನಂ ಮಮಾಂಗಾನ್ಯ ಚಿರಾದನಾರ್ಯಃ ತಸ್ತ್ರೈಃಶಿತೈಶ್ಛೇತ್ಸ್ಯತಿ ರಾಕ್ಷಸೇಂದ್ರಃ| ತಸ್ಮಿನ್ನನಾಗಚ್ಛತಿ ಲೋಕನಾಥೇಗರ್ಭಸ್ಥಜಂತೋರಿವ ಶಲ್ಯಕೃಂತಃ." ಎಂದು ಪ್ರಲಾ

ಪಿಸಿದ ಸಂದರ್ಭದಲ್ಲಿ ಸೋದರರೇ, ಗರ್ಭಸ್ಥ ಶಿಶುವು, ಹೊರಗೆ ಬರದಿದ್ದಲ್ಲಿ ನಿಶಿತವಾದ ಶಸ್ತ್ರದಿಂದ ಅಂಗಾಂಗಗಳನ್ನು ಛೇದಿಸಿ, ಹೊರಗೆ ತೆಗೆದು, ಗರ್ಭಿಣಿ ಸಂರಕ್ಷಣೆಯನ್ನು ಮಾಡುವ ಶಸ್ತ್ರಚಿಕಿತ್ಸಾ ವಿಧಾನಗಳು ಎಷ್ಟೋ ಸಾವಿರವರ್ಷಗಳ ಹಿಂದೆಯೇ ಹೇಳಲ್ಪಟ್ಟಿವೆ. ಇಂತಹ ಆಯುರ್ವೇದ ಶಸ್ತ್ರಚಿಕಿತ್ಸೆಯು ಈಗ ಏನಾಗಿದೆ? ನಾಮಶೇಷವಾಗಿದೆ. ಭಾರತ ಪಶುವೈದ್ಯ ವಿದ್ಯಾನಿಧಿಯಾದ ಸಹದೇವನ ಪಶುವೈದ್ಯಶಾಸ್ತ್ರವು ಏನಾಗಿದೆ? ಭಾರತದ ಕಥೆಯಾಗಿದೆ.

"ಔಪಧೇನವಮೌರಭ್ರಂ ಸೌಶುತ್ರಂ ಪಾಷ್ಕಲಾವತಂ | ಶೇಷಾಣಾಂ ಶಲ್ಯತಂತ್ರಾಣಾಂ ಮೂಲಾನ್ಯೇತಾನಿ ನಿರ್ದಿಶೇತ್"

ಔಪಧೇನವ, ಔರಭ್ರ, ಸಾಶ್ರುತ, ಪಾಷ್ಕಲಾವತಗಳು ಮಿಕ್ಕ ಎಲ್ಲಾ ಶಲ್ಯತಂತ್ರಗಳಿಗೆ ಮೂಲವಾದುವು, ಎಂದು, ಸು. ಸೂ. 4 ನೇ ಅ. 8 ನೇ ಶ್ಲೋಕವಾದ ಮೇಲಿನ ಶ್ಲೋಕದ ತಾತ್ಪರ್ಯವು. ಇದೇ ಸುಶ್ರುತದ ವ್ಯಾಖ್ಯಾನದಲ್ಲಿ 'ಗೋಪುರರಕ್ಷಿತ' 'ಕರವೀರ್ಯಾ'ದಿಗಳು ಶಲ್ಯತಂತ್ರಗ್ರಂಥಕಾರರೆಂದು, ಪನವರು ಬರೆದಿರುವರು. ಸದ್ಯಕ್ಕೆ ಸುಶ್ರುತ ತಂತ್ರವು ಮಾತ್ರ ಲಭ್ಯವಾಗಿದೆ. ಮಿಕ್ಕವುಗಳು ಅಲಭ್ಯವಾಗಿವೆ. ಇನ್ನು ಆಧುನಿಕರಾದ ಶ್ರೀ ಮಹಾಮಹೋಪಾಧ್ಯಾಯ, ಕವಿರಾಜ್ ಶ್ರೀ ಗಣನಾಥಸೇನರು (ಎಂ.ಎ. ಎಲ್. ಎಂ. ಎಸ್.) ಮಹಾಶಯರ ಪ್ರತ್ಯಕ್ಷ ಶಾರೀರದಲ್ಲಿಯೂ ಕೆಲವು ಕೆಲವು ಇರುವವು ಸಂಶಯಾಸ್ಪದಗಳಾದ ಪದಗಳು. ಚಿಕಿತ್ಸಾಗ್ರಂಥಗಳಲ್ಲಿಯೂ, ಎಷ್ಟೋ ಸಂಶಯಗಳು ಔಷಧ ಯೋಗಗಳಲ್ಲಿ ದ್ರವ್ಯದ ಹೆಸರುಗಳು, ಪರಿಮಾಣಗಳು, ಪರಿಭಾಷೆಗಳು ಎಷ್ಟೋ ಮೂಲಗ್ರಂಥಕ್ಕೆ ಭಿನ್ನವಾಗಿ ಭಾಷಾಂತರೀಕೃತವಾಗಿರುವುವು. ಔಷಧೀ ವಿಜ್ಞಾನಕ್ಕೆ ಆವಶ್ಯಕವಾದ ರೂಪರಸಾದಿಗಳನ್ನು ವಿವರಿಸುವ ಸದ್ಗ್ರಂಥಗಳನ್ನು ಮುಂದಕ್ಕೆ ಪ್ರಚಾರ ಮಾಡಬೇಕು.

ಇನ್ನು ರಸಾಯನಶಾಲೆಗಳಂತೂ, ದಿನವೊಂದಕ್ಕೆ ಅಸಂಖ್ಯಾತಗಳಾಗಿ ಜನ್ಮಿಸುತ್ತಾ ಬಾಲಾರಿಷ್ಟಗಳಲ್ಲಿ ದೀರ್ಘನಿದ್ರೆಯನ್ನು ಪಡೆಯುತ್ತಿವೆ. ಕೆಲವರು ಅಲ್ಪವೀರ್ಯವುಳ್ಳ ಔಷಧಗಳನ್ನು ಸಿದ್ಧಕ್ರಿಯೆಗಳೆಂದು ವಿಜೃಂಭಣೆಯಿಂದ ಪ್ರಕಟಿಸುತ್ತಾ ಧನಾರ್ಜನಾಪರರಾಗಿ ಇರುತ್ತಾರೆ. ಇದು ಆಯುರ್ವೇದಕ್ಕೆ ಅತ್ಯಂತ ಲಾಘವಪ್ರದವು. "ಬಹುಕಲ್ಪಂ ಬಹುಗುಣಂ ಸಂಪನ್ನಂ ಯೋಗ್ಯಮೌಷಧಂ" ಎಂದು, ಆಯುರ್ವೇದದ ಘೋಷಣೆಯು.

ಇದೆಲ್ಲದರ ಜೊತೆಗೆ ಆಯುರ್ವೇದ ವೈದ್ಯರಿಗೆ ಒದಗಿರುವ ದುರ್ದೈವಘಟನೆ ಯೆಂದರೆ ಅದರ ಗ್ರಂಥವಿಚಾರ. ಇವೂ ದೇಶಕಾಲೋಪಘಾತಗಳಿಂದ ಸಂದೇಹಾ ಸ್ಪದಗಳಾಗಿವೆ. ದೇಶಕಾಲ ವೈಪರೀತ್ಯಗಳಿಗೊಳಗಾಗಿ, ರಾಜಕೀಯ ಸಾಮಾಜಿಕ ತದ್ವಾರಾ ಆರ್ಥಿಕ ಕಷ್ಟನಷ್ಟಗಳ ಅಪಘಾತಕ್ಕೀಡಾದ ದುರ್ದೆಶೆಯೂ ಭಾರತೀಯ ಇತರ ಶಾಸ್ತ್ರಗಳಿಗೊದಗಿದ್ದಕ್ಕಿಂತಲೂ ಆಯುರ್ವೇದಕ್ಕೆ ಇಮ್ಮಡಿಯಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಕಳೆದುಳಿದಿರುವ ಅಲ್ಪಸ್ವಲ್ಪ ಗ್ರಂಥಗಳಲ್ಲಿ ಅನೇಕ ಅಪೂರ್ಣತೆ ಗಳೂ, ಅರ್ಥವಿಲ್ಲದ ಮತ್ತು ಅರ್ಥವಾಗದ ಹೊಸ ಹೊಸ ಸೇರುವಿಕೆಗಳೂ ಉಂಟಾಗಿ, ಈಗ ನಮಗೆ ಮಾನ್ಯವಾಗಿರುವ ಅನೇಕ ಪ್ರಧಾನ ಗ್ರಂಥಗಳೂ ಎಷ್ಟೋ ವಿಷಯಗಳಲ್ಲಿ ಎಷ್ಟೆಷ್ಟೋ ಸಂಶಯಗಳನ್ನು ತಂದೊಡ್ಡುತ್ತಿವೆ. ಮತ್ತೆ ಈಚೆಗೆ ರಚಿತವಾಗಿವೆಯೆಂದು ಹೇಳಿಕೊಳ್ಳುವ ಅನೇಕ ಗ್ರಂಥಗಳು ಮೂಲಗ್ರಂಥ ಗಳಲ್ಲಿ ಕೈಬಿಟ್ಟುಹೋಗಿರುವ ಅಥವಾ ಅಸ್ಪಷ್ಟವಾಗಿರುವ ವಿಚಾರಗಳನ್ನು ಸ್ಪಷ್ಟಪಡಿ ಸುವ ಬದಲು ಅವುಗಳಿಗೆ ಚ-ವೈ-ತು-ಹಿ ಗಳನ್ನು ಸೇರಿಸಿಕೊಳ್ಳುತ್ತಾ, ಹೊಸ ಹೊಸ ಹೆಸರುಗಳನ್ನು ಹೊಂದುತ್ತಾ ಹೋಗುತ್ತಿವೆ. ಇಂತಹ ನಿದರ್ಶನಗಳು ಸುಪ್ರಸಿದ್ಧ ಗ್ರಂಥವಾದ " ಮಾಧವನಿದಾನ " ದಲ್ಲೇ ಕಾಣಬರುತ್ತಿವೆ. ಆದರೆ ಅದರಲ್ಲಿ ದೋಷಗಳನ್ನು ಮಾತ್ರ ಹುಡುಕವುದಾದರೂ ಅದನ್ನು ದೂಷಿಸಬೇಕೆಂಬ ದೃಷ್ಟಿಯಿಂದಲ್ಲ. ಅದು ಬರಬರುತ್ತಾ ಹೇಗೆ ಇಳಿಮುಖವಾಗುತ್ತಿದೆಯೆಂಬ ವ್ಯಸನ ವನ್ನು ಸೂಚಿಸುವುದಕ್ಕೆ ಮಾತ್ರ. ಗ್ರಂಥ ಪ್ರಚಾರವಾಗಬೇಕಾದ್ದೇನೋ ಅತ್ಯಗ ತ್ಯವೆ. ಆದರೆ ಅವು ಆಯುರ್ವೇದ ಸಿದ್ಧಾಂತಗಳನ್ನು ಎತ್ತಿಹಿಡಿದು, ಅದೇ ಕ್ರಮ ದಲ್ಲಿ ಮುಂದುವರಿಯುವ ಮತ್ತು ನೂತನಾನ್ವೇಷಣಗಳಿಗೆ ಮಾರ್ಗದರ್ಶಕಗಳನ್ನಾಗಿ ಸುವ ಕ್ರಮದಲ್ಲಿಯೂ ಮುಂದುಸಾಗುವಂತೆ ಬೋಧೆಯಾಗುವ ಗ್ರಂಥಗಳು ಈಗ ಬೇಕಾಗಿವೆ. ಇಂತಹ ಗ್ರಂಥಗಳ ಬೆಳವಳಿಗೆಯು ಕಾರಣಾಂತರಗಳಿಂದ ನಿಂತು ಹೋಗಿ 300-400 ವರ್ಷಗಳಾಗಿ ಹೋದವು. ಈಗ್ಯೆ ಅಂತಹ ಅಡ್ಡಿವಿಡ್ಡೂರಗ ಳೊಂದೂ ಇಲ್ಲದುದರಿಂದ ಇನ್ನಾದರೂ ಈ ಕಾರ್ಯವು ಯಶಸ್ವಿಯಾಗುವುದಾದರೆ ಅದೇ ಆಯುರ್ವೇದಕ್ಕೆ ಪುನರುಜ್ಜೀವನವೆನ್ನಬಹುದು.

ಪ್ರಸಿದ್ಧರಾದ ವೃದ್ಧವೈದ್ಯರುಗಳು, ಆಧುನಿಕ ಮಾರ್ಗದರ್ಶನದಿಂದಲೂ ದ್ವಿಮುಖವಾದ ಜ್ಞಾನಾರ್ಜನೆಗಳನ್ನು ಮಾಡಿರುವ ನವೀನ ವೈದ್ಯಶ್ರೇಷ್ಠರುಗಳು ಈ ಕಡೆಗೆ ಗಮನಕೊಟ್ಟಲ್ಲದೆ ಗತ್ಯಂತರವೇ ಇಲ್ಲ. ಮೇಲಾಗಿ ಆಯುರ್ವೇದವು ಗೀರ್ವಾ ಣಭಾಷೆಯಲ್ಲಿ ಬರೆಯಲ್ಪಟ್ಟ ಉಚ್ಚಗ್ರಂಥಗಳನ್ನುಳ್ಳದ್ದಾದ್ದರಿಂದ ಆ ಭಾಷೆಯಲ್ಲಿ

ಪೂರ್ಣ ಜ್ಞಾನ ಸಂಪಾದಿಸಲು ಆಗುವ ಸಂಭವವಿಲ್ಲದ ಈ ಕಾಲದಲ್ಲಿ ಅಂತಹ ಗ್ರಂಥಗಳನ್ನು ದೇಶೀಯ ಭಾಷೆಗಳಿಗೆ ಸಶಾಸ್ತ್ರೀಯವಾಗಿಯೂ ಸಯುಕ್ತಿಕವಾಗಿಯೂ ಪರಿವರ್ತಿಸಿ ಸಿದ್ಧಪಡಿಸಿದಲ್ಲದೆ ಇನ್ನುಮುಂದೆಆಯುರ್ವೇದದ ಹೆಸರೇ ಉಳಿಯುವುದು ಕಷ್ಟವಾಗಬಹುದೆಂದರೂ ಅತಿಶಯೋಕ್ತಿಯಾಗಲಾರದು. ಈ ಕಾರ್ಯವು ಈಗಾಗಲೇ ಬಂಗಾಳಿ, ಮರಾಠಿ, ಹಿಂದಿ ಭಾಷಾಭಿಮಾನಿಗಳಿಂದ ಬಹುಮಟ್ಟಿಗೆ ಮುಂದೆಸಾಗಿದೆಯಾದರೂ, ಕನ್ನಡಭಾಷೆಯಲ್ಲಿ ಇಲ್ಲವೆಂದೇ ಹೇಳಬಹುದು. ಈಗೀಗ ಅಷ್ಟಾಂಗ ಹೃದಯದ ಸೂತ್ರಸ್ಥಾನಕ್ಕೆ ಮಾತ್ರ ಕನ್ನಡ ಭಾಷಾನುವಾದವು ಶ್ರೀಯುತ ಪಂಡಿತವರ್ಯರಾದ ಆದ್ಯ ಆನಂತಾಚಾರ್ಯರಿಂದಲೂ, ಪತ್ರಿಕಾಪ್ರಕಾಶಕರಾದ ಮಾನ್ಯಶ್ರೀ ಹಲಸೀಕರರು, ಹುಬ್ಬಳ್ಳಿಯವರಿಂದಲೂ ಹೊರಬಿದ್ದಿರುವುದು ಅಭಿನಂದನೀಯವಾದುದೇ. ಆದರೂ ಇನ್ನೂ ಎಷ್ಟೋಗ್ರಂಥಗಳು ಮುಂದೆಬರಬೇಕು. ಪದಾರ್ಥಗಳ ನಾಮರೂಪಗುಣಧರ್ಮಗಳನ್ನು ಯಥಾವತ್ತಾಗಿ ಸ್ಪಷ್ಟಪಡಿಸಿ ಅವುಗಳ ಕಾರ್ಯವಿಭಾಗಗಳನ್ನು ವಿಶದೀಕರಿಸುವ ದ್ರವ್ಯಗುಣಗ್ರಂಥವು ಕನ್ನಡದಲ್ಲಿ ಆಗಬೇಕಾದದ್ದು ಅತಿ ಜರೂರಾದ ವಿಷಯ—ಈ ಕಾರ್ಯವನ್ನು ಮೈಸೂರಿನ ನನ್ನ ಮಿತ್ರರೊಬ್ಬರು ಕೈಗೊಂಡಿರುವರೆಂದೂ ಅದು ಕ್ಷಿಪ್ರದಲ್ಲೇ ಹೊರಬೀಳಬಹುದೆಂದೂ ಕೇಳಿ ಆನಂದಿಸಬಹುದಾಗಿದೆ. ಇರಲಿ— ಈ ಶಸ್ತ್ರಾರ್ಥವಿಚಾರಗಳನ್ನು ವಿಚಾರಿಸುತ್ತಾ ಕೂತು ತಮಗೆಲ್ಲಾ ಬೇಜಾರುಪಡಿಸುವುದು ಯುಕ್ತವಾಗಿ ತೋರುವುದಿಲ್ಲ. ಇದಕ್ಕಾಗಿ ಇಲ್ಲಿ ಏರ್ಪಟ್ಟಿರುವ ವಿವಿಧ ಪರಿಷತ್ತುಗಳ ಪಾಲಿಗೆ ಅದನ್ನು ಬಿಡೋಣ.

ಮಿತ್ರರೇ, ನನ್ನ ಮೇಲಿನ ಈ ಮಾತುಗಳಿಂದ ನಾನು ಆಯುರ್ವೇದಕ್ಕೆ ಪ್ರಧಾನತಮಗಳಾದ ಪ್ರಮಾಣಗ್ರಂಥಗಳನ್ನು ವಿಮರ್ಶಿಸಿರುವಿನೆಂದು ಭಾವಿಸಬೇಡಿ. ಆಯುರ್ವೇದವು ಸರ್ವ ವೈದ್ಯಶಾಸ್ತ್ರಗಳಿಗೂ ಜನಕನಂತಿರುವುದು. ಅದು ಲೇಖಕ, ಮುದ್ರಾಪಕ, ಸಂಸ್ಕರ್ತೃಕಗಳ ಪ್ರಮಾದಗಳಿಂದ ಕೆಲವು ಸಂಶಯಗಳಿಗೆ ಆಸ್ಪದವನ್ನು ಕೊಡುತ್ತಿರುವುದು. ಇದು ವಿದ್ಯಾರ್ಥಿಗಳ ಜ್ಞಾನಕ್ಕೂ ಸಂಶಯವನ್ನುಂಟುಮಾಡುತ್ತೆ. ಆದಕಾರಣ ವಿಜ್ಞರೂ, ಕುಶಲರೂ, ಆದ ಆಯುರ್ವೇದಾಭಿಜ್ಞರು ಇದನ್ನು ನಿಸ್ಸಂಶಯವನ್ನಾಗಿ ಮಾಡಬೇಕೆಂದು, ನನಗೆ ತೋಚಿದ್ದನ್ನು ವಿಜ್ಞಾಪಿಸಿರುವೆನು.

ಆಯುರ್ವೇದಕ್ಕೆ ರಾಜಾವಲಂಬನವು ಅವಶ್ಯಕವು—ಅದನ್ನು ಸಂಪಾದಿಸುವುದು ಹೇಗೆ? ಇರುವ ಅಥವ ಬರುವ ಮಾನ್ಯತೆಯನ್ನು ಯುಕ್ತರೀತಿಯಿಂದ ನಿರ್ವಹಿಸಿಕೊಳ್ಳುವುದು ಹೇಗೆ, ಎಂಬಿವುಗಳು ಈಗ ನಮ್ಮ ಮುಂದೆ ನಿಂತಿರುವ ಪ್ರಬಲವಾದ ಪ್ರಶ್ನೆಗಳು ಮತ್ತು ಪ್ರಯತ್ನಗಳು. ನಾವೆಲ್ಲರೂ ಇಲ್ಲಿ ಸೇರಿರುವ ಈ

ಸುಸಮಯದಲ್ಲಿ ಈ ಕಾರ್ಯಗಳ ಸಾಧನೆಗೆ ತಕ್ಕ ಉಪಾಯಗಳನ್ನು ಸಿದ್ಧಾಂತಗೊಳಿಸುವುದು ಮುಖ್ಯಕರ್ತವ್ಯವಾಗಿದೆಯೆಂಬುದನ್ನು ತಾವುಗಳು ಮನಸಾ ನಿರ್ಧರಿಸಿ ಸಹಕರಿಸುವಿರೆಂದು ನನಗೆ ಪೂರ್ಣ ನಂಬಿಕೆಯಿದೆ. ನಮ್ಮ ಅನುಕೂಲಗಳ ಕಡೆಗೆ ನಾವು ನಿರ್ಲಕ್ಷಿಸದೆ "ಉದ್ಧರೇದಾತ್ಮನಾತ್ಮಾನಂ"ಎಂಬ ಗೀತಾವಾಕ್ಯವನ್ನು ನಮ್ಮ ಕೈದೀವಿಗೆಯನ್ನಾಗಿ ಮಾಡಿಕೊಂಡು ಮುಂದುವರಿಯೋಣ. ಶ್ರೀ ಧನ್ವಂತರಿಯು ಎಂದೂ ನಮ್ಮನ್ನು ಕೈಬಿಡುವುದಿಲ್ಲವೆಂದು ದೃಢನಿಶ್ಚಯಮಾಡೋಣ.

ಹೀಗಾಗಲು ಮುಖ್ಯವಾಗಿ ವೈದ್ಯರಾದ ನಾವುಗಳು ನಮ್ಮಲ್ಲಿರಬಹುದಾದ ಲೋಪದೋಷಗಳನ್ನು ತಿದ್ದಿಕೊಂಡಲ್ಲದೆ ಸಾಧ್ಯವೇ ಇಲ್ಲ. ಆ ಪೈಕಿ ಎಲ್ಲಕ್ಕಿಂತಲೂ ಪ್ರಬಲವಾದವೆಂದರೆ ನಮ್ಮನಮ್ಮಲ್ಲಿರುವ ಅನೈಕಮತ್ಯ. ಅಕಾರಣ ದ್ವೇಷಾಸೂಯಗಳು ಮತ್ತು ಜ್ಞಾನಲೌಭ್ಯ. ಮಿತ್ರರೆ, ನಮ್ಮೆದುರಿದಿಗೆ ಮಾನ್ಯರಾಗಿ ವಿಜೃಂಭಿಸುತ್ತಿರುವ ನಮ್ಮ ಆಲೋಪತಿ ವೈದ್ಯಸೋದರರಿಂದ ನಾವು ಮುಖ್ಯವಾಗಿ ಗ್ರಹಿಸಬೇಕಾದದ್ದೆಂದರೆ ಈ ಮೇಲಿನ ದೋಷಗಳ ರಾಹಿತ್ಯ. "ನ ಹಿ ಸರ್ವಃ ಸರ್ವಂ ಜಾನಾತಿ" ಎಂಬ ನಾಣ್ಣುಡಿಯಂತೆ ಮಾನವನ್ಯಾವನೊಬ್ಬನಿಗೂ ಸರ್ವಜ್ಞತ್ವವು ಸಿದ್ಧಿಸಿಲ್ಲವು. ಹೀಗಿರುವಲ್ಲಿ ನಾವುಗಳು ಮಾತ್ರ ಒಬ್ಬೊಬ್ಬರೇ ಆಯುರ್ವೇದದ ಎಲ್ಲ ಭಾಗಗಳನ್ನೂ ಕಾರ್ಯನಿರ್ವಾಹವನ್ನೂ ಬಲ್ಲೆವೆಂದು ಊಹಿಸಿಕೊಳ್ಳುವುದಾದರೂ ಹೇಗೆ? ಎಂದೂ ಸಾಧ್ಯವಿಲ್ಲ. ಆದುದರಿಂದ ನಮ್ಮ ಮಿತ್ರರಿಂದಲೂ, ಹಿರಿಯರಿಂದಲೂ ಗುರುಗಳಿಂದಲೂ, ಸಾಮಾನ್ಯ ಅನುಭವಿಗಳಿಂದಲೂ ಕೂಡ ತಿಳಿದುಕೊಳ್ಳಬೇಕಾದದ್ದು ಎಷ್ಟೋ ಇದೆ. "ಕಿರಾತಗೋಪಾಲಕ............ತೇಭ್ಯಃ ಸಕಾಶಾದುಪಲಭ್ಯವೈದ್ಯಃ ಪಶ್ಚಾತ್ ಸ್ವಶಾಸ್ತ್ರೇಣವಿಮೃಶ್ಯಬುಧ್ಯಾ" ಇತ್ಯಾದಿ ಹಿತವಾಕ್ಯಗಳನ್ನು ಮರೆಯದೆ ನಾವೆಲ್ಲರೂ ಒಟ್ಟಿಗೆ ಕಲೆತು ಒಮ್ಮನಸ್ಸಿನಿಂದ ಮುಂದುವರಿಯೋಣ–ಯಥಾಶಕ್ತಿ ಜ್ಞಾನವಿಜ್ಞಾನಗಳನ್ನು ಪರಸ್ಪರ ವಿನಿಮಯಮಾಡಿಕೊಂಡು ವೃದ್ಧಿಹೊಂದೋಣ.

ಹೀಗೆ ನಾವುಗಳು ವಿಚಾರಶೀಲರಾಗಿ, ವೈದ್ಯಃಗಿರಬೇಕೆಂದು ಆಯುರ್ವೇದದಲ್ಲಿ ವಿಧಿಸಲ್ಪಟ್ಟಿರುವ ಲಕ್ಷಣಸಂಪನ್ನರಾಗುತ್ತ ಬಂದರೆ, ನಾಗರಿಕರಲ್ಲಿ ನಮ್ಮ ಪಾಲಿಗೆ ಬರಬೇಕಾದ ಸ್ಥಾನಮಾನಗಳು ತಾವಾಗಿಯೇ ಬರುವವೆಂಬುದರಲ್ಲಿ ಸಂಶಯವಿಡಬೇಕಾದದ್ದೇ ಇಲ್ಲ. ನಾವೆಲ್ಲರೂ ಸುಸಂಘಟಿತರಾಗಬೇಕು. ಶಾಸ್ತ್ರಜನ್ಯಜ್ಞಾನವನ್ನು ಸಂಪಾದಿಸಬೇಕು. ನಾವು ಕೇವಲ ಬಡತನದಿಂದಲೇ ಜೀವಿಸಿದರೂ ನಮ್ಮ ಮತ್ತು ನಮ್ಮ ವೃತ್ತಿಯ ಆತ್ಮಗೌರವಕ್ಕೆ ಎಂದಿಗೂ ಕುಂದಕಬರದಂತೆ ಕಾಪಾಡಿಕೊಳ್ಳಲೇ

ಬೇಕೆಂದು ದೃಢಪ್ರತಿಜ್ಞಾವಂತರಾಗಬೇಕು. ಹಾಗಾಗಲು ಇಂತಹ ಸಮ್ಮೇಳನಗಳು ಪೂರ್ಣಸಹಕಾರಿಗಳೆಂಬುದರಲ್ಲಿ ಅಡ್ಡಿಯಿಲ್ಲ.

ಸಭ್ಯಮಹಾಶಯರೇ, ಈ ದೇಶಕ್ಷೋಭಕ ಸಮಯದಲ್ಲಿ ಪ್ರಾಂತೀಯ ಸುಭೌಷಧದ್ರವ್ಯಗಳಲ್ಲದೆ ರುಗ್ಣರಿಗೆ ಆರೋಗ್ಯದಾಯಕಗಳಾಗುವ ಔಷಧಗಳು ಬೇರೆ ಯಾವುದು ಕಾಣಿಸುತ್ತವೆ? ತತ್ಸತ್ಯಥಾಪ್ರಕಟನಕ್ಕೆ ಉದ್ಯುಗ್ರರಾಗಿರಿ. ಸಹಾಯಕರಾಗಿರಿ. ದ್ವಾದಶವರ್ಷಪ್ರಾಯಳಾದ ಈ ನಿ. ಕ. ಆ. ಮ. ಕನ್ಯಕೆಯನ್ನು ಪಾಲಿಸುವುದಕ್ಕೆ ಈ ಸುವಿಸ್ತೀರ್ಣವಾದ ಕನ್ನಡನಾಡಿನಲ್ಲಿ ಜ್ಞಾನ, ಧನ, ಶಕ್ತಿ, ಯುಕ್ತಿಗಳಿಂದ ಪ್ರಕಾಶಿತವಾಗಿರುವ ಈ ಕನ್ನಡ ವಿಶ್ವದಲ್ಲಿ ಸಭ್ಯರ ಸಂಖ್ಯೆಯನ್ನು ಗಣಿಸಿದರೆ ಸ್ವಲ್ಪವಾಗಿ ಕಂಡುಬರುತ್ತದೆ. ಇದು ವಿಚಾರಣೀಯವು. ಈ ಕೊರತೆಯನ್ನು ಪರಿಹರಿಸಿರಿ.

ಪ್ರಜ್ಞಾಶಾಲಿಗಳಾದ ಆಯುರ್ವೇದ ಭಟ್ಟಾರಕರೇ ಗುರುಕುಲಗಳನ್ನು ಸ್ಥಾಪಿಸಿರಿ. ಲುಪ್ತವಾಗಿರುವ ವೈದ್ಯತಂತ್ರ ಗ್ರಂಥಗಳನ್ನು ಉದ್ಧರಿಸಿರಿ. ವನಸ್ಪತಿಗಳನ್ನು ಪೋಷಿಸಿರಿ. ಶಾಸ್ತ್ರಕ್ಕೂ, ಅನುಭವಕ್ಕೂ ತಾರತಮ್ಯಗಳನ್ನು ತಿಳಿದುಕೊಳ್ಳಿ. ಸದೌಷಧ ನಿರ್ಮಾಣವಿಧಿಗಳಿಗೆ ಅವಕಾಶಕೊಡಿ. ನಮ್ಮ ಬಡ ಹಳ್ಳಿಗಳ ಬಡವರನ್ನು ಕಣ್ಣೆತ್ತಿನೋಡಿ. ಸರ್ವವಿಧಗಳಿಂದಲೂ, ಸತ್ಯಶೋಧನವನ್ನು ಮಾಡಿರಿ. ಈ ನನ್ನ ಭಾಷಣದಲ್ಲಿ ಯಾರನ್ನೂ ನಿಂದಿಸಬೇಕೆನ್ನುವ ಉದ್ದೇಶ್ಯವಿಲ್ಲ. ಸತ್ಯಸಿದ್ಧಾಂತಗಳನ್ನು ಮಾಡಿ, ಭಾವೀ ವೈದ್ಯರಿಗೂ, ಪ್ರಪಂಚಕ್ಕೂ, ಸತ್ಯಮಾರ್ಗವನ್ನು ತೋರಿಸಬೇಕೆಂದು, ದಿಗ್ದರ್ಶನದಿಂದ ನನಗೆ ತೋಚಿದಂಶಗಳನ್ನು ಹೊರಪಡಿಸಿರುವೆನು. ಯಥಾರ್ಥಗಳನ್ನು ಪರಿಗ್ರಹಿಸಿರಿ.

**ವೈದ್ಯ ಸೋದರಸೋದರಿಯರೇ,**

ಆಯುರ್ವೇದ ವೈದ್ಯರು ಬಲಗೈಯನ್ನೋ ಎಡಗೈಯನ್ನೋ ಸ್ಪರ್ಶಿಸಿ ಆವುದೋ ಚೂರ್ಣವನ್ನೋ ಆಸವವನ್ನೋ ಕೂಪ್ಯೌಷಧಿಯನ್ನೋ ಕೊಡುವರೆಂದು ಕೆಲವರು ಹೇಳುತ್ತಾರೆ. ಅಂತರ್ಯೋಗ ಪಟುಗಳಾಗಿ ಆತ್ಮನಿಷ್ಠತೆಯಿಂದೆ ಅಂತರ್ ದೃಷ್ಟಿಯೊಡನೆ ನಾಡೀ ಜ್ಞಾನವನ್ನು ಗಮನಿಸಿರಿ. ಅಷ್ಟಸ್ಥಾನ ಪರೀಕ್ಷೆಗಳನ್ನು ನಿಯಮಪೂರ್ವಕವಾಗಿ ನಿರ್ಣಯಿಸುವುದಕ್ಕೆ "ರುಗ್ಣ ಪರೀಕ್ಷಾಸೂಚಿ" ಯನ್ನು ಆಯುರ್ವೇದ ಪದ್ಧತಿಯಪ್ರಕಾರ ಆಚರಣೆಯಲ್ಲಿ ತರಲು, ಗಮನಕೊಡಿ. ಇದರಿಂದ ರೋಗವಿಜ್ಞಾನವೂ ಸುಲಭವು. ಚಿಕಿತ್ಸೆಯೂ ಸುಖಕರವು.

ವಿದ್ಯಾರ್ಥಿಗಳೇ,

ಉದ್ಯೋಗಗಳಿಗೆ ಮಾತ್ರ ಅಲ್ಲ ನಿಮ್ಮ ವಿದ್ಯಾಭ್ಯಾಸವು; ಕಾಮಾರ್ಥ ಪೂರ್ತಿ ಮಾತ್ರಕ್ಕೆ ಅಲ್ಲ. ನಿಮ್ಮ ಒಳಜೀವಿತವು ತತ್ವಬೋಧಿತವಾಗಿರಬೇಕು. ಜ್ಞಾನ ಜ್ಯೋತಿಯಿಂದ ಯಾವನು ಅಖಿಲ ಪ್ರಪಂಚವನ್ನು ಸುಪ್ರಕಾಶವಂತವಾಗಿ ಮಾಡುವನೋ ಅವನೇ ಸದ್ಗುರು. ಅಂತಹ ಸದ್ಗುರುವನ್ನು ಆಶ್ರಯಿಸಿ, ನಿಮ್ಮ ಜೀವಿತವನ್ನು, ನಿಮ್ಮ ಜಾತಿಯನ್ನು, ನಿಮ್ಮ ದೇಶವನ್ನು, ನಿಮ್ಮ ವಂಶವನ್ನು, ನಿಮ್ಮ ಸ್ಥಾನಮಾನ ಮರ್ಯಾದೆಗಳನ್ನು ಸುಪ್ರಕಾಶಸಂಪನ್ನಗಳಾಗಿರುವಂತೆ ಮಾಡಿ ನಿಮ್ಮ ಚಿರಂಜೀವಿಗಳಿಗೆ ನೀವುಗುರುಗಳಾಗಬೇಕು. ವೇದಗಳು ನಿಮ್ಮವು. ದರ್ಶನಗಳು ನಿಮ್ಮವು, ಶಾಸ್ತ್ರಗಳು ನಿಮ್ಮವು, ತಂತ್ರಗಳು ನಿಮ್ಮವು, ವಿಜ್ಞಾನರಲ್ಲಿ ಅಗ್ರಗಣಿಗಳು ನೀವು. ನಿಮ್ಮ ಆಯುರ್ವೇದವನ್ನು ದಿಗಂತಗಳಲ್ಲಿ ಸುಪ್ರಕಾಶಿತಮಂ ಮಾಡಿರಿ.

ಮಾನ್ಯರೇ, ತಮ್ಮಗಳೆಲ್ಲರಿಗೂ ನಾಲ್ಕಾರುಭಾಷೆಗಳ ಸಾಂಕರ್ಯತೆಯುಳ್ಳ ನನ್ನ ಬಳ್ಳಾರಿಯ ಕನ್ನಡದ ನುಡಿಗಳಿಂದ ಬಹಳ ಬೇಸರಿಕೆಯನ್ನು ಉಂಟುಮಾಡಿರುತ್ತೇನೆ. ಆದರೂ ಸತ್ಯನಿರ್ಣಯವನ್ನು ಮಾಡಿ ಆಯುರ್ವೇದವನ್ನು ಸುಪ್ರಕಾಶವಾಗುವಂತೆ ಮಾಡಬೇಕೆಂದು, ವಿಜ್ಞಾಪಿಸುತ್ತಾ ಈ ಒಂದೆರಡು ಮಾತುಗಳಿಂದ ನನ್ನ ಭಾಷಣವನ್ನು ಮುಗಿಸುವೆನು.

ಸ್ವಸ್ತಿಪ್ರಜಾಭ್ಯಃ ಪರಿಪಾಲಯಂತಾಂ ನ್ಯಾಯೇನಮಾರ್ಗೇಣ
ಮಹೀಂಮಹೀಶಾಃ

ಇತಿ ಶಿವಮ್.

ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿ.

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941



ಶ್ರೀ॥ ಗಂಗಾಧರವಿಷ್ಣುಶಾಸ್ತ್ರೀ ಪುರಾಣೀಕ್
ಪ್ರೊ-ಧೂತಾಪಾಪೇಶ್ವರ ಆ॥ ಫಾರ್ಮಸಿ, ಪನವೇಲ್.

(ಪ್ರದರ್ಶನೋದ್ಘಾಟಕರು)



ಶ್ರೀ॥ ಆಯುರ್ವೇದತೀರ್ಥ ಅನಂತಾಚಾರ್ಯರು,
ಎಡಿಟರ್, ನಿ. ಕ. ಆ. ಸಮ್ಮೇಳನ ಪತ್ರಿಕಾ, ಬಿಜಾಪುರ.

(ನಿ. ಕ. ಆ. ಮಂಡಳದ ವಿಶ್ರಾಂತ ಅಧ್ಯಕ್ಷರು)

**ತಾ|| ೨೮—೧೨—೧೯೪೧ ರ ಮಧ್ಯಾಹ್ನ ೨-೩೦ಯಿಂದ ರಾತ್ರಿ ೧೨ ಗ.ವರೆಗೆ ಎಗ್ಸಿಬಿಷನ್ ಕಟ್ಟಡದಲ್ಲಿ**

ಮಧ್ಯಾಹ್ನ ೨-೩೦ ಗಂಟೆಗೆ ಸರಿಯಾಗಿ **ಚಿಕಿತ್ಸಾಸಂಭಾಷಾ ಪರಿಷತ್ತು** ಶ್ರೀಧನ್ವಂತರಿ ಪ್ರಾರ್ಥನೆಯೊಡನೆ ಪ್ರಾರಂಭವಾಯಿತು.

ಗದಗಿನ ಸುಪ್ರಸಿದ್ಧ ವೈದ್ಯರಾದ ಆಯುರ್ವೇದ ವಿದ್ವಾನ್ ಪಂ|| **ಡಿ. ವಿ. ರಾಮುರಾಯರವರು** ಅಗ್ರಾಸನವನ್ನು ವಹಿಸಿದ್ದರು. ಸಮ್ಮೇಳನಾಧ್ಯಕ್ಷರೇ ಮೊದಲಾಗಿ ವೈದ್ಯರಿಂದಲೂ ಪ್ರೇಕ್ಷರಿಂದಲೂ ಸಭೆಯು ತುಂಬಿತ್ತು.

ಶಿವಮೊಗ್ಗಾದಲ್ಲಿನ ಪ್ರಸಿದ್ಧ ವೈದ್ಯರಾದ ಶ್ರೀಯುತ **ವೈ. ಪಾರ್ಥನಾರಾಯಣ ಪಂಡಿತರವರು** ಆರಂಭ ಭಾಷಣಮಾಡಿ ಆಯುರ್ವೇದ ಚಿಕಿತ್ಸಾ ಮರ್ಮವನ್ನು ಹೊರಗೆಡಹಿದರು.

ಅಧ್ಯಕ್ಷರು ತಮ್ಮ ಅಮೂಲ್ಯವಾದ ಮತ್ತು ಸುದೀರ್ಘವಾದ ಭಾಷಣದಿಂದ ಆಯುರ್ವೇದದ ಹಿರಿಮೆಯನ್ನೂ, ಅದರ ಚಿಕಿತ್ಸಾ ವೈಶಿಷ್ಟ್ಯವನ್ನೂ, ಅದು ಇತರ ವೈದ್ಯಶಾಸ್ತ್ರಕ್ಕಿಂತಲೂ ಎಂದೂ ವೈಜ್ಞಾನಿಕ ದೃಷ್ಟಿಯಿಂದ ಹಿಂದುಬಿದ್ದಿಲ್ಲವೆಂದೂ ಸ್ಪಷ್ಟವಾಗಿ ತಿಳಿಯುವಂತೆ ವಿವರಿಸಿದರು.

ಪ್ರಬಂಧಗಳು ಮತ್ತು ಭಾಷಣಗಳೂ ಜರುಗಿ ವೈದ್ಯ ಸದಸ್ಯರೂ ಆ ವಿಚಾರಗಳ ಮೇಲೆ ತಮ್ಮ ತಮ್ಮ ಸಂಶಯಗಳನ್ನೂ ಅನುಭವಗಳನ್ನೂ, ಮುಂದಿಟ್ಟು ಚರ್ಚಿಸಿದರು. ಶಾಂತರೀತಿಯಿಂದ ದೊರೆತ ಸಮಂಜಸವಾದ ಉತ್ತರಗಳಿಂದ ವಾತಾವರಣವು ಬಹು ತೃಪ್ತಿಕರವಾಗಿತ್ತು. ಪುಷ್ಪಹಾರ ವಿನಿಯೋಗವೂ ವಂದನಾ ಸಮರ್ಪಣೆಯೂ ಆದಮೇಲೆ ಸಾಯಂಕಾಲ ೫-೩೦ ಗಂಟೆಗೆ ಈ ಪರಿಷತ್ತಿನ ಕಾರ್ಯವು ಪೂರೈಸಿತು.

ಆಮೇಲೆ ಸಂಜೆ ೬ ಗಂಟೆಗೆ ಸರಿಯಾಗಿ **ಆಯುರ್ವೇದ ವಸ್ತುಪ್ರದರ್ಶನೋದ್ಘಾಟನ ಸಮಾರಂಭವು** ಪ್ರಾರಂಭವಾಯಿತು.

ಎಗ್ಸಿಬಿಷನ್ ಕಟ್ಟಡದಲ್ಲಿ ಪ್ರದರ್ಶನಾಲಯದ ಎದುರಿನಲ್ಲಿ ಹಾಕಿದ್ದ ಭವ್ಯವಾದ ಚಪ್ಪರದಲ್ಲಿ ವೈದ್ಯರೂ ಮಾನ್ಯ ಅತಿಥಿಗಳೂ ಆಹ್ವಾನಿತರೂ ಕಿಕ್ಕಿರಿದು ನೆರೆದಿದ್ದರು. ಮಹಿಳೆಯರಿಗೆ ಪ್ರತ್ಯೇಕ ಸ್ಥಳ ಏರ್ಪಟ್ಟಿದ್ದಿತು. ಮಾನ್ಯ ಮಂತ್ರಿವರ್ಯ ಶ್ರೀ ಹೆಚ್. ಬಿ. ಗುಂಡಪ್ಪಗೌಡರು ಸಹಾ ಸಕಾಲಕ್ಕೆ ದಯಮಾಡಿಸಿ ಸಭೆಯನ್ನಲಂಕರಿಸಿದ್ದರು. ಸಭಿಕರ ಸಂತೋಷಕರವಾದ ಕರತಾಡನಗಳ ಮಧ್ಯೆ ಪನವೇಲಿನ ಆಯುರ್ವೇದ ಔಷಧಿ ಕಾರ್ಖಾನೆಯ ವ್ಯವಸ್ಥಾಪಕರಾದ ಶ್ರೀಯುತ **ವೈದ್ಯಗಂಗಾಧರ ವಿಷ್ಣುಶಾಸ್ತ್ರೀಪುರಣೀಕರವರು** ದಯಮಾಡಿಸಿ ಅಗ್ರಾಸನವನ್ನು ವಹಿಸಿದ್ದರು.

ಬಾಲಕಿಯರಿಂದ ಮಂಗಳಗಾನವಾದ ನಂತರ ಪ್ರದರ್ಶನ ಶಾಖಾಧ್ಯಕ್ಷರಾದ ಶ್ರೀಮಾನ್ ಎನ್. ನಾಗೇಶರಾಯರು ಎಂ.ಎ. ರವರು ತಮ್ಮ ಪರಿಚಯ ಭಾಷಣದಿಂದ ಶ್ರೀ ಪುರಾಣೀಕರನ್ನೂ, ಈ ಪ್ರದರ್ಶನದ ವ್ಯವಸ್ಥಾ ಕ್ರಮವನ್ನೂ ಸಭಿಕರಿಗೆಲ್ಲಾ ಪರಿಚಯಮಾಡಿಕೊಟ್ಟರು.

ಅನಂತರ ಶ್ರೀಪುರಾಣೀಕರು ತಮ್ಮ ಅತ್ಯುತ್ತಮವಾದ ಮತ್ತು ಆಶಾಪೂರ್ಣವಾದ ಭಾಷಣವನ್ನು ಇಂಗ್ಲಿಷಿನಲ್ಲಿ ಓದಿ, ತಮ್ಮ ಅನುಭವಗಳನ್ನು ಸಭಿಕರ ಮೆಚ್ಚಿಗೆಗೆ ಪಾತ್ರವಾಗುವ ರೀತಿಯಲ್ಲಿ ವಿವರಿಸಿ, ಆಯುರ್ವೇದ ವೈದ್ಯ ವಸ್ತುಗಳ ಸಂಗ್ರಹ, ಅವುಗಳ ಸಂಪಾದನೆ ಮುಂತಾಗಿ ಅಮೋಘವಾದ ಅಭಿಪ್ರಾಯಗಳನ್ನು ಸ್ಪಷ್ಟಪಡಿಸಿದರು. ಅವರ ಭಾಷಣದ ಕನ್ನಡ ಪ್ರತಿಗಳನ್ನು ಸಭೆಯಲ್ಲಿ ಹಂಚಿದರು.

ನಂತರ ಪುಷ್ಪಹಾರಗಳೂ ವಂದನಾಸಮರ್ಪಣೆಯೂ ಆದಮೇಲೆ ಪ್ರದರ್ಶನವು ತೆರೆಯಲ್ಪಟ್ಟಿತೆಂದು ಉದ್ಘೋಷಿಸಿ ಸಭೆಯನ್ನು ಬರಖಾಸ್ತು ಮಾಡಿದರು.

ತರುವಾಯ ಮುಖ್ಯ ಅತಿಥಿಗಳನ್ನು ಕರೆದುಕೊಂಡುಹೋಗಿ ಶ್ರೀಮಾನ್ ಎನ್. ನಾಗೇಶರಾಯರವರು ಅನೇಕ ಪ್ರದರ್ಶಕರ ಮತ್ತು ಅವರವರ ವಿಶೇಷ ವಸ್ತುಗಳ ಪರಿಚಯ ಮಾಡಿಕೊಟ್ಟರು.

ಮೈಸೂರಿನ ನಿಯೋಫಾರ್ಮಸಿಯ ವ್ಯವಸ್ಥಾಪಕರಾಗಿಯೂ ಉಭಯ ವೈದ್ಯ ಶಾಸ್ತ್ರದಲ್ಲೂ ಪ್ರವೀಣರಾಗಿಯೂ ಇರುವ ಆಯುರ್ವೇದ ವಿದ್ವಾನ್ **ಡಾ॥ ಎ.** ಎಸ್. ಸುಬ್ರಹ್ಮಣ್ಯಶಾಸ್ತ್ರಿ, ಎಲ್.ಎಂ.ಪಿ. ಇವರು ವಿಷಮಜ್ವರಗಳಲ್ಲಿ ಅವಸ್ಥಾ ಭೇದಗಳನ್ನನುಸರಿಸಿ ವೈದ್ಯರು ಕಾಣುವ ನಾಡೀ ಗತಿಗಳ ಸ್ಥಿತಿಗೆ ತಕ್ಕಂತೆ ಆಯಾ ರೋಗಿಯ ರಕ್ತದಲ್ಲಿನ ಬದಲಾವಣೆಗಳನ್ನು ನೋಡಲನುಕೂಲವಾಗಿ ಅಂತಂತಹ ರಕ್ತದ ಮಾದರಿಗಳನ್ನು ಕೂಡಿಟ್ಟದ್ದೂ, ಪ್ರತ್ಯಕ್ಷ ಪ್ರದರ್ಶನ ಮಾಡಿದ್ದುದೂ ಮಸೂರಿಕಾ (SMALL-POX)ಕ್ಕೆ ರುದ್ರಾಕ್ಷಿಯ ಚಿಕಿತ್ಸೆಯ ಅನುಭವ ಇವುಗಳನ್ನು ಸಚಿತ್ರವಾಗಿಯೂ ಶಾಸ್ತ್ರಾಧಾರಗಳಿಂದಲೂ ಪ್ರದರ್ಶಿಸಿದ್ದುದೂ ಒಂದು ವಿಶೇಷದ ಸಂಗತಿ. ಇದನ್ನೆಲ್ಲಾ ಪರಾಂಬರಿಸಿದ ಸಮ್ಮೇಳನಾಧ್ಯಕ್ಷರಾದ ಶ್ರೀಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳು ತಮ್ಮ ಸಂತೋಷವನ್ನು ವ್ಯಕ್ತಪಡಿಸಿ, ಅವರಿಗೆ ತಮ್ಮ ಸ್ವಂತ ಖರ್ಚಿನಿಂದ ಒಂದು ಸುವರ್ಣ ಪದಕವನ್ನು ಕೊಡಲು ಪ್ರಕಟಿಸಿದರು.

**ಆ ದಿನ ರಾತ್ರಿ ೮-೩೦ ಗಂಟೆಗೆ ಸರಿಯಾಗಿ ವಿಷಯನಿಯಾಮಕ ಸಮಿತಿಯು** ಸಮ್ಮೇಳನಾಧ್ಯಕ್ಷರ ನೇತೃತ್ವದಲ್ಲಿ ಸೇರಿ, ರಾತ್ರಿ ೧೨ ಗಂಟೆಯವರೆಗೂ ಚರ್ಚಿಸಿ, ನಿ. ಕ. ಆ. ಮಂಡಳದ ಪರವಾಗಿಯೂ ಸ್ವಾಗತಸಮಿತಿಯ ಪರವಾಗಿಯೂ ಬಂದಿದ್ದ ಅನೇಕ ಪ್ರಸ್ತಾವಗಳ ಮೇಲೆ ತಮ್ಮ ನಿರ್ಣಯಗಳನ್ನು ನಿರ್ಮಾಣಮಾಡಿದ ಮೇಲೆ ಅಂದಿನ ಕಾರ್ಯಕಲಾಪಗಳು ಮುಗಿದವು.

ನಿಖಿಲ ಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941

**ಸಮ್ಮೇಳನಾಂಗವಾದ ಪರಿಷತ್ತುಗಳ ಅಧ್ಯಕ್ಷರುಗಳು.**



ಶ್ರೀ|| ಆ||ವಿ|| ಪಂ|| ಡಿ. ವಿ. ರಾಮರಾವ್ ದೇಸಾಯಿ,
ಮೆಡಿಕಲ್ ಆಫೀಸರ್, ಮ್ಯುನಿಸಿಪಲ್ ಆಯುರ್ವೇದಿಕ್
ಡಿಸ್ಪೆನ್ಸರಿ, ಗದಗ್.
(ಚಿಕಿತ್ಸಾಸಂಭಾಷಾಪರಿಷತ್)



ಶ್ರೀ|| ಆಯುರ್ವೇದಭೂಷಣ
ಪಂ|| ಎಂ. ವಿ. ಶಾಸ್ತ್ರಿಗಳವರು,
ಪ್ರೊ|| ಗೋಪಾಲಭೇಷಜಾಶ್ರಮ, ಮಂಗಳೂರು.
(ದ್ರವ್ಯಸಂಭಾಷಾಪರಿಷತ್)



ಶ್ರೀ|| ಪಂ|| ಬಿ. ಆರ್. ಪರಿದಾಸ್,
ಪ್ರೊ|| ಶ್ರೀ ಸಮರ್ಥ ಆಯುರ್ವೇದಿಕ್ ಫಾರ್ಮಸಿ,
ಮಂಗಳೂರು.
(ರಸಾಯನಸಂಭಾಷಾಪರಿಷತ್)



ಮೈಸೂರು

12 ನೇ ನಿಖಿಲ ಕರ್ಣಾಟಕ ಆಯುರ್ವೇದ ಸಮ್ಮೇಳನ

ಮತ್ತು

1 ನೇ ಮೈಸೂರು ಸಂಸ್ಥಾನದ ಆಯುರ್ವೇದ ಸಮ್ಮೇಳನಗಳ

ಚಿಕಿತ್ಸಾ ಸಂಭಾಷಣಾ ಪರಿಷತ್ತಿನಲ್ಲಿ

ಎಡತೊರೆ ಶ್ರೀ ಪಾರ್ಥನಾರಾಯಣ ಪಂಡಿತರು

ಮಾಡಿದ ಪ್ರಾರಂಭೋತ್ಸವ ಭಾಷಣ.

1941



॥ ಶ್ರೀ ॥

॥ ಪವನಾತ್ಮಜಾಯನಮಃ ॥

ಮಾನ್ಯಭಿಷಗ್ ಶಿಖಾಮಣಿಗಳೇ,

ತಾವುಗಳೆಲ್ಲರೂ ಕರ್ನಾಟಕದ ಅನೇಕಭಾಗಗಳಿಂದ ಈ ಪರಿಷತ್ತಿನಲ್ಲಿ ಭಾ ವಹಿಸಲು ದಯಮಾಡಿಸಿದ್ದೀರಿ. ನಾವು ಸಂಭಾಷಣ, ವಾದ, ವಿವಾದಗಳಿಂದ ಹೆಚ್ಚು ಸಂಸ್ಕೃತರಾಗುವದಕ್ಕೂ ಮತ್ತು ಆಯುರ್ವೇದವೈದ್ಯವನ್ನು ಹೆಚ್ಚು ಹೆಚ್ಚು ಪುನ ಜ್ಜೀವನಗೊಳಿಸಲು ಬೇಕಾದ ಸಾಧನಗಳನ್ನು ಹುಡುಕುವವಕ್ಕೆ ಸಹ ಈ ಪರಿಷತ್ತುಗ ಅತ್ಯಾವಶ್ಯಕವು. ಆದಿಯಲ್ಲಿ ದೇಶದಲ್ಲಿ ಮಹಾರೋಗಗಳು ಹರಡಿ, ಔಷಧಿಗಳಿಂ ಸುಸಂಸ್ಕೃತ ಚಿಕಿತ್ಸಕರಿಲ್ಲದೆ ಜನಗಳು ಕಷ್ಟಪಡುತ್ತಿದ್ದಾಗ ಹಿಮವತ್ಪರ್ವತದ ತಪ್ಪ ನಲ್ಲಿ ಭಾರದ್ವಾಜಾದಿ ಮುನಿಗಳು ಸಭೆ ಸೇರಿ, ದೇವತೆಗಳಿಂದ ಆಯುರ್ವೇದ ಉ ದೇಶವನ್ನು ಪಡೆದು, ಪ್ರಜೋಪಕಾರ ಮಾಡಿದಂತೆ, ವೈದ್ಯರುಗಳಾದ ನಾವು ಸಂಭಾಷಣೆಯ ಮುಖಾಂತರ, ಪರಸ್ಪರ ಕಲೆತು ಈಗ ಆಯುರ್ವೇದವೈದ್ಯ ವೈದ್ಯರಿಗೆ ಒದಗಿರುವ ಮ್ಲಾನತೆಯನ್ನು ಪರಿಹಾರಗೊಳಿಸಬೇಕಾಗಿರುವುದು. ಇಂತಃ ಪರಿಷತ್ತನ್ನು ಕೂಡಿಸಲು ಮುಂದೆ ಬಂದ ಮೈಸೂರಿನ ಮಹನೀಯರುಗಳಿಗೆ ನಾ ಬಹಳ ಕೃತಜ್ಞರಾಗಿದ್ದೇವೆ. ಇಂತಹ ಪರಿಷತ್ತುಗಳ ಫಲವಾಗಿ, ವೈದ್ಯಕ್ಕೆ ಮಾ ಸ್ಥಾನವಾಗಿರುವ ಹಿಂದೂಸ್ಥಾನಕ್ಕೆ ಅಲ್ಲದೆ, ಇಡೀ ವಿಶ್ವದ ಮಾನವ, ಮೃಗ, ಸ ಕೋಟಿಗಳ ಸೇವೆಯನ್ನು ಉತ್ಕೃಷ್ಟರೀತಿಯಲ್ಲಿ ಮಾಡಿಸಲು ಶ್ರೀಧನ್ವಂತರಿದೇವ ನಮಗೆ ಶಕ್ತಿಯನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ.

ಮೇಲೆ ಹೇಳಿದ ಉದ್ದೇಶ್ಯವು ಸಫಲವಾಗಲು ಸಾಧನೆಗಳು ಎರಡು. ಒಂ ನೆಯದು ಸಿಂಹಾವಲೋಕನ, ಇದುವರೆಗೆ ನಡೆಸಲ್ಪಟ್ಟಿರುವ ಕಾರ್ಯಗಳು ಮತ್ತ ಅದರ ಫಲಿತಾಂಶಗಳು. ಎರಡನೆಯದಾಗಿ ಮುಂದೆ ನಡೆಸಬೇಕಾಗಿರುವ ರಚನಾ ಕ್ರಮ. ಇವುಗಳನ್ನು ಬಹಳ ಲಘುವಾಗಿ ತಮ್ಮ ಮುಂದೆ ಇಡಲು ಪ್ರಯತ್ನಿಸಿದ್ದೇನೆ

ಪಾಶ್ಚಾತ್ಯರು ಹಿಂದೂಸ್ಥಾನಕ್ಕೆ ಕಾಲಿಟ್ಟಕೂಡಲೇ, ಅದರಲ್ಲೂ ಬ್ರಿಟಿಷ ಜನಾಂಗದವರು ರಾಜತ್ವವನ್ನು ಪಡವಕೂಡಲೇ, ಅನೇಕ ಹೈಂದವ ಸಾಂಸ್ಕೃತಿಗಳಿ ಸಾಂಕ್ರಾಮಿಕವು ಆರಂಭವಾಯಿತೆನ್ನಬಹುದು. ಅವುಗಳಲ್ಲಿ ಆಯುರ್ವೇದ ವೈದ್ಯವು ದಿನೇ ದಿನೇ ಬಹಳ ಹೀನ ದೆಸೆಯನ್ನು ಹೊಂದಿತು. ಪಾಶ್ಚಾತ್ಯದೇಶಗಳಿಂದ ಬಿಳಿಯ ವೈದ್ಯರು ಹಿಂದೂಸ್ಥಾನಕ್ಕೆ ಆಮದು ಮಾಡಲ್ಪಟ್ಟರು. ಇವರು ಇಲ್ಲಿ ನೆಲ

ಸಿದ್ದ ಆಂಗ್ಲರಿಗೆ ವೈದ್ಯರಾದರು. ಅವರಿಗೆ ಬೇಕಾದ ಔಷಧಿಗಳು ಪರದೇಶದಿಂದಲೇ ಬರುತ್ತಿತ್ತು. ಇವರನ್ನು ನಮ್ಮ ದೇಶದ ಮುಂದಾಳುಗಳು ಅನುಕರಣಮಾಡಿದರು. ಈ ವೈದ್ಯ ವೃತ್ತಿಗೆ ರಾಜಮುದ್ರೆಯು ಬಿತ್ತು. ರಾಜಮಹಾರಾಜರುಗಳು ಹೆಚ್ಚು ಹೆಚ್ಚು ಜನ ಪರದೇಶೀಯ ವೈದ್ಯರುಗಳನ್ನು ತಮ್ಮ ತಮ್ಮ ಸಂಸ್ಥಾನಗಳಿಗೆ ಆಮದು ಮಾಡಿದರು. ಪ್ರಕಟಣೆಗಳು ಜಾಹೀರಾತುಗಳು ಹೆಚ್ಚಾದವು. ಹಿಂದೂಸ್ಥಾನದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಈ ಪಾಶ್ಚಮಾತ್ಯ ವೈದ್ಯಶಿಕ್ಷಣ ಕೊಡಲು ಕಲಾಶಾಲೆಗಳು ಸ್ಥಾಪಿಸಲ್ಪಟ್ಟವು. ಅಲ್ಲಿ ಶಿಕ್ಷಣ ಹೊಂದಿದ ಭಾರತೀಯರಿಗೆ ಪ್ರೋತ್ಸಾಹ ದೊರಕಿ ; ವರ್ಷಂಪ್ರತಿ ಸಾವಿರಾರು ಜನ ವೈದ್ಯರುಗಳು ಹೊರಬೀಳಹತ್ತಿದಂತೆ-ಆಯುರ್ವೇದ ವೈದ್ಯವು ಸಂಕುಚಿತವಾಗುತ್ತಾ ಬಂತು. ಸಮಾಜದಲ್ಲಿ ಆಯುರ್ವೇದವು ಮತ್ತು ವೈದ್ಯನು ಕೀಳಾಗಿ ಕಾಣಲ್ಪಟ್ಟರು. ನಮ್ಮ ವೈದ್ಯವು ಅಸಂಸ್ಕೃತವೆಂದು (ಕ್ವಾಕರಿ) ನಮ್ಮ ಜನಗಳೇ ಕರೆದರು. ಎಲ್ಲೆಲ್ಲಿಯ ಆಂಗ್ಲವೈದ್ಯರೂ, ಔಷಧಾಲಯಗಳೂ ಕಲಾಶಾಲೆಗಳೂ ಸ್ಥಾಪಿಸಲ್ಪಟ್ಟವು. ಈ ಔಷಧಾಲಯಗಳಿಗೆ ಮತ್ತು ಆಂಗ್ಲ ಚಿಕಿತ್ಸ ಕರಿಗೆ ಬೇಕಾದ ಔಷಧಗಳನ್ನು ಪರದೇಶದಿಂದಲೇ ಆಮದುಮಾಡಲ್ಪಡಬೇಕಾಯಿತು. ಚಿಕಿತ್ಸಕರು ನಡೆಸಬೇಕಾಗಿದ್ದ ಶಸ್ತ್ರಕ್ರಿಯೆಗೂ, ಚಿಕಿತ್ಸೆಗಳಿಗೂ, ಬೇಕಾದ ವೈದ್ಯ ಧನವು ಪರದೇಶದ ದೊಡ್ಡ ಕಾರ್ಖಾನೆಗಳಿಂದ ಕಳಿಸಲ್ಪಡುತ್ತಿದ್ದವು. ಹಿಂದೂಸ್ಥಾನ ದಿಂದ ವರ್ಷಂಪ್ರತಿ ಸುಮಾರು 10 ಕೋಟಿ ರೂಪಾಯಿಗಳು ಔಷಧಿ ಮುಂತಾದ ರೂಪದಿಂದ ಪರದೇಶಕ್ಕೆ ಹರಿದು, ಅಲ್ಲಿಯ ಬಂಡವಾಳಸ್ಥರು ಕೋಟ್ಯಾದೀಶ್ವರರಾ ಗುತ್ತಾ ಬಂದರು. ಹಿಂದೂಸ್ಥಾನವು ಬಡವಾಗುತ್ತಾ ಬಂತು. ಪಾಶ್ಚಾತ್ಯವೈದ್ಯ ಶಿಕ್ಷಣದಲ್ಲಿ ಶಸ್ತ್ರಕ್ರಿಯೆಯು ಪ್ರಗತಿಯನ್ನು ಹೊಂದಿತು. ಶಸ್ತ್ರಕ್ರಿಯೆಯಲ್ಲಿ ಅನೇಕ ಭಾರತೀಯರು ಬಹಳ ಮಾನ್ಯತೆಯನ್ನು ವಿಶ್ವದಲ್ಲಿ ಪಡೆಯುತ್ತಿರುವುದು ನಮಗೆ ಬಹಳ ಹೆಮ್ಮೆಯ ವಿಷಯವಾಗಿದೆ.

ಈ ರೀತಿಯಿಂದ ರಾಜರು-ಅವರ ಸರ್ಕಾರವು, ಮತ್ತು ಐಶ್ವರ್ಯವಂತರು, ಅಧಿ ಕಾರಿಗಳೂ ಪಾಶ್ಚಾತ್ಯ ವೈದ್ಯವನ್ನು ಆದರಿಸಿ ಅದರ ಪೋಷಣೆ ತಮ್ಮ ಸರ್ವಸ್ವವನ್ನು ತೆತ್ತುತ್ತಿದ್ದರೂ ಸಹ, ಆಯುರ್ವೇದ ವೈದ್ಯವು ಅಳಿಯದೆ, ತನ್ನ ಕಾಲವನ್ನು ನಿರೀ ಕ್ಷಿಸುತ್ತಾ ಹಳ್ಳಿಯವರಿಂದಲೂ, ಬಡಜನರಿಂದಲೂ ಪೋಷಿಸಲ್ಪಡುತ್ತಿತ್ತು. ಸ್ವಲ್ಪ ವರುಷಗಳ ಕೆಳಗೆ ದಾಸ್ಯವೃತ್ತಿಯ ಅಮಲು ಇಳಿಮುಖವಾಯಿತು. ಪ್ರತಿಯೊಬ್ಬರೂ ಹಿಂದೂಸ್ಥಾನವು ಸ್ವತಂತ್ರವಾಗಬೇಕೆಂದು ಕಿಚ್ಚೆಬ್ಬಿಸಿದರು. ಈ ಕಿಚ್ಚು ಆಯುರ್ವೇ ದದ ಮೇಲೆ ಕಟ್ಟಿದ್ದ ಪಾಚಿಯನ್ನು ಸುಟ್ಟುಬಿಟ್ಟಿತು. ದೊಡ್ಡದೊಡ್ಡ ವಿಭೂತಿ

ಪುರುಷರು ಆಯುರ್ವೇದದ ಮಹತ್ವವನ್ನು ಅದರ ಸಾರ್ವಜನಿಕ ಪ್ರಯೋಜನಗಳನ್ನು ಸಾರಿದರು. ಅದರಲ್ಲಿ ಅಡಗಿದ್ದ ವೈಶಿಷ್ಟವನ್ನು ಮಹಾಜನಗಳ ಕಣ್ಣು ಮುಂ ಇಟ್ಟರು. ಪಾಶ್ಚಾತ್ಯ ವೈದ್ಯವನ್ನು ಅನೇಕವೇಳೆ ಸಣ್ಣ ಸಣ್ಣ ಚಿಕಿತ್ಸೆಗಳಿಂ ಆಯುರ್ವೇದವು ಸೋಲಿಸಿತು. ಮಹದ್ಗ್ರಂಥಗಳು ಹೊರಬಿದ್ದವು. ಅನೇಕ ಪಾಶ್ಚಾ ತ್ಯರು ಆಯುರ್ವೇದ ಗ್ರಂಥಗಳನ್ನು ಅದರ ಉಪಯೋಗಗಳನ್ನೂ ಪ್ರಶಂಸಿಸಿ ಪುಸ್ತ ಗಳನ್ನು ಬರೆದರು. ಚರಕ ಮೊದಲಾದ ಅಪೂರ್ವ ಗ್ರಂಥಗಳು ಟಿಪ್ಪಣಿಗಳ ಸಹಿತ ಪ್ರಾಂತೀಕ ಭಾಷೆಗಳಲ್ಲಿ ಅಚ್ಚು ಹಾಕಲ್ಪಟ್ಟವು. ದೊಡ್ಡದೊಡ್ಡ ಕಾರ್ಖಾನೆಗ ಸ್ಥಾಪಿಸಲ್ಪಟ್ಟು ಉತ್ತಮ ಔಷಧಿಗಳು ಬಿಕರಿಗೆ ಇಡಲ್ಪಟ್ಟವು. ದಿನೇ ದಿನೇ ಆಯು ರ್ವೇದ ವೈದ್ಯರು ತಮ್ಮ ಸ್ಥಾನಮಾನಗಳನ್ನು ಪಡೆಯುತ್ತಾ ಬಂದರು. ಆಯುರ್ವೇ ಗ್ರಂಥಗಳು ಪಾಶ್ಚಾತ್ಯಭಾಷೆಗಳಲ್ಲಿ ಪ್ರಚುರಿಸಲ್ಪಟ್ಟು ಪ್ರಪಂಚದಲ್ಲಿ ಖ್ಯಾತಿಪಟ್ಟ ರಸಾ ಯನಶಾಸ್ತ್ರೀಕರ ಮನ್ನಣೆಗೆ ಪಾತ್ರವಾದವು. ಇಷ್ಟರಲ್ಲಿ ಮಣಿಗಳಿಗೆ ಕುಂದಣದಂತೆ ವೈದ್ಯರಲ್ಲಿ ಹೆಚ್ಚು ಸಂಘಟನೆಯನ್ನುಂಟುಮಾಡಲು ಅಖಿಲಭಾರತ ಆಯುರ್ವೇ ಮಹಾಸಭೆಯು ಸ್ಥಾಪಿಸಲ್ಪಟ್ಟಿತು. ಹಿಂದೂಸ್ಥಾನದ ಎಲ್ಲಾ ಕಡೆಯ ವೈದ್ಯರುಗಳೂ ಕಲೆತು ಆಯುರ್ವೇದ ಪ್ರಚಾರಕಾರ್ಯಗಳನ್ನ ನಡೆಸುತ್ತಾ ಬಂದರು. ಇದರಂಗವಾಗಿ ವಿದ್ಯಾ ಪೀಠವೊಂದು ಸ್ಥಾಪಿತವಾಗಿ, ಸುಮಾರು 3 ಸಾವಿರ ವೈದ್ಯರು ಪ್ರತಿವರ್ಷವೂ ಇದರ ಮುಖಾಂತರ ಶಿಕ್ಷಣ ಹೊಂದುತ್ತಿರುವರು. ಪ್ರಾಂತ್ಯಗಳಲ್ಲಿ ವೈದ್ಯರಿಗೆ ನೆರವಾ ಗಿರುವಂತೆ, ಪ್ರಾಂತೀಕ ಸಭೆಗಳು ಸ್ಥಾಪಿಸಲ್ಪಟ್ಟವು. ಅದರಂತೆ ಕರ್ನಾಟಕದಲ್ಲಿ ಸಹ 12 ವರ್ಷಗಳ ಹಿಂದೆ, ಪ್ರಾಂತೀಕ ಸಮ್ಮೇಳನವು ಸ್ಥಾಪಿಸಲ್ಪಟ್ಟು ಈದಿನ ನಾವುಗಳು ಅದರಾಶ್ರಯದಲ್ಲಿ ನೆರದಿದ್ದೇವೆ.

ಮೈಸೂರು ಶ್ರೀಮನ್ಮಹಾರಾಜರಾಶ್ರಯದಲ್ಲಿ ಅನೇಕ ವರ್ಷಗಳ ಹಿಂದೆಯೇ ಆಯುರ್ವೇದ ಮಹಾಪಾಠಶಾಲೆಯು ಸ್ಥಾಪಿತವಾಗಿ, ದೊಡ್ಡ ವೈದ್ಯರು ಶಿಕ್ಷಣ ಹೊಂದಿ, ಈಚೆಗೆ ಈ ಕಲಾಶಾಲೆಗೆ ಶ್ರೀ ಗುಂಡ್ಲು ಪಂಡಿತ ಲಕ್ಷ್ಮಣಾಚಾರ್ಯರವರು, ಪಂಡಿತ್ ಗೋಪಾಲಾಚಾರ್ಲುರವರು ಧರ್ಮದಿಂದ ದೊಡ್ಡ ಭವನವು ಕಟ್ಟಲ್ಪಟ್ಟು ವರ್ಷಂಪ್ರತಿ ಕರ್ನಾಟಕದ ಎಲ್ಲಾ ಕಡೆಯಿಂದಲೂ ಶಿಕ್ಷಣಕ್ಕಾಗಿ ಬರುವ ವಿದ್ಯಾರ್ಥಿಗ ಳಿಗೆ ಆಶ್ರಯಸ್ಥಾನವಾಗಿದೆ. ಕರ್ನಾಟಕದಲ್ಲಿ ಕಲಾಶಾಲೆಗಳು ಬಹಳ ಹೆಚ್ಚು ಬೆಳೆಯು ತ್ತಿವೆ. ಬೆಳಗಾಂವ ಲಿಂಗರಾಜ ಕಲಾಶಾಲೆ, ಹುಬ್ಬಳ್ಳಿಯ ಗಂಗಾಧರ ಸಂಸ್ಕೃತಶಾಲೆ, ಬಿಜಾಪುರದಲ್ಲಿ ಆಯುರ್ವೇದ ಕಲಾಶಾಲೆ, ಪ್ರೇಮವಿದ್ಯಾ ಪೀಠ, ಇವುಗಳಿಂದ ಸುಮಾ ರು 100 ರಿಂದ 150 ರ ವರೆಗೆ ಸುಶಿಕ್ಷಿತವೈದ್ಯರು ಜನ್ಮತಾಳುತ್ತಿದ್ದಾರೆ. ಮದರಾಸು

ಬೊಂಬಾಯಿ ಸರ್ಕಾರಗಳಲ್ಲಿ ಈ ರೀತಿ ಶಿಕ್ಷಣಹೊಂದಿದ ವೈದ್ಯರಿಗೆ ಒಂದು ಸ್ಥಾನ ಮಾನಗಳನ್ನು ಕಲ್ಪಿಸಿಕೊಟ್ಟಿರುತ್ತಾರೆ. ಆದರೆ ಮೈಸೂರಿನ ಆಯುರ್ವೇದ ಕಲಾಶಾಲೆ ಯನ್ನು ಮೈಸೂರು ಸರ್ಕಾರದವರು ವಿಶ್ವವಿದ್ಯಾನಿಲಯಕ್ಕೆ ಸೇರಿಸಿ, ಕಲಾಶಾಲೆಗೂ, ಇಲ್ಲಿಯ ಪದವೀಧರರಿಗೂ, ಸರಿಯಾದ ಮನ್ನಣೆಯನ್ನು ಕಲ್ಪಿಸದೆ, ಇನ್ನೂ ಈ ಸಂಸ್ಥೆ ಮುಜರಾಯಿ ಕಮೀಷನರ ಆಳ್ವಿಕೆಯಲ್ಲಿರಿಸಿರುವದು ಬಹಳ ವಿಷಾದದ ವಿಷಯವಾ ಗಿದೆ. ಈಚೆಗೆ ಶ್ರೀಮನ್ಮಹಾರಾಜರವರಿಂದ ನೇಮಕಮಾಡಲ್ಪಟ್ಟಿರುವ ಖಾಸಗಿ ಮಂತ್ರಿಗಳು ಈ ವಿಷಯಕ್ಕೆ ಕೂಡಲೇ ಗಮನಕೊಟ್ಟು, ಆಯುರ್ವೇದ ಮಾನ್ಯತೆ ಯನ್ನ ಹೆಚ್ಚಿಸಲು ಸಾಧಕರಾಗುವರೆಂದು ಹಾರೈಸುತ್ತೇನೆ.

ಮಹನೀಯರೇ,

ಇದು ಸಿಂಹಾವಲೋಕನದ ಮಾತು. ಇನ್ನು ರಚನಾತ್ಮಕವಾಗಿ ನಾವು ಮಾಡಬೇಕಾದ, ನಮ್ಮಿಂದ ನಿರೀಕ್ಷಿಸಲ್ಪಡಬಹುದಾದ ಕೆಲವು ವಿಷಯಗಳನ್ನು ತಮ್ಮ ಮುಂದೆ ಇಡಲು ಬಯಸುತ್ತೇನೆ.

ಚಿಕಿತ್ಸಕರು ದೇಶಾಭ್ಯುದಯಕ್ಕೆ ಮುಖ್ಯ ಕಾರಣರು. ದೇಶದ ಐಶ್ವರ್ಯವೆಂದರೆ, ಅದರ ಜನಾಂಗ. ಯಾವ ದೇಶದ ಜನಾಂಗವು, ಆರೋಗ್ಯವಾಗಿಯೂ, ಧೃಡಾಂಗ ಯುಕ್ತವಾಗಿಯೂ, ಧೀರ್ಘಜೀವಿಗಳಾಗಿಯೂ, ದೇಹಶ್ರಮಿಗಳಾಗಿಯೂ, ಕುಶಲಿ ಗಳಾಗಿಯೂ, ಇರುವದೊ ಆ ದೇಶವು ಬಹಳ ಮುಂದುವರಿದ ದೇಶವೆಂದು ಖ್ಯಾತಿ ಹೊಂದುವುದು. ಪ್ರಾಣವಾಯುವಿನಂತಿರುವ ಆ ಜನಾಂಗವನ್ನು ಆರೋಗ್ಯವಂತರ ನ್ನಾಗಿ ಇಡಲು, ಬೇಕಾದ ಸಾಧನಗಳನ್ನು ಪರಿಶೋಧನದಿಂದಲೂ, ಪರಿಶ್ರಮ ದಿಂದಲೂ, ತಿಳಿದು ಪ್ರಯೋಗಮಾಡುವುದು ಚಿಕಿತ್ಸಕನ ಕರ್ತವ್ಯವು. ಆದುದರಿಂದ ಲೇಸು ವೈದ್ಯ ಲಕ್ಷಣವನ್ನು ಆಚಾರ್ಯರು ಹೀಗೆ ವರ್ಣಿಸಿರುವರು.

ಚಿಕಿತ್ಸಾ ವೃತ್ತಿಯನ್ನು ಅವಲಂಬಿಸಿರುವ ನಾವು ಬರೀ ಮೇಲಾಟಗಳಿಂದ ಹಣ ಸಂಪಾದನೆಯೇ ಮುಖ್ಯವೆಂದು ಇರದೇ ನಮಗೆ ತಿಳಿದ ಚಿಕಿತ್ಸೆಗಳು ಸಾರ್ವ ಜನಿಕವಾಗಿ ಉಪಯೋಗವಾಗುವಂತೆ ಮಾಡುವುದೇ ನಮ್ಮ ಜೀವನದ ಮುಖ್ಯ ಗುರಿ ಯಾಗಿರಬೇಕು. ಈ ತತ್ವವೇ ನಮ್ಮ ಗ್ರಂಥಗಳಲ್ಲಿ ಪ್ರತಿಬಿಂಬಿಸಿರುವುದು. ಅದರ ಮೇಲ್ಪಂಗ್ತಿಯನ್ನೇ ನಾವು ಅನುಷ್ಠಾನಕ್ಕೆ ತರಲು ಪ್ರಯತ್ನಿಸಬೇಕು. ನಮ್ಮ ರೋಗ ನಿದಾನವು ಮೇಲ್ತರದದ್ದಾಗಿ ಇರಬೇಕು. ಇಂದಿನ ವೈಜ್ಞಾನಿಕ ಯುಗದಲ್ಲಿ ರೋಗ ನಿದಾನಕ್ಕೆ ಅನೇಕ ಯಂತ್ರಗಳು ಕಂಡು ಹಿಡಿಯಲ್ಪಟ್ಟಿವೆ. ಆದರೂ ಸಹ ಅಷ್ಟ

ಪರಿಪೂರ್ಣವಾಗಿಲ್ಲ. ನಾವುಗಳು ಬಹು ಗಾಢವಾಗಿಯೂ, ಉತ್ಕೃಷ್ಟವಾಗಿಯೂ, ರೋಗವನ್ನು ಸರಿಯಾಗಿ ಕಂಡುಹಿಡಿಯಲು ಸಹಕಾರಿಯಾದ ತ್ರಿದೋಷತತ್ವವನ್ನು ಚನ್ನಾಗಿ ಪರಿಶೋಧಿಸಿ, ಸಾಧಾರಣವಾಗಿ ತಿಳಿಯಲಾಗುವಂತೆ ಮಾಡಬೇಕು. ನಮ್ಮಲ್ಲಿ ನಿದಾನವು ಹೆಚ್ಚುಲಕ್ಷಣದ ಮೇಲೆ ಅವಲಂಬಿಸುತ್ತಿರುವುದು. ದೋಷದಿಂದ ದೂಷ್ಯವಾಗಿರುವ ಮಲ-ಮೂತ್ರ-ರಕ್ತ-ಕಫಾದಿಗಳ, ಪ್ರಮಾಣವನ್ನು ಸಾಧಾರಣವಾಗಿ ಕಂಡುಹಿಡಿಯುವ ಕ್ರಮಗಳನ್ನು ರೂಢಿಗೆ ತರಬೇಕು. ಇಂದು ನಾವು 20 ನೇ ಶತಮಾನದಲ್ಲಿ ಇರುವೆವೆಂಬುದನ್ನು ಮರೆಯಬಾರದು. ಈಗ ನಡೆಯುತ್ತಿರುವ ಘೋರ ಯುದ್ಧದಾನಂತರದಲ್ಲಿ, ಪಾಶ್ಚಾತ್ಯ ದೇಶೀಯ ಬಂಡವಾಳಸ್ಥರು ವೈದ್ಯ ಪ್ರಪಂಚದಲ್ಲಿ ನಡೆಸಬಹುದಾದ ಮೇಲಾಟದ (Competition) ಕ್ರಾಂತಿಯಲ್ಲಿ ಆಯುರ್ವೇದವು ಸಶಿಸದಂತೆ ಅದನ್ನೂ ಭದ್ರಪಡಿಸಲು ಮೇಲ್ಕಾಣಿಸಿದ ಸಲಹೆಗಳು ಅವಶ್ಯಕವೆಂದು ನಾನು ಭಾವಿಸುತ್ತೇನೆ.

ವೈದ್ಯನು ರಾಜನ ಪೋಷಕನು ಹೇಗೋ ಹಾಗೆ ಜನಾಂಗದ ಪೋಷಕನೂ ಹೌದು. ದೇಶದಲ್ಲಿ ಸಾಂಕ್ರಾಮಿಕ ಮುಂತಾದವುಗಳು ಋತುಜನ್ಯರೋಗಗಳು ಹರಡುವ ಸಂದರ್ಭವಿದ್ದಾಗ ಆಯುರ್ವೇದ ವೈದ್ಯರು ತಾವಾಗಿಯೇ ಮುಂದೆ ಬಂದು ಅವುಗಳನ್ನು ತಡೆಗಟ್ಟಲು ಉಪಾಯಗಳನ್ನು ಅನುಸರಿಸಬೇಕಾದ ಪಥ್ಯಾಪಥ್ಯಗಳನ್ನೂ, ಸುಲಭ ಚಿಕಿತ್ಸೆಗಳನ್ನು, ಪ್ರಕಟಿಸಬೇಕು. ಇಂತಹ ಪ್ರಕಟಣೆಗಳು ವೈದ್ಯಸಂಘಗಳಿಂದ ಹೊರಡಿಸಲ್ಪಟ್ಟರೆ ಮಹಾಜನರು ಬಹಳ ಆದರದಿಂದಲೂ ನಂಬಿಕೆಯಿಂದಲೂ ಸ್ವೀಕರಿಸುವರು.

ನಾವು ವ್ಯಾಪಾರದ ಯುಗದಲ್ಲಿದ್ದೇವೆ. ಒಬ್ಬ ವೈಜ್ಞಾನಿಕನು ಒಂದು ಹೊಸ ತತ್ವವನ್ನು ಕಂಡು ಹಿಡಿದರೆ ಕೂಡಲೆ ಬಂಡವಾಳಸ್ಥರು ಅದನ್ನು ಕೊಂಡುಕೊಂಡು ಹೇರಳವಾಗಿ ಔಷಧಿ ರೂಪವಾಗಿ ತಯಾರಿಸಿ ಕ್ಷಣಮಾತ್ರದಲ್ಲಿ ಪ್ರಪಂಚದ ಎಲ್ಲಾ ಭಾಗಗಳಲ್ಲಿ ಸ್ಪರ್ಧಿಸುವರು. ಉದಾಹರಣೆಗೆ-ಈಚಿನ ವಿಟಮಿನ್ ತತ್ವ. ಶರೀರದ ಪೋಷಣೆಗೂ, ಅನೇಕ ರೋಗಗಳ ನಿವಾರಣೆಗೂ, "ವಿಟಮಿನ್" ಗಳೆ ಉಪಯೋಗಿಸಬೇಕೆಂದೂ ಇವುಗಳನ್ನು ಎ. ಬಿ. ಸಿ. ಡಿ. ಮೊದಲಾಗಿ ವಿಂಗಡಿಸಿ-ಮಾರಾಟಕ್ಕೆ ಇಟ್ಟಿರುತ್ತಾರೆ. ಆಯುರ್ವೇದೀಯ ಚಿಕಿತ್ಸಕರು ನಮ್ಮ ಶಾಸ್ತ್ರಾನುಸಾರವಾಗಿ ಈ ಪೋಷಕ ದ್ರವ್ಯಗಳು ಯಾವ ಯಾವ ಪದಾರ್ಥಗಳಲ್ಲಿವೆ, ಇವುಗಳ ಸಂಯೋಜನವು ಹೇಗೆ ಮತ್ತು ಆಯುರ್ವೇದದ ಯಾವ ಔಷಧಿಗಳು-ಈ ವಿಟಮಿನ್ಸ್‌ಗಳ ಬದಲು ಕೊಡಬಹುದೆಂದು ಅದಕ್ಕೆ ಸರಿಯಾದ ಔಷಧಿಗಳನ್ನು ತಯಾರಿಸಿದರೆ, ಪರದೇಶಕ್ಕೆ

ಹೋಗುವ ಹಣವು ನಿಂತು-ನಮ್ಮ ದೇಶಕ್ಕೆ ಎಷ್ಟೋ ಉಪಕಾರಮಾಡಿದಂತಾಗುವುದು. ಇಂತಹ ತಯಾರಿಕೆಗಳಿಗೆ ಎಲ್ಲಾ ವೈದ್ಯರಿಂದಲೂ ಸ್ವಾಗತವು ಲಭಿಸುವುದು.

ಚಿಕಿತ್ಸಾ ಪರಿಷತ್ತಿನವರು ಈ ರೀತಿಯಾದ ಕಾರ್ಯಗಳಿಗೆ ಅಡಿಗಲ್ಲು ಹಾಕ ಬೇಕು. ಕೊನೆಯ ಪಕ್ಷ ವರ್ಷಕ್ಕೆ ಒಂದು ಮಹಾರೋಗವನ್ನು ಆಮೂಲಾಗ್ರವಾಗಿ ಪರಿಶೋಧಿಸಿ, ಅದರ ಬಗ್ಗೆ, ಎಲ್ಲಾ ವೈದ್ಯರುಗಳ ಅನುಭವಗಳನ್ನು ಕ್ರೋಡೀಕರಿಸಿ ಪರಿಷತ್ತಿನವರು ಒಂದು ಉತ್ಕೃಷ್ಟ ಪುಸ್ತಕವನ್ನು ಹೊರಗೆಡವಬೇಕು.

ಈ ವರುಷದಲ್ಲಿ-ಬಾಲಯಕೃತ್‌ಪ್ಲೀಹೋದರ ರೋಗವನ್ನು ಚಿಕಿತ್ಸಕರು ಕೈಕೊಳ್ಳಬೇಕೆಂದು ನಾನು ಬಯಸುತ್ತೇನೆ. ತಾತ್ಕಾಲದಲ್ಲಿ ಈ ರೋಗವು ಬಹಳ ಭಯಂಕರವಾಗಿ ಹರಡುತ್ತಿರುವುದು. ವರ್ಷಂಪ್ರತಿಯಲ್ಲಿ ಸಾವಿರಾರು ಮಕ್ಕಳು ಈ ರೋಗಕ್ಕೆ ತುತ್ತಾಗುತ್ತಿರುವರು. ಇದರ ವಿದಾನವು ಬಹಳ ವಿಲಕ್ಷಣವಾಗಿರುವುದು. ಎಷ್ಟೋ ಸಂಸಾರಗಳು-ಸಂತತಿಗಳಿಲ್ಲದೆ ಹೋಗುತ್ತಿರುವುವು. ಈ ರೋಗ ಪಾಶ್ಚಾತ್ಯ ರೀತ್ಯಾ ಚಿಕಿತ್ಸೆಗಳು ಸರಿಯಾದದ್ದು ಇಲ್ಲದೆ ಎಲ್ಲರೂ ಆಯುರ್ವೇದೀಯ ಚಿಕಿತ್ಸೆ ಗಳನ್ನು ಶಿಫಾರಸು ಮಾಡುತ್ತಿದ್ದಾರೆ. ಚಿಕಿತ್ಸೆಗಳಿಂದ ರೋಗವು ನಿವಾರಣೆಯಾಗ ಬಹುದೇ ವಿನಃ ರೋಗ ಬಾರದಿರುವುದಿಲ್ಲ. ಈ ರೋಗವು ಬರದಂತೆ ತಡಗಟ್ಟಲು ಉಪಾಯವನ್ನು ಕಂಡು ಹಿಡಿಪರೆ ನಾವು ಶಾಶ್ವತವಾದ ಕೀರ್ತಿಯನ್ನು ಹೊಂದುವುದ ಲ್ಲದೆ ನಿಜವಾಗಿ ದೇಶಾಭ್ಯುದಯಕೆಲಸವನ್ನು ಮಾಡಿದಂತಾಗುತ್ತದೆ ಅಲ್ಲದೆ ಗತಿಸಿರು ವದಾದ ಕೃಪಾದೃಷ್ಟಿಯು ಆಯುರ್ವೇದದ ಮೇಲೆ ಬೀಳುವುದು. ಇದರಿಂದ ಚಿಕಿತ್ಸ ಕರ ಪುರೋಭಿವೃದ್ಧಿಯು ಆಗುವುದು. ಈ ರೋಗವು ಬರಲು ಕಾರಣವೇನು-ಯಾವ ಕಾರಣದಿಂದ ಉಲ್ಬಣಸ್ಥಿತಿಗೆ ಬಂತು-ಯಾವ ಜನಾಂಗದಲ್ಲಿ ಹೆಚ್ಚು ಈ ರೋಗವು ಪ್ರಾಬಲ್ಯವಾಗಿದೆ, ಆಹಾರ ವಿಹಾರ ದೋಷಗಳಿಂದಲೇ ಅಥವಾ ವಾಯುಗುಣವೇ, ಹಾಗಾದರೆ ಪಥ್ಯಾ ಪಥ್ಯಗಳೇನು-ಈ ರೋಗದಲ್ಲಿ ವಿಲಕ್ಷಣ ವೈಶಿಷ್ಟವೇನಾದರೂ ಉಂಟೆ-ಅಥವಾ ಗರ್ಭ ಸಂಬಂಧವೆ. ಮಕ್ಕಳಿಗೆ ಯಾವ ವಯಸ್ಸಿನಲ್ಲಿ ಬರಬಹುದು ಇವೇ ಮುಂತಾದ ಪ್ರಶ್ನೆಗಳನ್ನು ವಿಶದವಾಗಿ ಏರ್ಪಡಿಸಿಕೊಂಡು ಪ್ರತಿ ಚಿಕಿತ್ಸಕನು, ತಾನು ಚಿಕಿತ್ಸೆ ಮಾಡಿದ ರೀತಿಯನ್ನು ಆದ ಬದಲಾವಣೆಗಳನ್ನು, ಫಲಿತಾಂಶವನ್ನು ಸಹ ಬರೆದಿಟ್ಟು-ಪರಿಷತ್ತಿನ ಸಮಿತಿಗೆ ಒಪ್ಪಿಸಬೇಕು-ಅಂಚೇ ದ್ವಾರ ಚಿಕಿತ್ಸೆಮಾಡಿ ದರೆ, ಮಗುವಿನ ತಂದೆ ತಾಯಿಗಳಿಗೆ ಈ ಪ್ರಶ್ನೆಮಾಲೆಯನ್ನು ಕೊಟ್ಟು ದಿನಂಪ್ರತಿ ರೋಗ ವಿಜ್ಞಾನವನ್ನು ಬರೆದಿಡಲು ಸೂಚಿಸಬೇಕು. ವೈದ್ಯರಾರಿಂದಲೂ ಮಾರ್ಗ ದರ್ಶಕ ಗ್ರಂಥರೂಪವಾಗಿ ಇದುವರೆಗೆ ಯಾವ ಗ್ರಂಥವೂ ಪ್ರಚುರವಾಗಿಲ್ಲ. ಚಿಕಿತ್ಸೆ

ಗಿಂತಲೂ ರೋಗಬಾರದಿರುವ ಉಪಾಯವನ್ನು ಕಂಡುಹಿಡಿಯುವುದೇ ನಮ್ಮ ಮುಖ್ಯ ಗುರಿಯಾಗಬೇಕು.

ಆಗಾಗ್ಗೆ ವಿಮರ್ಶಕಾತ್ಮವಾಗಿರುವ ವೈದ್ಯಕೀಯ ಲೇಖನಗಳು ಪ್ರಚುರವಾದ ಅವುಗಳ ಉಪಯೋಗಾನುಪಯೋಗಗಳ ಬಗ್ಗೆ ವೈದ್ಯರು ಟೀಕೆಗಳನ್ನು ಪ್ರಕಟಿ ಬೇಕು. ಮೈಸೂರು ಸರ್ಕಾರದ ವೈದ್ಯರೊಬ್ಬರು ಬಾಲಯಕೃತ್ ಪ್ಲೀಹೋದ ರೋಗವನ್ನು ಪರಿಶೋಧಿಸಿ ತಮ್ಮ ಅಭಿಪ್ರಾಯವನ್ನು ಪ್ರಕಟಿಸಿದ್ದಾರೆ. ನಮ್ಮಲ್ಲಿ ಪ್ರಮುಖ ಪತ್ರಿಕೆಯೊಂದರಲ್ಲಿ-ಅವುಗಳನ್ನು ಎತ್ತಿ ಹಿಡಿದು ಹಸುವಿನ ಹಾಲಿನ ಕ್ರಿ ಗಳಿಂದ ಈ ರೋಗವು ಹುಟ್ಟಿದರೆ ಪಾಶ್ಚಾತ್ಯದೇಶಗಳಲ್ಲಿರುವಂತೆ ಡಬ್ಬಿಹಾ ತಯಾರುಮಾಡಿ ಉಪಯೋಗಿಸಬೇಕೆಂದು-ಶಿಫಾರಸು ಮಾಡಿದ್ದಾರೆ. ಇದರಿಂದ ಡಬ್ಬಿ ಹಾಲುಗಳಿಗೆ ಬಹಳ ಮಾರಾಟವಾಗುವುವು. ವೈದ್ಯರು ಮುಂದೆ ಬಂದು ಇದ ಸಾಧುವೇ ಅಸಾಧುವೇ ಎಂಬುದನ್ನು ತಕ್ಷಣ ವಿಮರ್ಶಿಸಬೇಕು. ಹಸುವಿನ ಹಾ ಬಹಳ ಪಥ್ಯತರವಾದದ್ದು, ಅದರಲ್ಲೂ ಚನ್ನಾಗಿ ಕುದಿದ ಹಾಲಿನಲ್ಲಿ ಯಾವ ಕ್ರಿ ಗಳಿರಬಹುದು? ಡಬ್ಬಿ ಹಾಲಿನ ಮುಚ್ಚಳವನ್ನು ತೆಗೆದ ಮೇಲೆ ಎಷ್ಟು ಕ್ರಿಮಿಗಳ ಸೇರಬಹುದು, ಈ ಹಾಲು ಮಕ್ಕಳ ಮೇಲೆ ಯಾವ ರೀತಿಯಲ್ಲಿ ಪರಿಣಾಮವಾ ಬಹುದು, ಈ ರೀತಿಯಾದ ವಿಮರ್ಶೆಗಳಿಗೆ ಬಹಳ ಆದರ ಉಂಟು.

ಮಹನೀಯರೇ,

ತಮ್ಮ ಅಮೂಲ್ಯವಾದ ಕಾಲವನ್ನು ನಾನು ಬಹಳ ಉಪಯೋಗಿಸಿಕೊಂ ಡ್ಡೇನೆ. ಈ ಚಿಕಿತ್ಸಾ ಪರಿಷತ್ತು ಜಯಪ್ರದವಾಗಿ ನಡೆದು, ಆಯುರ್ವೇದಾಭ್ಯು ಯಕ್ಕೆ ಸಹಕಾರಿಯಾದ ಫಲಿತಾಂಶವನ್ನು ಹೊಂದಲೆಂದು ಪರಮೇಶ್ವರನನ್ನು ಪ್ರಾರ್ಥಿಸಿ ಈ ಪರಿಷತ್ತಿನ ಪ್ರಾರಂಭೋತ್ಸವವನ್ನು ನಡೆಸಲು ಆಹ್ವಾನಿಸಿದ ಸ್ವಾಗತಸಮಿತಿಯವ ರಿಗೆ ನನ್ನ ಅನಂತ ವಂದನೆಗಳು.

॥ ಶ್ರೀ ಧನ್ವಂತರಯೇನಮಃ ॥

ಈ ಪರಿಷತ್ತಿನ ಮಾನ್ಯ ಅಧ್ಯಕ್ಷರೂ, ತಾವುಗಳೂ ಸಹ-ನನ್ನ ಬಿನ್ನಹವನ್ನು ಕಾರ್ಯಕ್ಷೇತ್ರಕ್ಕೆ ತರುವರೆಂದು ನಂಬಿದ್ದೇನೆ.

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

# ಚಿಕಿತ್ಸಾ ಸಂಭಾಷಾ ಪರಿಷತ್ತಿನ ಅಧ್ಯಕ್ಷರ ಭಾಷಣ.

(ಆಯುರ್ವೇದವಿದ್ವಾನ್ ಪಂ॥ ಡಿ. ವಿ. ರಾಮರಾವ್ ದೇಸಾಯಿ ಗದಗ್‌ರವರಿಂದ)

---

ಬಂಧುಗಳೇ! ಮಹಿಳೆಯರೇ! ಮತ್ತು ಮಹನೀಯರೇ!

ಈ ಪರಿಷತ್ತಿನ ಅಂಗಭೂತವಾದ 'ಚಿಕಿತ್ಸಾ ಸಂಭಾಷಾಪರಿಷತ್ತಿಗೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿ, ಗೌರವಿಸಿ, ತಮ್ಮ ಪ್ರೇಮಾದರಗಳನ್ನು ತೋರಿಸಿದ್ದಕ್ಕಾಗಿ ನಾನು ತಮಗೆ ಚಿರಋಣಿಯಾಗಿದ್ದೇನೆ. ವೈದ್ಯವ್ಯವಸಾಯ ಕ್ಷೇತ್ರದಲ್ಲಿ, ನನಗಿಂತಲೂ ವಯಸ್ಸಿನಲ್ಲಿ ಹಿರಿಯರೂ, ಶಾಸ್ತ್ರಾನುಭವಗಳಲ್ಲಿ ಬಲ್ಲಿದರೂ ಅನೇಕರಿದ್ದರೂ, ಕೆಲವುಮಟ್ಟಿಗೆ ಶಾಸ್ತ್ರಾನುಭವಗಳಿದ್ದ ನನ್ನನ್ನು ಆರಿಸಿದುದು, ತಮ್ಮೆಲ್ಲರ ಪ್ರೇಮವೇ ಹೊರತು ನನ್ನ ಯೋಗ್ಯತೆಯಲ್ಲವೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಈ ಪರಿಷತ್ತಿನ ಕಾರ್ಯವನ್ನು ಸಾಗಿಸಲು, ನನ್ನಲ್ಲಿ ಸಾಕಷ್ಟು ಆತ್ಮವಿಶ್ವಾಸವಿಲ್ಲದಿದ್ದರೂ, ತಮ್ಮಲ್ಲಿಯ ಸಹಾಯ ಸಹಕಾರ, ಸಹಾನುಭೂತಿಗಳು, ನನ್ನಲ್ಲಿ ಬೇಕಷ್ಟು ಶ್ರದ್ಧೆಯನ್ನು ಹುಟ್ಟಿಸಬಲ್ಲವೆಂದು ನನ್ನಲ್ಲಿ ದೃಢವಾದ ಧೈರ್ಯವಿದೆ.

ಆಯುರ್ವೇದ ಶಾಸ್ತ್ರದ ಪ್ರಯೋಜನವು ಮುಖ್ಯವಾಗಿ ಎರಡು ವಿಧವಾಗಿದೆ. (೧) ರೋಗಪ್ರತಿಬಂಧ. (೨) ರೋಗಪ್ರತೀಕಾರ (ಇಹಖಲ್ವಾಯುರ್ವೇದ ಪ್ರಯೋಜನಮ್, ವ್ಯಾಧ್ಯುಪ ಸೃಷ್ಟಾನಾಂ ವ್ಯಾಧಿ ಪರಿಮೋಕ್ಷಃ, ಸ್ವಸ್ಥಸ್ಯ ರಕ್ಷಣಂಚ).

ಇವುಗಳಲ್ಲಿ ಮೊದಲನೆಯ ಪ್ರಯೋಜನವಾದ ರೋಗಪ್ರತೀಕಾರದ ವಿಷಯವಾಗಿ ವಿವೇಚಿಸುವದು ಈ ಸಮ್ಮೇಲನದ ಅಂಗಭೂತವಾದ, ಇಲ್ಲಿ ಈಗ್ಗೆ ನೆರೆದ, ಈ ಪರಿಷತ್ತಿನ ಉದ್ದೇಶವಾಗಿದೆ.

## ಆಯುರ್ವೇದ ಚಿಕಿತ್ಸೆಯ ಮೂಲ ಮತ್ತು ವ್ಯಾಪ್ತಿ.

ಆಯುಸ್ಸನ್ನು ಜೀವನ ಆಯುಸ್ಸು, ದೇಹದ ಆಯುಸ್ಸು ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಜನನದಿಂದ ಮರಣದವರೆಗೆ ಇರುವ ಕಾಲಮಾನವು ದೇಹದ ಆಯುಸ್ಸು. ಮಾಯೆಯ ಉಪಾಧಿಯಿಂದ ಆವೃತನಾಗಿ, ಆತ್ಮಜ್ಞಾನದಿಂದ ತನ್ನನ್ನು ತಾನು ಅರಿತು, ಮುಕ್ತಸ್ಥಿತಿಯನ್ನು ಪಡೆಯುವ ವರೆಗಿನ ಕಾಲದ ಅವಧಿಯು ಜೀವನ ಆಯುಸ್ಸು. ಆಯುರ್ವೇದ ಚಿಕಿತ್ಸೆಯು ಕೇವಲ ದೇಹದ

ಆಯುಸ್ಸಿನಲ್ಲಿ ಸಂಭವಿಸಬಹುದಾದ ವ್ಯಾಧಿಗಳ ವಿವರಣೆಯಷ್ಟೇ ಮರ್ಯಾದಿ ವಾಗಿಲ್ಲ. ಶುದ್ಧಬ್ರಹ್ಮಸ್ಥಿತಿಯಿಂದ, ಬದ್ಧಜೀವನಸ್ಥಿತಿಗೆ ಇಳಿಯುವದು ಜೀವ ಒಂದು ರೋಗವೇ. ಜೀವನ ಆಯುಸ್ಸಿನಲ್ಲಿ ಜರಗುವ ಸತ್ವರಜಸ್ತಮೋಗುಣ ಬಾಧೆಯನ್ನು ಬಯಲುಮಾಡಿ, ತನ್ನ ನಿಜಸ್ವರೂಪದ ಅರಿವನ್ನು ಮಾಡಿಕೊಡುವ ರಲ್ಲಿಯೂ ಆಯುರ್ವೇದವು ನಿವಾರಣೋಪಾಯಗಳನ್ನು ಹೇಳುತ್ತದೆ. " ರಜಸ್ತಮ ಮನಸೋ ದ್ವೌಚ ದೋಷಾವುದಾಹೃತೌ | ಧೀಧೈರ್ಯಾತ್ಮಾದಿ ವಿಜ್ಞಾನ ಮನೋದೋಷೌಷಧಂ ಪರಮ್ |

ಮಾಯೆಯ ಗುಣಗಳಿಂದ ಪೀಡಿತನಾದ ಜೀವನನ್ನು ಗುಣಾತೀತನನ್ನಾ ಮಾಡಿ, ತನ್ನ ಸ್ವರೂಪಜ್ಞಾನವನ್ನು ಮಾಡಿಕೊಂಡು, ಆತ್ಮಾನಂದವನ್ನು ಪಡೆಯು ಮಾರ್ಗವನ್ನು ವಿಸ್ತಾರವಾಗಿ ವಿವೇಚಿಸುವ 'ವೇದಾಂತ ಶಾಸ್ತ್ರವು' ಒಂದು ರೀ ಯಿಂದ ಆಯುರ್ವೇದದ ಒಂದು ಭಾಗವೇ! ಆಯುರ್ವೇದ ಚಿಕಿತ್ಸೆಯು ಸ್ಥೂ ದೇಹದಿಂದ ಕಾರಣದೇಹದವರೆಗೂ ವ್ಯಾಪ್ತಿಯನ್ನು ಹೊಂದಿದೆಯೆಂದು ಹೇ ಬಹುದು. ಈಗ ಮುಖ್ಯವಾಗಿ ಪ್ರಚಲಿತವಾಗಿರುವ ಹೇತುವ್ಯಾಧಿ ವಿಪರೀತ ಚಿ ತ್ಸೆಯೇ ಮೂಲತತ್ವವಾಗಿ ಉಳ್ಳ "Allopathy" ಯೂ, ಹೇತುವ್ಯಾಧಿ ವಿಪ ಸ್ತಾರ್ಥಕಾರಿ ಚಿಕಿತ್ಸೆಯೇ ಮೂಲತತ್ವವಾಗಿ ಉಳ್ಳ "Homeopathy" ಯೂ ಆಯುರ್ವೇದದಲ್ಲಿ ಅಡಕವಾಗಿವೆ.

ಇತಿಹಾಸ ಬ್ರಹ್ಮವಸ್ತುವು ಹೇಗೆ ಅನಾದಿಯೋ, ಹಾಗೆಯೇ ಅವನ ಸ್ವರೂ ವಾದ ಜ್ಞಾನವೂ ಅನಾದಿಯಾಗಿದೆ. ಈ ಜ್ಞಾನವೆಂದರೆ ವೇದ. ಆಯುರ್ವೇದವು ವೇದದ ಅಂಗವಾಗಿರುವದರಿಂದ ಅದಕ್ಕೆ ಕಾಲಮರ್ಯಾದೆಯನ್ನು ಕಟ್ಟಲು ಸಾಧ್ಯವಿಲ್ಲ. ಇತಿಹಾಸದೃಷ್ಟಿಯಿಂದ ನೋಡಿದರೂ ಈ ಚಿಕಿತ್ಸೆಯು ೫೦೦೦ ೬೦೦೦ ವರ್ಷಗಳ ಹಿಂದಿನದಿದ್ದು ಅತಿ ಪ್ರಾಚೀನವಾಗಿದೆ. ಈ ಚಿಕಿತ್ಸಾಪದ್ಧತಿಯ ಮೇಲೆಯೇ, ಉಳಿದ ಪದ್ಧತಿಗಳ ಉಗಮವಾಗಿದೆಯೆಂದು ಇತಿಹಾಸದಿಂದ ಸಿದ್ಧ ಮಾಡಲು ಸಾಕಷ್ಟು ಆಧಾರಗಳಿವೆ. ಅತಿ ಪ್ರಾಚೀನಕಾಲದಿಂದಲೂ ಕಾಯ ಚಿಕಿತ್ಸೆ (Medicine) ಮತ್ತು ಶಲ್ಯ ಚಿಕಿತ್ಸೆ (Surgery and Midwifery)ಗಳು ಊರ್ಜಿತಸ್ಥಿತಿಯಲ್ಲಿದ್ದುದು ಕಂಡುಬರುತ್ತದೆ. ಈ ಪದ್ಧತಿಗಳಲ್ಲಿ ಎರಡು ಸ್ವತಂತ್ರ ಸಂಪ್ರದಾಯಗಳಿವೆ. ಕಾಯಚಿಕಿತ್ಸೆಯಲ್ಲಿ ಆತ್ರೇಯಸಂಪ್ರದಾಯ, ಶಲ್ಯಚಿಕಿತ್ಸೆಯಲ್ಲಿ ಧಾನ್ವಂತಿರಿ ಸಂಪ್ರದಾಯ. ಈ ಎರಡೂ ಸಂಪ್ರದಾಯದವರೂ, ತಮ್ಮ ತಮ್ಮ ಚಿಕಿತ್ಸಾಪದ್ಧತಿಯಲ್ಲಿ, ಅನೇಕ ಗ್ರಂಥಗಳನ್ನು ಬರೆದಿರುವರು.

ಯಾವ ಕಾಲದಲ್ಲಿ ಉಳಿದ ಪದ್ಧತಿಗಳು ಉದಯವನ್ನು ಕೂಡ ಹೊಂದಿರ ಲಿಲ್ಲವೋ, ಆ ಕಾಲದಲ್ಲಿ ಆಯುರ್ವೇದವು ಎಲ್ಲ ಚಿಕಿತ್ಸಾದಿಗಳಲ್ಲಿಯೂ ಪ್ರಗತಿಪಥ ದಲ್ಲಿತ್ತೆಂದು, ಆಯುರ್ವೇದವನ್ನು ಆಳವಾಗಿ ಅಭ್ಯಾಸಮಾಡಿದರೆ ಗೊತ್ತಾಗದಿರದು. ಈ ಬಗ್ಗೆ ಅನೇಕ ಪ್ರಸಿದ್ಧ ಆಂಗ್ಲವೈದ್ಯರ ಅಭಿಪ್ರಾಯಗಳಿರುವವಲ್ಲದೆ, ಇತಿಹಾಸವೂ ಕೂಡ ಇದಕ್ಕೆ ಸಾಕ್ಷಿಯಾಗಿದೆ. ಶಲ್ಯ ಶಾಲಾಕ್ಯ ಚಿಕಿತ್ಸೆಗಳು ಆಯುರ್ವೇದದಲ್ಲಿ ಇವೆಯೆ? ಎಂದು ಕೇಳುವಷ್ಟು, ಬಳಿಕೆಯಲ್ಲಿಲ್ಲದ ಈ ಚಿಕಿತ್ಸೆಗಳೂ ಕೂಡ ಉನ್ನತಿಯ ಶಿಖರವನ್ನೇರಿದ್ದವೆಂದು ಆಗ್ಗೆ ಮಾಡುತ್ತಿದ್ದ ಚಿಕಿತ್ಸೆಗಳ ಉಲ್ಲೇಖಗಳಿಂದ ಕಂಡು ಬರುತ್ತದೆ. ಸುಶ್ರುತದಲ್ಲಿ ವಿವರಿಸಿದ ಉದರ ಶಸ್ತ್ರಕ್ರಿಯೆ (Laporotomy), ಶಿರೋವಿದಾರಣ (Craniaomy) ಇತ್ಯಾದಿಗಳಲ್ಲಿನ ಅನೇಕ ಯಂತ್ರಗಳು, ಉಪ ಯಂತ್ರಗಳು, ಮತ್ತು ಶಸ್ತ್ರಗಳ ಉಪಯೋಗವು ಶಸ್ತ್ರಾವಚರಣಕ್ಕೆ ಸಾಕ್ಷಿಗಳಾಗಿವೆ.

ಇನ್ನು ಕಾಯಚಿಕಿತ್ಸೆಯ ವಿಷಯಕ್ಕೆ ವಿಶೇಷವಾಗಿ ಹೇಳಬೇಕಾಗಿಲ್ಲ. ಈ ವರೆಗೂ, ಬಳಿಕೆಯಲ್ಲಿದ್ದು ಕಾರಣಾಂತರಗಳಿಂದ ಹೆಚ್ಚು ಪರೀಕ್ಷಣ, ಪರಿಶೋಧನಗ ಳಾಗದಿದ್ದರೂ, ತನ್ನ ಪರಂಪರೆಯನ್ನು ಇಟ್ಟುಕೊಂಡು ಬಂದಿದೆ. ಆಯುರ್ವೇದದಲ್ಲಿ ಇಲ್ಲಿಯವರೆಗೂ ರೂಢಿಯಲ್ಲಿ ಬಾಳಿರುವದು ಹೆಚ್ಚಾಗಿ ಇದೊಂದೇ ಚಿಕಿತ್ಸಾಂಗ ವೆಂದು ಹೇಳಬಹುದು. ಈಗ್ಗೆ ಉಪಲಬ್ಧವಿರುವ ವೈದ್ಯಗ್ರಂಥಗಳಲ್ಲಿ ವಿವರಿಸಿರುವ ಚಿಕಿತ್ಸೆಯು ಅತ್ಯುತ್ತಮವಾಗಿದೆ ಎಂದು ಆಯುರ್ವೇದವನ್ನು ಅರಿತ ಆಂಗ್ಲವೈದ್ಯರ ನೇಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿರುವರು.

**ಉದಾಹರಣೆ**—'I am only repeating to you, what the Aryan Medical Science preached two thousand years ago, I am reproducing to you only a small fragment of lesson taught by charaka (Sir Howelock Charles, Medical College, Calcutta.)

ಬೇರೆ ಬೇರೆ ದೇಶದವರು ಈ ಚಿಕಿತ್ಸೆಯನ್ನು ಅಭ್ಯಸಿಸಿ, ಗ್ರಂಥಗಳನ್ನು ಭಾಷಾಂತರಿಸಿ ತಮ್ಮ ದೇಶದಲ್ಲಿ ಪ್ರಸಾರ, ಪ್ರಚಾರಗಳನ್ನು ಮಾಡಿದ್ದು ಇತಿಹಾಸ ದಿಂದ ಗೊತ್ತಾಗುವದು.

ಅಲೆಗ್ಝಾಂಡರನು ಭಾರತಕ್ಕೆ ದಂಡೆತ್ತಿ ಬಂದಾಗ್ಗೆ ಸರ್ಪದಂಶಕ್ಕೆ ಚಿಕಿತ್ಸೆ ಯನ್ನು ಇಲ್ಲಿಂದಲೇ ಕಲಿತುಕೊಂಡುಹೋದನೆಂದು ಇತಿಹಾಸದಲ್ಲಿ ಉಲ್ಲೇಖವಿದೆ.

ಇತಿಹಾಸ್ತಿ—ಇಂದಿನ ಸ್ಥಿತಿಯಲ್ಲಿಯ ಆಯುರ್ವೇದದ ದಶೆಯನ್ನು ನೋ
ದರೆ ಹಿಂದಿನ ಉಲ್ಲೇಖಗಳು ನಿಜವೇ ? ಅರ್ಥವಿಲ್ಲದ ಅವತರಣಿಕೆಗಳೇ ? ಕನ
ಗಳೇ ? ಕಟ್ಟುಕಥೆಗಳೇ ಎಂಬ ಸಂಶಯಗಳು ಬರಲು ಸಾಕಷ್ಟು ಕಾರಣಗಳಿಲ್ಲದೆ
ಇಲ್ಲ. ಇಂದಿನ ಹೀನಸ್ಥಿತಿಯನ್ನು ನೋಡಿ ಹಿಂದಿನ ವೈಭವವನ್ನು ನಂಬುವದು ಸ್ವ
ಕಠಿಣವೆಂದೇ ಹೇಳಬಹುದು. ಆಯುರ್ವೇದವು 'ಮೆಣಸು ಶುಂಠಿಗಳ ಕಷಾ
ಕಡ್ಡಿಕಸಗಳ ಕಂತೆ, ಎಂಬ ಟೀಕೆಯು ಸಂಪೂರ್ಣವಾಗಿ ಉಚಿತವಾಗದಿದ್ದರೂ
ಕೆಲವು ಮಟ್ಟಿಗಾದರೂ ನಿಜವಿದೆ. ಕೆಲವು ನಾರುಬೇರುಗಳನ್ನು ಪುಡಿ, ಗುಳಿಗೆಗಳನ್ನ
ಒಂದು ಚೀಲದಲ್ಲಿಟ್ಟುಕೊಂಡು, ಬಹಳವಾದರೆ ಅಜ್ಜ, ಮುತ್ತಜ್ಜರು ಮಾಡಿ
ಮಾತ್ರೆಗಳನ್ನು (ಕೂಪಿಸ್ಥ) ತೇಯುತ್ತಾ, ಶಾಸ್ತ್ರದ ಬೊಂಬಾಟಕ್ಕೆ ಹೋಗದೆ ಅ
ವಂಶಕತೆಯನ್ನೇ ಆಧಾರವಾಗಿಟ್ಟುಕೊಂಡು ವೈದ್ಯವೃತ್ತಿಯನ್ನು ಮಾಡುತ್ತಿರು
ಚಿಕಿತ್ಸಕರನ್ನೇ ಹೆಚ್ಚಾಗಿ ಕಾಣಬಹುದು. ಜನಸಾಮಾನ್ಯರು ರೂಢಿಯಲ್ಲಿರುವ ಕ
ಆಯುರ್ವೇದ ಚಿಕಿತ್ಸೆಯ ರೀತಿಯೇ, ಆಯುರ್ವೇದವೆಂದು ತಿಳಿದು ಆಯುರ್ವೇದಕ್ಕೆ
ಮೇಲೆ ವಿವರಿಸಿದ ವ್ಯಾಖ್ಯೆಯನ್ನು ಕಟ್ಟಿದರೆ ದೋಷವು ಯಾರದು ? ಪಾಪ ! ಜ
ಸಾಮಾನ್ಯರಿಗೆ ಆಯುರ್ವೇದದ ವೈಶಾಲ್ಯವೂ, ವಿಸ್ತಾರವೂ, ಹೇಗೆತಾನೆ ಅರಿವಾಗ
ಬೇಕು. ಸಾಧಾರಣ ವ್ರಣ(Ulcers), ಮತ್ತು ಸದ್ಯೋವ್ರಣಗಳನ್ನು (Wounds)
ಕೂಡ ತೊಳೆದು ಔಷಧಗಳನ್ನು ಹಾಕಿ ಕಟ್ಟುವದು ವೈದ್ಯರ ಕೆಲಸವಲ್ಲೆಂದು ಹೇಳ
ವದನ್ನು ನಾನು ಹಲ, ಕೆಲವು ವೈದ್ಯರ ಬಾಯಿಯಿಂದಲೇ ಬಹು ವ್ಯಥೆಯಿಂ
ಕೇಳಿದ್ದೇನೆ. 'ಕೇವಲ ಹೊಟ್ಟೆಯೊಳಗೆ ಔಷಧ ಕೊಡುವದು ನಮ್ಮ ಕೆಲಸ
ಹುಣ್ಣು ಅಥವಾ ಗಾಯಗಳಿಗೆ ಚಿಕಿತ್ಸೆ ಬೇಕಾದರೆ ಬೇರೆ ಕಡೆಗೆ ಹೋಗಬಹುದು'
ಎಂದು ಹೇಳುವ ಎಷ್ಟೋ ಜನ ವೈದ್ಯರಿದ್ದಾರೆ. ಈ ಸಂದರ್ಭದಲ್ಲಿ, ಒಂದು
ಮಾತನ್ನು ತಮ್ಮೆಲ್ಲರ ಗಮನಕ್ಕೆ ತರಬೇಕಾಗಿದೆ. ಶುದ್ಧಾಯುರ್ವೇದ, ಅಶುದ್ಧಾ
ಯುರ್ವೇದ (ಮಿಶ್ರಾಯುರ್ವೇದ)ವೆಂದು ಎರಡು ವರ್ಗಗಳನ್ನು ಮಾಡಿದ್ದು ಬಹು
ವಿಷಾದಕರವಾದ ಸಂಗತಿಯಾಗಿದೆ. ಶಲ್ಯಶಾಲಾಕ್ಯಾದಿಗಳುಳ್ಳ ಆಯುರ್ವೇದವ
ಮಿಶ್ರಾಯುರ್ವೇದವೆಂದು, ಶುದ್ಧಾಯುರ್ವೇದದ ಪುರಸ್ಕರ್ತರ ಮತ. ಇವರ
ದೃಷ್ಟಿಯಿಂದ ಅಷ್ಟಾಂಗಪರಿಪೂರ್ಣವಾದ ಆಯುರ್ವೇದವು ಅಶುದ್ಧ ಅಥವಾ ಮಿಶ್ರಾ
ಯುರ್ವೇದವೆಂದಂತಾಯಿತು. ಆದಿಯಿಂದ ಬಂದ ಆಯುರ್ವೇದವು ಅಶುದ್ಧವೇ ?
ಅಥವಾ ಮಿಶ್ರವೇ ? ಎಂದು ಶುದ್ಧಾಯುರ್ವೇದ ಪುರಸ್ಕರ್ತರಿಗೆ ಒಂದು ಪ್ರಶ್ನೆ.
ಅಶಾಸ್ತ್ರೀಯವಾದ ಈ ಭೇದವನ್ನು ದಯವಿಟ್ಟು ಮಾಡಬಾರದಾಗಿ, ಆ ಮತದ

ಪುರಸ್ಕರ್ತರಿಗೆ ನನ್ನ ಸವಿನಯ ಪ್ರಾರ್ಥನೆ. ಶಲ್ಯ, ಶಾಲಾಕ್ಯ ಮೊದಲಾದ ಉಳಿದ ಏಳು ಚಿಕಿತ್ಸಾಂಗಗಳು, ಕಾರಣಾಂತರಗಳಿಂದ ಉಪಯೋಗದಲ್ಲಿಲ್ಲವೆಂದು ಹೇಳಲು ಬಹು ವಿಷಾದವೆನಿಸುತ್ತದೆ. ರೂಢಿಯಲ್ಲಿದ್ದ, ಚಿಕಿತ್ಸೆಯ ಒಂದೇ ಒಂದು ಅಂಗವಾದ ಕಾಯಚಿಕಿತ್ಸೆಯೂ ಕೂಡ ಸಾಂಗವಾಗಿ ಸಂಪೂರ್ಣವಾಗಿ ಉಪಯೋಗದಲ್ಲಿಲ್ಲ ವೆಂದು ತಿಳಿಸಲು ಹೆಚ್ಚಿಗೆ ವಿಷಾದವೆನಿಸುತ್ತದೆ.

ಕಾಯ ಚಿಕಿತ್ಸೆಯಲ್ಲಿ ಮುಖ್ಯವಾದ ಪಂಡಿತ ಕರ್ಮವು ಸಶಾಸ್ತ್ರವಾಗಿ, ಸಾಕಲ್ಯವಾಗಿ ನಡೆಯುತ್ತ ಬಂದಿದೆಯೇ ? ಆಯುರ್ವೇದದ ಪೂಜಕರು ಮತ್ತು ಸೇವಕರಾದ ನಾವು ಅಷ್ಟಾಂಗವಾದ ಆಯುರ್ವೇದವನ್ನು ಏಕಾಂಗ ಮಾಡಿ, ಬಳಿಕೆ ಯಲ್ಲಿ ತಂದು, ಆಯುರ್ವೇದ ಶಾಸ್ತ್ರಕ್ಕೆ ಅನ್ಯಾಯಮಾಡಿದ್ದರೂ, ಪರಮಾತ್ಮನ ಸ್ವರೂಪವಾದ ಜ್ಞಾನದ ಒಂದು ಅಂಗವಾಗಿರುವದರಿಂದ, ತನ್ನ ಸತ್‌ಚಿತ್ ಶಕ್ತಿಗಳ ಪ್ರಭಾವ, ಪ್ರಕಾಶಗಳಿಂದಲೇ, ಇಲ್ಲಿಯ ವರೆಗೂ, ಜನತೆಯಲ್ಲಿ ತನ್ನ ಸ್ಥಾನಮಾನ ಗಳನ್ನು ಕಾಯ್ದುಕೊಂಡಿದೆ. ೨೦ನೇ ಶತಮಾನದ ಇತ್ತೀಚಿನ ೨-೩ ದಶಕಗಳಲ್ಲಿ ಆಯುರ್ವೇದದ ಆಂದೋಲನವು ವಿಶೇಷವಾಗಿ, ಇಡಿಯಾಗಿ ಭಾರತದಲ್ಲಿಯೂ, ಬಿಡಿಯಾಗಿ ಪ್ರಾಂತಗಳಲ್ಲಿಯೂ ಪಂಡಿತರಾದ ಗಣನಾಥಸೇನ, ಯಾದವಜಿ ತ್ರಿಕಮಜಿ ಆಚಾರ್ಯ, ಯಾಮಿನೀ ಭೂಷಣರಾಯ, ಕ್ಯಾಪ್ಟನ್ ಜಿ. ಶ್ರೀನಿವಾಸಮೂರ್ತಿ ಮೊದಲಾದ ಮಹನೀಯರಿಂದ ಆಯುರ್ವೇದದ ಸರ್ವಾಂಗೀಣ ಉನ್ನತಿಯ ಸಲುವಾಗಿ ಪ್ರಯತ್ನಗಳು ನಡೆದಿರುತ್ತವೆ. ತತ್ಪರಿಣಾಮವಾಗಿ ಭಾರತದ ಅನೇಕ ಭಾಗಗಳಲ್ಲಿ ವಿದ್ಯಾಲಯಗಳು ಸ್ಥಾಪಿತವಾಗಿ, ಆಯುರ್ವೇದದ ಚಿಕಿತ್ಸಾಂಗಗಳಲ್ಲಿ ಸಂಪೂರ್ಣವಾಗಿ ಅಲ್ಲದಿದ್ದರೂ, ಎಷ್ಟೋಮಟ್ಟಿಗೆ ಪ್ರಕಾಶವು ಬೀಳಹತ್ತಿದೆ. ಮುಂಬೈ ಪ್ರಾಂತದಲ್ಲಿ ಸಂಪೂರ್ಣ ಸಲಕರಣೆಗಳಿಂದ, ಸಿದ್ಧವಾದ ಒಂದು ಆದರ್ಶ ಆಯುರ್ವೇದ ವಿದ್ಯಾಲಯವನ್ನು ಸರಕಾರದವರು ತೆಗೆದು, ಆಯುರ್ವೇದ ಚಿಕಿತ್ಸೆ ಯಪ್ರಕಾಶಕ್ಕೆ ಎಡೆಯನ್ನು ಕೊಟ್ಟದ್ದಕ್ಕಾಗಿ ಆಯುರ್ವೇದಾಭಿಮಾನಿಗಳೆಲ್ಲರೂ ಅವರಿಗೆ ಚಿರಋಣಿಯಾಗಿರ ಬೇಕಾಗಿದೆ. ಅಲ್ಲಿ ಈಗಾಗಲೇ, ೮೦ ರೋಗಿಗಳು ಉಪಚಾರಕ್ಕೆ ಆಸ್ಪದವಾಗುವಂತೆ ವ್ಯವಸ್ಥೆ ಇದೆ. ಅದಕ್ಕೂ ಹೆಚ್ಚಾಗಿ ಈ ಸಂಸ್ಥೆಗೆ ೪-೫ ಲಕ್ಷಗಳ ಉದಾರ ದಾನವನ್ನು ಕೊಟ್ಟ ಸಂಸ್ಥೆಯ ಮೂಲಪುರುಷರಾಗಿ, ಜನರೂಪಿ ಜನಾರ್ದನ ಸೇವೆಯನ್ನು ಕೈಕೊಂಡದ್ದಕ್ಕಾಗಿ ಶ್ರೀಮಾನ್ ಆನಂದೀ ಲಾಲ ಪೊದ್ದಾರ ಮತ್ತು ಅವರ ಇಬ್ಬರು ಮಕ್ಕಳಿಗೆ ನಮ್ಮ ಅತ್ಯಂತ ಕೃತಜ್ಞತೆ ಯನ್ನು ವ್ಯಕ್ತಮಾಡಬೇಕಾಗಿದೆ. ಮದ್ರಾಸ, ಬಿಹಾರ, ಸಿಲೋನ ಪ್ರಾಂತಗಳ

ಲ್ಲಿಯೂ, ಮೈಸೂರು, ಬಡೋದಾ, ಇಂದೂರ, ತ್ರಾವಣಕೋರ ಮೊದಲಾ ಸಂಸ್ಥಾನಗಳಲ್ಲಿಯೂ, ವಿದ್ಯಾಲಯಗಳು ಹೊರಟು ಆಯುರ್ವೇದ ಅಧ್ಯಯನಕ್ಕೆ ಅನುಕೂಲತೆಯನ್ನುಂಟುಮಾಡಿವೆ.

ಇನ್ನು ಆಯುರ್ವೇದ ಚಿಕಿತ್ಸೆಯ ಶಾಖೆಗಳೆಂದ ಕಾಯಚಿಕಿತ್ಸೆ, (medicine) ಬಾಲಚಿಕಿತ್ಸೆ (Pediatrics) ಭೂತವಿದ್ಯ (mental disease), ಶಾಲಾಕ್ಯ (disease of special senses), ಶಲ್ಯ (surgery) ಅಗ ತಂತ್ರ (toxicology), ರಸಾಯನತಂತ್ರ (rejuvination). ವಾಜೀಕರಣ ಗಳಲ್ಲಿ ಪ್ರತಿಯೊಂದರ ವಿಷಯವಾಗಿ ಗ್ರಂಥಗಳಲ್ಲಿ ಹೇಳಿದ ವಿಷಯವನ್ನು, ಆಯು ರ್ವೇದವನ್ನು ಚನ್ನಾಗಿ ಅರಿತು, ಅರಗಿಸಿದ, ತಮ್ಮಂಥ ಪಂಡಿತರ ಮುಂದೆ ಹೇಳು ಅವಶ್ಯಕತೆಯು ಕಂಡುಬರುವದಿಲ್ಲ. ಗ್ರಂಥದಲ್ಲಿ ಹೇಳಿದ ವಿಷಯವನ್ನು ಸ್ವಲ್ಪ ಮಟ್ಟಿಗೆ ವಿವೇಚಿಸಿ ಆಯುರ್ವೇದ ಶಾಸ್ತ್ರದಲ್ಲಿ ಕಂಡುಬರುವ ಚಿಕಿತ್ಸಾವಿಧಾನವನ್ನು ಆ ಶಾಸ್ತ್ರದ ಆಧಾರದ ಮೇಲೆಯೇ ಅರ್ವಾಚೀನ ಕಾಲಕ್ಕನುಸರಿಸಿ ಬಳಿಕೆಯಲ್ಲಿ ತರುವದು ಸಮಂಜಸವೇ? ಶಕ್ಯವೇ? ಎಂಬ ವಿಷಯವನ್ನು ನಾವೆಲ್ಲರೂ ನಿರ್ವಿಕಾ ರಬುದ್ಧಿಯಿಂದ ಕೂಲಂಕಷವಾಗಿ ವಿವೇಚಿಸಬೇಕಾಗಿದೆ.

**ಕಾಯಚಿಕಿತ್ಸಾ**—ರೋಗದ ಉತ್ಪತ್ತಿಗೆ ಕಾರಣವಾದದ್ದನ್ನು ತ್ಯಜಿಸುವದೇ ಚಿಕಿತ್ಸೆಯ ಸಂಕ್ಷೇಪ ವ್ಯಾಖ್ಯೆ: 'ಸಮಾಸತಃ ಕ್ರಿಯಾಯೋಗೋ ನಿದಾನ ಪರಿವ ರ್ಜನಮ್' (Treatment is the applied aetiology) ಚಿಕಿತ್ಸೆಯನ್ನು ಚನ್ನಾಗಿ ನಡಿಸಲು ನಿದಾನ ಪಂಚಕವು ಅತ್ಯವಶ್ಯವಾಗಿರುವದರಿಂದ ಅದರ ಅಭ್ಯಾ ಸವು ನಮಗೆ ಸರಿಯಾಗಿರಬೇಕು. ನಮ್ಮಲ್ಲಿಯ ನಿದಾನ ಪಂಚಕಕ್ಕೆ ಸಹಾಯವಾ ಗುವ ಆಧುನಿಕ ರೋಗ ವಿಜ್ಞಾನೋಪಾಯಗಳನ್ನು ರೋಗ ನಿರ್ಣಯಕ್ಕೆ ಉಪಯೋ ಗಿಸಲು ಆಯುರ್ವೇದಶಾಸ್ತ್ರವು ಆತಂಕಿಸುವದಿಲ್ಲವೆಂಬದನ್ನು ಸಾಧಾರಣವಾ ಹೇಳಬಹುದು. ಆಯುರ್ವೇದಶಾಸ್ತ್ರದ ಮೂಲಸಿದ್ಧಾಂತಗಳು ಶಾಶ್ವತವೆಂದು ನಿರ್ವಿವಾದವಾಗಿ ಒಪ್ಪಿದರೂ ಕಾಲಮಾನ, ಪರಿಸ್ಥಿತಿಗಳಿಗನುಸಾರವಾಗಿ ಸಂಭವಿಸ ಬಹುದಾದ ರೋಗಗಳಿಗೆ ತಕ್ಕ ನಿದಾನ, ಚಿಕಿತ್ಸಾ ವಿಜ್ಞಾನವನ್ನು ಬೆಳೆಯಿಸಬಾ ದೆಂಬುದಕ್ಕೆ ಆಯುರ್ವೇದ ಶಾಸ್ತ್ರವೇ ಒಪ್ಪುವುದಿಲ್ಲವೆನ್ನುವದು, ಕಾಲಕಾಲಕ್ಕೆ ಹೊಸದಾಗಿ ಬಂದರೋಗಗಳನ್ನು ಮತ್ತು ಅವಕ್ಕೆ ತಕ್ಕ ಉಪಾಯಗಳನ್ನು ಆಯು ರ್ವೇದ ಶಾಸ್ತ್ರದಲ್ಲಿ ಏರ್ಪಡಿಸಿದ್ದುದರ ಮೇಲಿಂದ ಗೊತ್ತಾಗುತ್ತದೆ. ಚರಕದಲ್ಲಿ (ಕ್ರಿ. ಪೂ. ೫೦೧-೬೦೦ ವರ್ಷ) ವನಸ್ಪತಿಗಳ ಚಿಕಿತ್ಸೆಯು ವಿಶೇಷವಾಗಿ ಕಂಡು

ಬರುತ್ತದೆ. ಧಾತೂಪಧಾತುಗಳ ಚಿಕಿತ್ಸೆಯು, ವಿಶೇಷವಾಗಿ ಕಂಡುಬರುವುದಿಲ್ಲ. ಸುಮಾರು ೮-೯ ನೇ ಶತಮಾನಗಳಲ್ಲಿ, ಧಾತೂಪಧಾತುಗಳ, ವಿಷೋಪವಿಷಗಳ ಉಪಯೋಗವು ಪ್ರಾದುರ್ಭವಿಸಿ ಆಯುರ್ವೇದದಲ್ಲಿ ಸೇರ್ಪಡೆಯನ್ನು ಹೊಂದಿತು. ಫಿರಂಗರೋಗವೂ, ಪಾರಸೀಕಯವಾನಿ, ಅಹಿಫೇನ ಮೊದಲದ ದ್ರವ್ಯಗಳೂ ೩-೪ ಶತಮಾನಗಳಿಂದೀಚಿಗೆ ಶಾಸ್ತ್ರದಲ್ಲಿ ಸೇರ್ಪಡೆಯನ್ನು ಹೊಂದಿದವು. ಹೆಚ್ಚಿನ ಬೆಳವಣಿಗೆಯೇ ಜೀವಂತಶಾಸ್ತ್ರದ ಲಕ್ಷಣ. ಅದರಂತೆ ಆಯುರ್ವೇದವು ಬೆಳವಣಿಗೆಯನ್ನು ಹೊಂದುತ್ತಾ ಬಂದಿದೆ. ಈಗ ಪ್ರಾದುರ್ಭೂತವಾದ ರೋಗಗಳ ನಿದಾನ, ನಿವಾರಣೋಪಾಯಗಳನ್ನು ಆಯುರ್ವೇದಶಾಸ್ತ್ರಕ್ಕೆ ಅವಿರೋಧವಾಗುವಂತೆ ಸೇರ್ಪಡಿಸುವದು ಆ ಶಾಸ್ತ್ರಕ್ಕೆ ಅಸಮ್ಮತವೇ? ಅತ್ಯವಶ್ಯವಾಗಿ ಬೇಕಾಗುವ ಹಲಕೆಲವು ಸೇರ್ಪಡೆಗಳನ್ನು “ ಮಿಶ್ರಾಯುರ್ವೇದ, ಆಯುರ್ವೇದದ ಕೊಲೆ ” ಎಂದು ಗುಲ್ಲೆಬ್ಬಿಸುವದು ಒಂದು ವಿಕೃತ ಬುದ್ಧಿಯೇ ಎಂದು ಹೇಳಬಹುದು.

ತಾಪಮಾಪನಯಂತ್ರ (Thermometer), ಶ್ರವಣಯಂತ್ರ (Stethoscope) ಇತ್ಯಾದಿ, ಧನುಸ್ತಂಭದಲ್ಲಿ ತಾತ್ಕಾಲಿಕ ಉಪಯೋಗಕ್ಕಾಗಿ (Tetanus Antitoxic serum), ಮತ್ತು ಮಾಂಸ ಸಂತಾನ (Deptheria) ದಲ್ಲಿ (Deptheric Antitoxicserum) ಇತ್ಯಾದಿಗಳನ್ನು ಉಪಯೋಗಿಸಿದರೆ ತಪ್ಪೇನು? ಆದರೆ ಆಯುರ್ವೇದ ಚಿಕಿತ್ಸೆಯನ್ನು ಅಲಕ್ಷಿಸಿ, ಇವುಗಳನ್ನು ಉಪಯೋಗಿಸಬೇಕೆನ್ನುವದು ನನ್ನ ಅಭಿಪ್ರಾಯವಲ್ಲ. ಅತ್ಯವಶ್ಯವೆನಿಸಿದಲ್ಲಿ ಅವು 'ನಿಷಿದ್ಧ'ವೆಂದು ತ್ಯಜಿಸುವದು ಉಚಿತವಲ್ಲವೆನ್ನುವದೇ ನನ್ನ ಮತ. ಪ್ರತಿಯೊಂದು ರೋಗದ ಚಿಕಿತ್ಸೆಯ ವಿಶೇಷ ವಿವರಣೆಯನ್ನು ಕೊಟ್ಟು ಭಾಷಣವನ್ನು ಬೆಳಿಸದೆ ಚಿಕಿತ್ಸೆಯ ಸಾಮಾನ್ಯ ನಿಯಮಗಳನ್ನೂ ಅವುಗಳ ಮಹತ್ವವನ್ನೂ ವಿಚಾರಮಾಡುವದು ವಿಹಿತವಾಗಿದೆ. ಸಂತರ್ಪಣ, ಅಪತರ್ಪಣಗಳು; ಪಂಚಕರ್ಮ-ಸ್ನೇಹ, ಸ್ವೇದ, ವಮನ, ವಿರೇಚನ, ವಸ್ತಿಗಳನ್ನು ಯೋಗ್ಯತಾಯೋಗ್ಯತೆಗಳನ್ನು ಅರಿತು, ಉಪಯೋಗಿಸಿದಲ್ಲಿ ಅತ್ಯುತ್ತಮಪರಿಣಾಮಗಳು ಪ್ರಾಪ್ತವಾಗುತ್ತವೆ. ವೈದ್ಯರು ಪಂಚಕರ್ಮದ ಉಪಯೋಗವನ್ನು ಸಶಾಸ್ತ್ರವಾಗಿ ಪಡೆದು ತಮ್ಮ ಅನುಭವಗಳನ್ನು ಸಂಗ್ರಹಿಸಿ, ಇಂಥ ಪರಿಷತ್ತುಗಳಲ್ಲಿ ಓದಿದರೆ ಅತ್ಯಮೂಲ್ಯ ಉಪಯೋಗವಾಗುವದು. ಪಂಚಕರ್ಮಗಳಲ್ಲಿ ವಸ್ತಿಯು ಅತಿ ಮಹತ್ವದ ಕರ್ಮವಾಗಿದೆ; ಸರ್ವ ಉಪಕ್ರಮಗಳಲ್ಲಿ ವಸ್ತಿಯೇ ಶ್ರೇಷ್ಠವಾದುದು (ಉಪಕ್ರಮಾಣಾಂ ಸರ್ವೇಷಾಂ ಸೋಗ್ರಣೀಃ), ವಸ್ತಿಯು ಚಿಕಿತ್ಸೆಯ ಅರ್ಧಭಾಗವೆಂದೂ, ಅದೇಕೆ? ಸಂಪೂರ್ಣ ಚಿಕಿತ್ಸೆಯೆಂದು

ವಾಗ್ಭಟದಲ್ಲಿ ಹೇಳಿದೆ. (ವಸ್ತಿಶ್ಚಿಕಿತ್ಸಾರ್ಧ ಇತಿ ಪ್ರದಿಷ್ಟಃ, ಕೃತ್ಸ್ನಾ ಚಿಕಿತ್ಸಾ ಚ ವಸ್ತಿರೇಕೆ). ಎಲ್ಲ ದೋಷಗಳಲ್ಲಿಯೂ, ಸಂಸರ್ಗಸನ್ನಿಪಾತಗಳಲ್ಲಿಯೂ ವಸ್ತಿ ಅತಿ ಮಹತ್ವದ ಉಪಾಯವಾಗಿದೆ. ಎಲ್ಲ ದೋಷಗಳಲ್ಲಿ ವಾತವೇ ಪ್ರಧಾನವಾಗಿದ್ದು ಇಂಥ ವಾತಕ್ಕೆ ವಸ್ತಿಯೇ ಪರತಮೌಷಧವಾಗಿದೆ. ಆದ್ದರಿಂದ ನಿರೂಹ, ಅ ವಾಸನ, ಉತ್ತರವಸ್ತಿಗಳನ್ನು ಸಶಾಸ್ತ್ರವಾಗಿ ಬಳಿಕೆಯಲ್ಲಿ ತರುವದು ಅತ್ಯವ ವಾಗಿದೆ. ಅದರಂತೆ ನಸ್ಯ ಮತ್ತು ಧೂಮಪಾನವಿಧಿಗಳನ್ನು ಕೂಡ ಸಶಾಸ್ತ್ರವಾ ಉಪಯೋಗಿಸಿ ಹೆಚ್ಚೆಚ್ಚು ಅನುಭವವನ್ನು ಪಡೆಯಬೇಕು. ಆಯುರ್ವೇದದ ಔಷಧ ಕಲ್ಪಗಳು ಅತ್ಯುತ್ತಮವಾಗಿವೆ. ಚೂರ್ಣಗಳು, ಲೇಹ್ಯಗಳು, ಗುಟಿ ವಟಿಕೆಗಳು, ರಸಗಳು. ಕಷಾಯ, ಕಲ್ಕ, ಫಾಂಟ, ಆಸವ, ಅರಿಷ್ಟ, ಭಸ್ಮ, ಕೂಪಿ ರಸಗಳು, ಪಾಕ, ಸತ್ವ, ತೈಲ, ಘೃತ, ಕ್ಷಾರಗಳು ಆಯುರ್ವೇದದ ಔಷಧ ನಿರ್ಮಾ ಣಕ್ಕೆ ಅಲಂಕಾರವನ್ನುಂಟುಮಾಡಿವೆ; ಸನ್ ೧೯೧೮ನೇ ಇಸ್ವಿಯ "ಇನ್ಫ್ಲು ಯಂಝಾ" ರೋಗದಲ್ಲಿ ಕೇವಲ ತಾಳೀಸಾದಿ ಚೂರ್ಣ ಮತ್ತು ತ್ರಿಭುವನಕೀ ಯಿಂದ ಎಷ್ಟೋ ರೋಗಿಗಳು ಬದುಕಿದ್ದು ಹಳ್ಳಿಗಳಲ್ಲಿ ಉಪಚಾರಮಾಡಿದ ವೈದ್ಯ ಹೇಳಿಕೆಯಿಂದಲೂ, ಮತ್ತು ಅವರಿಗೆ ತಾಲೂಕಿನ ಅಧಿಕಾರಿಗಳು, ಮತ್ತು ಜಿಲ್ಲಾಧಿಕಾರಿಗಳು ಕೊಟ್ಟ ಪ್ರಶಸ್ತಿಗಳಿಂದಲೂ ಗೊತ್ತಾಗುತ್ತದೆ. ಅಸೃಗ್ದ (Metrorrhagia), ಅತ್ಯಾರ್ತವ (Menorrhagia), ರೋಗಗಳಲ್ಲಿ ಬೇ ಕಡಿಯಲ್ಲಿ ಚಿಕಿತ್ಸೆಪಡೆದು ಗುಣಹೊಂದದ್ದ ರೋಗಿಗಳು ನಮ್ಮಲ್ಲಿ ಕೇವಲ ಅಶೋ ಚಕ್ಕೆಯ ಕಷಾಯದಿಂದ, ಗುಣಪಡೆದ ದಾಖಲೆಗಳಿವೆ. ಹೃದಯದೌರ್ಬಲ್ಯ ಹೃತ್ಶೂಲ ಮೊದಲಾದ ಹೃದಯವಿಕಾರಗಳಲ್ಲಿ ಬಲಾರ್ಜುನ ಕ್ವಾಥವು ಉತ್ತಮ ವಾಗಿ ಪರಿಣಮಿಸಿದ್ದು ನಮ್ಮ ಅನುಭವಕ್ಕೆ ಬಂದಿದೆ. ಸ್ಯೋನಾಕ ಚಕ್ಕೆಯ ಆಮವಾತದಲ್ಲಿಯೂ, ಸೋಮಲತೆಯ ಕಷಾಯವು ತಮಕಶ್ವಾಸದಲ್ಲಿಯೂ ಗುಣ ಕಾರಿಯಾಗಿವೆ. ಕ್ವಿನಿನ್ ಮತ್ತು ಇತರ ಔಷಧಗಳಿಂದ ನಿಲ್ಲದಿದ್ದ ಚಿರಕಾಲೀ ವಿಷಮಜ್ವರಗಳು ಕೇವಲ ಸೋಮಲತೆ ಮತ್ತು ಸಕ್ಕರೆಯ ಪ್ರಯೋಗವಾದ ಜ್ವರಾ ಕುಶದಿಂದ ರ. ಚಂ.) ಗುಣಹೊಂದಿವೆ. ರಕ್ತಗುಲ್ಮದ (Uterine Fibroid ಒಂದು ರೋಗಿಯಲ್ಲಿ ಅರ್ಕಕ್ಷಾರವು ಉತ್ತಮಗುಣವನ್ನು ಕೊಟ್ಟದೆ. ಈ ಗುಲ್ಮ ಸುಮಾರು ಒಂದು ಸಣ್ಣ ತೆಂಗಿನಕಾಯಿಯ ಪ್ರಮಾಣದಷ್ಟು ಇದ್ದಿತು. ಅರ್ಕಕ್ಷಾ ವನ್ನು ದಿನಾಲು ಹೊಟ್ಟೆಯಲ್ಲಿ ಕೊಟ್ಟು ಮೇಲೆ ಸಾಸಿವೆ ಪಟ್ಟಿಯನ್ನು ಹಾಕಲ ಹೇಳಲಾಯಿತು. ಸುಮಾರು ೧-೧॥ ತಿಂಗಳಲ್ಲಿ ಗುಲ್ಮವು ಸಂಪೂರ್ಣವಾಗಿ ಕರ

ಹೋಯಿತು. ಕ್ಷಾರಗಳನ್ನು ಪ್ಲೀಹ, ಯಕೃದ್ವೃದ್ಧಿಗಳಲ್ಲಿ ಉಪಯೋಗಿಸಿ ಸಮಾಧಾನಕರವಾದ ಗುಣವನ್ನು ಪಡೆದದ್ದು ನನ್ನ ಅನುಭವದಲ್ಲಿ ಬಂದಿದೆ. ಸಾಮಾನ್ಯ ರಕ್ತಸ್ರಾವಗಳಲ್ಲಿ ಜೀರಕಾದಿ ಚೂರ್ಣವು ರಕ್ತಸಂಭನ ಕಾರ್ಯವನ್ನು ಸಮಾಧಾನಕರವಾಗಿ ಮಾಡುತ್ತದೆ. ಕಾಲ ಕೂಟ ರಸವು ಧನುಸ್ತಂಭದಲ್ಲಿ (Tetanus) ವಾತಹರವಸ್ತಿಯೊಂದಿಗೆ, ಉಪಯೋಗಿಸಿದಲ್ಲಿ ಉತ್ತಮ ಉಪಾಯವಾಗಿ ಪರಿಣಮಿಸಿದೆ. ಮಕ್ಕಳಯಕೃತ್-ಪ್ಲೀಹ ರೋಗಗಳಲ್ಲಿ (Infantile Liver) ಆಯುರ್ವೇದ ಅನುಭೂತ ಪ್ರಯೋಗವಾದ ಜಮ್ಮಿಯವರ "ಲಿವ್ಹರಕ್ಯುಅರ್"ನ್ನು ಆಂಗ್ಲವೈದ್ಯರೂ ಕೂಡ ಉಪಯೋಗಿಸುವದು ಸರ್ವಶೃತವಾಗಿದೆ. ಪ್ಲೇಗಿನಲ್ಲಿ ಡಿ. ಗೋಪಾಲಾಚಾರ್ಯರವರ ಹೈಮಾದಿಪಾನಕವು ಉತ್ತಮ ಉಪಾಯವೆಂದು ಆರ್ಯ ಮತ್ತು ಆಂಗ್ಲವೈದ್ಯರು ಹೊಗಳಿರುವರು.

ಚಿಕಿತ್ಸೆಯಲ್ಲಿ ನಾವು ವಿಶೇಷವಾಗಿ ಗಮನಿಸಬೇಕಾದ ಅತಿಮಹತ್ವದ ಒಂದು ವಿಷಯವಿದೆ. ಅದಾವುದೆಂದರೆ ನಮ್ಮ ಔಷಧ ಕಲ್ಪಗಳಿಗಾಗಿ ಸದ್ಯಕ್ಕೆ ಸಿಗುತ್ತಿರುವ ದ್ರವ್ಯಗಳಸ್ಥಿತಿ—ಔಷಧ ದ್ರವ್ಯಗಳ ಗುಣಾವಗುಣಗಳ ಮೇಲೆಯೇ ಉಪಚಾರದ ಉಪಯುಕ್ತತೆಯು ಅವಲಂಬಿಸಿರುವದರಿಂದ ಅದೇ ವೈದ್ಯರ ಯಶಸ್ಸಿನ ಮುಖ್ಯ ಕಾರಣಗಳಲ್ಲಿ ಒಂದಾಗಿದೆ. ರೋಗ ನಿದಾನವು ನಿಶ್ಚಿತವಾಗಿ ಆದರೂ ಕೂಡ, ವೀರ್ಯವತ್ತಾದ ಔಷಧವಿಲ್ಲದಿದ್ದರೆ ಬರಿಗೈಯ ಭಂಟನ ಅವಸ್ಥೆಯಂತೆ ವೈದ್ಯರ ಅವಸ್ಥೆಯಾಗುವದು. ಈಗಿನ ಔಷಧ ದ್ರವ್ಯಗಳ ಸಂಪಾದನೆ ಮತ್ತು ಸಂಗ್ರಹವು ಬಹು ಶೋಚನೀಯವಾಗಿದೆ. ಯೋಗ್ಯಋತುವಿನಲ್ಲಿ, ಉತ್ತಮಕ್ಷೇತ್ರದಲ್ಲಿ, ಸರಿಯಾಗಿ ಸಂಪೂರ್ಣವಾಗಿ ಬೆಳೆದ ವನಸ್ಪತಿಗಳನ್ನು ತಂದು, ಒಣಗಿಸಿ ಸರಿಯಾಗಿ ಸಂಗ್ರಹಿಸಿದರೆ ಅವುಗಳ ಪರಿಣಾಮವು ಚನ್ನಾಗಿ ಆಗಬಲ್ಲದು. ಎಲ್ಲಿಯೋ, ಹೇಗೋ ಬೆಳೆದ ದ್ರವ್ಯಗಳನ್ನು ಸಂಗ್ರಹಿಸಿ, ಎಷ್ಟೋ ದಿನಗಳಿಂದ ಅವ್ಯವಸ್ಥಿತವಾಗಿ ಒಂದು ಚೀಲದಲ್ಲಿಯೋ ಮೂಲಿಯಲ್ಲಿಯೋ ಬಿದ್ದು, ಹುಳತಿಂದ ನಿರ್ವೀರ್ಯವಾದ ದ್ರವ್ಯವನ್ನು ಕೊಟ್ಟರೆ ಅದೆಂತು ಗುಣಬರಬೇಕು! ಔಷಧಗಳನ್ನು ಮಾರುವವನು ಅವುಗಳ ಸರಿಯಾದ ಜ್ಞಾನವನ್ನು ಮಾಡಿಕೊಂಡಿರಬೇಕು. ವನಸ್ಪತಿಗಳನ್ನು ಸರಿಯಾದ ಕ್ಷೇತ್ರದಲ್ಲಿ, ಉಚಿತವಾದ ಕಾಲದಲ್ಲಿ ಬಿತ್ತಿ ಬೆಳೆದು ಯೋಗ್ಯ ಋತುವಿನಲ್ಲಿ ಸಂಗ್ರಹಿಸಬೇಕು. ಈ ಕ್ರಮವು ಪಾಶ್ಚಾತ್ಯ ದೇಶಗಳಲ್ಲಿದೆ. ಗದಗಿನಲ್ಲಿ "ಕರ್ನಾಟಕ ಕೆಮಿಕಲ್ ವರ್ಕ್ಸ್"ದವರು ಹೊಮ್ಮುಗಳನ್ನು ಬಿತ್ತಿ ಬೆಳೆಯುತ್ತಾರೆ. ಬಿತ್ತಿ ಬೆಳೆಯಬೇಕಾದರೆ ಪೇಟೆಯಲ್ಲಿ ಬೇಡಿಕೆಬೇಕು. ಬೇಡಿಕೆಯು ಹೆಚ್ಚಾಗಬೇಕಾದರೆ ಸರಕಾರ

ಮತ್ತು ಸಂಸ್ಥೆಗಳು ಆಯುರ್ವೇದಕ್ಕೆ ನೆರವಾಗಬೇಕು. ಶಕ್ಯವಿದ್ದ ಮಟ್ಟಿಗೆ ದ್ರವ್ಯಗಳ ಅಂಗಡಿಗಳನ್ನು ಸುಧಾರಿಸಲು ಪ್ರಯತ್ನಿಸಬೇಕು. ಸಣ್ಣಯೋಗವಾ ಸಿತೋಪಲಾದಿ ಚೂರ್ಣವನ್ನು, ಉತ್ತಮದ್ರವ್ಯಗಳನ್ನು ತರಿಸಿ ತಯಾರಿಸಿದಲ್ಲಿ ಸಾಮಾನ್ಯವಾಗಿ ಕ್ರಯಕ್ಕೆ ಸಿಗುವ ದ್ರವ್ಯಗಳಿಂದ ತಯಾರಿಸಿದ ಚೂರ್ಣಕ್ಕಿಂ ಎಷ್ಟೋಮಟ್ಟಿಗೆ ಗುಣಕಾರಿಯಾಗುವದೆಂದು ನನ್ನ ಅನುಭವದಿಂದ ಹೇಳಬಲ್ಲೆ. ಚಿಕಿತ್ಸೆಯಲ್ಲಿ ಉತ್ತಮಪ್ರಗತಿಯನ್ನು ಹೊಂದಬೇಕಾದರೆ ಕೆಳಗೆ ಕಾಣಿಸಿದ ಚಿಕಿತ್ಸಾ ಸೂತ್ರವನ್ನು ನೆನಪಿನಲ್ಲಿಟ್ಟುಕೊಂಡು ಅದರಂತೆ ವರ್ತಿಸುವದು ಅವಶ್ಯವಿದೆ.

ದೂಷ್ಯಂ ದೇಶಂ ಬಲಂಕಾಲಂ ಅನಲಂ ಪ್ರಕೃತಿಂವಯಃ ಇತ್ಯಾದಿ (ಅ. ಸೂ. ಅ. ೧೨)

## ಶಲ್ಯ ಶಾಲಾಕ್ಯ

ಅನೇಕ ಶತಮಾನಗಳಿಂದ ಕಾರಣಾಂತರಗಳಿಂದ ಬಳಿಕೆಯಲ್ಲಿ ಬಾರದ್ದರಿಂ ಈ ಅಂಗಗಳು ಇದ್ದವೇ? ಇವೆಯೇ? ಎಂಬ ಸಂಶಯವು ಸಹಜವಾಗಿ ಸಂಭವಿಸ ವದು. ಈ ಸಂಶಯದ ಭೂತವು ಆಯುರ್ವೇದ ಶಾಸ್ತ್ರವನ್ನು ಕಲಿತ ಸುಶ್ರುತಾ ಶಲ್ಯಗ್ರಂಥಗಳನ್ನು ಓದಿ ತಿಳಿದುಕೊಂಡ ವೈದ್ಯರಿಗೂ ಬೆನ್ನುಹತ್ತಿ "ಶಲ್ಯಶಾಲಾಕ್ಯ ಗಳಿಂದ ಕೂಡಿದ ಆಯುರ್ವೇದವು ಶುದ್ಧವಲ್ಲ, ಮಿಶ್ರ ಆಯುರ್ವೇದ"ವೆಂ ಆವೇಶವನ್ನು ಎಬ್ಬಿಸಿ, ಕುಣಿಸಹತ್ತಿರುವದು, ವೈದ್ಯವೃಂದಕ್ಕೆ ವಿಷಾದಕರವಲ್ಲ ಶಾಸ್ತ್ರದ ಸರ್ವಾಂಗೀಣ ಬೆಳವಣಿಗೆಗೆ ಅಪಾಯಕರವಾಗಿದೆ. ಕಾಯಚಿಕಿತ್ಸೆಗಿಂತಲೂ ಶಲ್ಯಚಿಕಿತ್ಸೆಯು ಮೊದಲನೆಯ ಮತ್ತು ಮಹತ್ವದ ಅಂಗವೆಂದು ಸುಶ್ರುತದಲ್ಲಿ ಹೇಳಿರುವದನ್ನು, ಆಯುರ್ವೇದದಲ್ಲಿ ಸರ್ಜರಿ ಮತ್ತು ಮಿಡ್ವಾಯಫರಿಗಳಿಲ್ಲವೆಂದು ಹೇಳುವ ಟೀಕಾಕಾರರು ಲಕ್ಷ್ಯದಲ್ಲಿಡುವದು ಅವಶ್ಯವಾಗಿದೆ. 'ಏತದ್ಧ್ಯಂಗಂ ಪ್ರಥಮಂ, ಪ್ರಾಗಭಿಘಾತವ್ರಣಸಂರೋಹಾತ್, ಯಜ್ಞಸ್ಯಶಿರಸ್ಸಂಧಾನಾಚ್ಚ ಅಷ್ಟಾಸ್ವಪಿಚ ಆಯುರ್ವೇದ ತಂತ್ರೇಷ್ವೇತದೇವಾಧಿಕಮಭಿಮತಮಾಶುಕ್ರಿಯಾ ಕರಣಾಚ್ಚ।

ಆಯುರ್ವೇದ ಶಿಕ್ಷಣಕ್ಕೆ ಶಾರೀರವಿಜ್ಞಾನ (Anatomy & Physiology)ವು ಅವಶ್ಯವಿದೆಯೇ? ಎಂಬ ವಿಚಾರವು ಈ ಸಮ್ಮೇಲನದಲ್ಲಿ ಲೇಖ ಮತ್ತು ಪ್ರಬಂಧಗಳ ಸಲುವಾಗಿ ಇಟ್ಟ ವಿಷಯಗಳಲ್ಲಿ ಒಂದು ಮುಖ್ಯ ವಿಷಯವಾ ಗಿದೆ. ಶಾರೀರ ವಿಜ್ಞಾನವು ಶಿಕ್ಷಣಕ್ಕೆ ಬೇಕೆ? ಬೇಡವೆ? ಎಂಬ ಪ್ರಶ್ನೆಗೆ ಶಾಸ್ತ್ರೀಯ ಆಧಾರವಿದೆಯೇ? ಮೂಲ ಗ್ರಂಥಗಳು ಶಾರೀರ ವಿಜ್ಞಾನವು ಅವಶ್ಯವೆಂದು ಆದೇ

ಸುವಾಗ ಈ ಪ್ರಶ್ನೆಯು ಹುಟ್ಟಲು ಕಾರಣವೇನು? ಸುಶ್ರುತದಲ್ಲಿ 'ತಸ್ಮಾನ್ನಿಸ್ಸಂಶಯಂ ಜ್ಞಾನಂ ಹರ್ತಾಶಲ್ಯಸ್ಯವಾಂಛ್ಛತಾ | ಶೋಧಯಿತ್ವಾಮೃತಂ ಸಮ್ಯಗ್ದ್ರಷ್ಟವ್ಯೊಂಗವಿನಿಶ್ಚಯಃ, ಸರ್ವಾನೇವ ಬಾಹ್ಯಾಭ್ಯಂತರಾನಂಗ ಪ್ರತ್ಯಂಗವಿಶೇಷಾನ್ ಯಥೋಕ್ತಾನ್ ಲಕ್ಷಯೇಚ್ಚಕ್ಷುಷಾ | ಶರೀರೇಚೈವ ಶಾಸ್ತ್ರೇಚ ದೃಷ್ಟಾರ್ಥಸ್ಸ್ಯಾದ್ವಿಶಾರದಃ | ದೃಷ್ಟಶ್ರುತಾಭ್ಯಾಂ ಸಂದೇಹಮವಾಪೋಹ್ಯಾಚರೇತ್ಕ್ರಿಯಾಮ್ ‖ (ಸು. ಶಾ. ಅ. ೫)

ಶಾಸ್ತ್ರವನ್ನು ಓದಿ, ಪ್ರತ್ಯಕ್ಷವಾಗಿ ನೋಡಿ ಸಂದೇಹವನ್ನು ಕಳೆದುಕೊಂಡು ಚಿಕಿತ್ಸೆಯನ್ನು ಮಾಡಬೇಕೆಂದು ಸ್ಪಷ್ಟವಾಗಿ ಹೇಳಿದೆ. ಆಯುರ್ವೇದ ವೈದ್ಯರೇ ಆಗಲಿ ಆಂಗ್ಲ ವೈದ್ಯರೇ ಆಗಲಿ ಶರೀರ ಛೇದನವನ್ನು ಮಾಡಿನೋಡಿದರೆ ಇಬ್ಬರಿಗೂ ಕಾಣುವ ಅಂಗಗಳು ಅಷ್ಟೇ. ಒಬ್ಬರಿಗೆ ಹೆಚ್ಚಾಗಲಿ, ಇನ್ನೊಬ್ಬರಿಗೆ ಕಡಿಮೆಯಾಗಲಿ, ಕಂಡುಬರುವುದಿಲ್ಲ. ಇಬ್ಬರೂ ನೋಡಿ ಜ್ಞಾನವನ್ನು ಮಾಡಿಕೊಳ್ಳುವ ದೇಹವೂ ಒಂದೇ. ಭಾಷೆಗಳಿಗನುಸಾರವಾಗಿ ಅಂಗಗಳ ನಾಮ ನಿರ್ದೇಶವು ವ್ಯತ್ಯಾಸವಾಗಬಹುದು. ಒಬ್ಬರು ಹಾರ್ಟ ಎಂದರೆ ಇನ್ನೊಬ್ಬರು ಹೃದಯವೆನ್ನಬಹುದು. ಒಬ್ಬರು ಅಂತ್ರವೆಂದರೆ ಇನ್ನೊಬ್ಬರು ಇಂಟೆಸ್ಟಾಯಿನ್ ಎನ್ನಬಹುದು. ಶಾರೀರದ ಸಂಪೂರ್ಣ ಜ್ಞಾನವು ಸುಶ್ರುತದಿಂದಲೇ ಆಗಲೀ ಅಥವಾ ಬೇರೆ ಗ್ರಂಥಗಳಿಂದಲೇ ಆಗಲೀ, ಅದು ಅವಶ್ಯವಾಗಿ ಬೇಕೆಂಬುದು ಶಾಸ್ತ್ರದಿಂದ ನಿರ್ವಿವಾದವಾಗಿದೆ.

ಶಲ್ಯ ಚಿಕಿತ್ಸೆಯು ಉತ್ತಮವಾಗಿ ಆಚರಿಸಲ್ಪಡುತ್ತಿತ್ತೆಂಬುವದು ಮತ್ತು ದೊಡ್ಡ ದೊಡ್ಡ ಶಸ್ತ್ರಕ್ರಿಯೆಗಳು ಮಾಡಲ್ಪಡುತ್ತಿದ್ದವೆಂಬುವದು ಶಲ್ಯ ಚಿಕಿತ್ಸೆಯನ್ನೆ ಪ್ರಾಧಾನ್ಯವಾಗಿಟ್ಟುಕೊಂಡ ಶುಶ್ರುತಾದಿ ಗ್ರಂಥಗಳಿಂದ ತಿಳಿದುಬರುತ್ತದೆ. ಯಂತ್ರ ಶಸ್ತ್ರಗಳು (Blunt and sharp instruments)ಶಸ್ತ್ರಕ್ರಿಯೆಯಲ್ಲಿಯ ಇತರ ಉಪಕರಣಗಳು, ಛೇದನ, ಭೇದನಾದಿ ಅಷ್ಟವಿಧ ಕರ್ಮಗಳು, ಶಲ್ಯತಂತ್ರದ ಉನ್ನತಿಯನ್ನು ತೋರಿಸುತ್ತವೆ. ಇಂದಿನ ಶಲ್ಯ ಚಿಕಿತ್ಸೆಯ ಸಾಮಾನ್ಯ ತತ್ವಗಳು ಹೆಚ್ಚು ಕಡಿಮೆ ಹಿಂದಿನದಕ್ಕನುಸಾರವಾಗಿಯೇ ಇದೆಯೆಂದು ಹೇಳಬಹುದು. ಉದಾ.— ಶಸ್ತ್ರಕರ್ಮದಲ್ಲಿ ಮೂರುವಿಧ :—(೧) ಪೂರ್ವಕರ್ಮ (Preparation of the patient etc.) (೨) ಪ್ರಧಾನಕರ್ಮ (Operation it-self) (೩) ಪಶ್ಚಾತ್ಕರ್ಮ (After treatment).

ಶಸ್ತ್ರಕ್ರಿಯೆಯ ಪೂರ್ವದಲ್ಲಿ ವಿರೇಚನವನ್ನು ಕೊಡಬೇಕು. ಮತ್ತು ಲಘು ಆಹಾರವನ್ನು ಕೊಡಬಹುದು. ಇತ್ಯಾದಿ (ಸು). An effective evacuation

of the bowels should be secured. Only a light evening meal should be given (Rose and Carless) ಸಕೃದೇವಾ... ಶಸ್ತ್ರಂ ಅಪಹರೇತ್............The operation should be carried through without delay etc.

ನೇಪಲ್ಸದ ವಸ್ತುಸಂಗ್ರಹವಲ್ಲಿರುವ ಗ್ರೀಕ ಮತ್ತು ರೋಮನ್ ಯಂತ್ರ ಶಸ್ತ್ರಗಳ ಪ್ರತಿಕೃತಿಗಳಾಗಿವೆಯೆಂದೂ, ೧೦೦ಕ್ಕೆ ೯೦ರಷ್ಟು ಈಗಿನ ಶಸ್ತ್ರಸಾಮಗ್ರಿಗಳು ಸುಶ್ರುತದಲ್ಲಿ ಸರಿಯಾಗಿ ವರ್ಣಿಸಲ್ಪಟ್ಟಿವೆಯೆಂದೂ, ಇನೇ ಅಖಿಲಭಾರತ ಆಯುರ್ವೇದ ಸಮ್ಮೇಲನದಲ್ಲಿ ಸಿದ್ಧಮಾಡಿ ತೋರಿಸಿದೆನೆಂದು ಮಹಾಮಹೋಪಾಧ್ಯಾಯ ಗಣನಾಥಸೇನರು ತಮ್ಮ ಒಂದು ಭಾಷಣದಲ್ಲಿ ಹೇಳಿರುವರು.

ಅನೇಕ ಬಗೆಯ ನಾಡೀಯಂತ್ರಗಳು (Tubular instruments), ಯೋನ್ಯೇಕ್ಷಣ ಯಂತ್ರ (Vaginal speculum), ಅರ್ಶೋಯಂತ್ರ (Rectal speculum), ವ್ರಣವಸ್ತಿ (Wound syringe), ಜಲೋದರ ಯಂತ್ರ (Canula), ನಾನಾವಿಧವಾದ ಶಲಾಕೆಗಳು (Probes and directors with swab), ಗರ್ಭಾಶಯ ಯಂತ್ರ (Traction forceps), ಶಸ್ತ್ರಗಳು (Sharp instruments), ರುಜ್ವಗ್ರ ವೃದ್ಧಿಪತ್ರ (Scalpel), ನತಾಗ್ರ ವೃದ್ಧಿಪತ್ರ (Bistuary) ಶರಾರೀ ಮುಖರಿಶಸ್ತ್ರ, ಕರ್ತರೀ (Scissors), ಸೂಚಿ (Needles), ವ್ರೀಹಿಮುಖಶಸ್ತ್ರ (Trocar), ಅನೇಕವಿಧವಾದ ಪಟ್ಟಿಗಳು (Bandages), ಫಲಕ (Splints), ಪಿಚು (Cotton), ಪ್ಲೋತ (Gauze) ಮೊದಲಾದವುಗಳ ವರ್ಣನೆಯು ಈಗಿನ ಯಂತ್ರಶಸ್ತ್ರಗಳಿಗೆ ಹೋಲುತ್ತವೆ. ಶಸ್ತ್ರಕ್ರಿಯಾರ್ಹ ರೋಗಗಳಲ್ಲಿ ಛೇದನ ಭೇದನ (Incision), ಲೇಖನ (Scraping scaling), ವೇಧನ ವಿಸ್ರವಣ (Puncturing), ಆಹರಣ (Extarcting), ಸೀವನ (Suturing), ಪಾಟನವೆಂಬ ಅಷ್ಟವಿಧ ಶಸ್ತ್ರಕ್ರಿಯಗಳು ಆಚರಣೆಯಲ್ಲಿದ್ದವು. ಕ್ಷಾರಾಗ್ನಿಕರ್ಮಗಳ (Application of Alkalies and cautery), ಉಪಯೋಗವು ಬಳಿಕೆಯಲ್ಲಿತ್ತು. ಶಿರಾವ್ಯಧವು (Vene puncture), ರಕ್ತಮೋಕ್ಷಣ (Blood letting) ಗಳು ಉತ್ತಮವಾಗಿ ವಿವರಿಸಲ್ಪಟ್ಟಿವೆ. ಜಲೌಕಗಳ (leeches) ಉಪಯೋಗವು ಅರ್ಹತೆ, ಅನರ್ಹತೆಯನ್ನು ಪರಿಶೀಲಿಸಿ ಪ್ರಯೋಗಿಸಲ್ಪಡುತ್ತಿತ್ತು. ದೇಹಗತಶಲ್ಯಗಳನ್ನು (Foreign bodies) ತೆಗೆಯುವ ವಿಧಾನವೂ, ಅಸ್ಥಿಭಗ್ನ ಸಂಧಿಭಗ್ನ (Fractures and dislocations), ಗಳ ಉಪಚಾರವು ಸಾಂಗೋಪಾಂಗವಾಗಿ ಹೇಳಲಾಗಿದೆ.

ಈಗಿನ ಕಾಲದಲ್ಲಿ ಕ್ಲೋರೋಫಾರ್ಮ್, ಕೊಕೇನ ಮೊದಲಾದ ಸಂಜ್ಞಾಹಾರಿಗಳನ್ನು ಕೊಟ್ಟು ನಿಸ್ಸಂಜ್ಞನನ್ನಾಗಿ ಮಾಡಿ ಶಸ್ತ್ರಕ್ರಿಯೆಯನ್ನು ಮಾಡುವಂತೆ ಹಿಂದಿನ ಕಾಲದಲ್ಲಿ ಮಾಡುತ್ತಿದ್ದರೋ ಎಂಬುವದು ಅನೇಕರು ಕೇಳುವ ಪ್ರಶ್ನೆಯಾಗಿದೆ. ದೊಡ್ಡ ಶಸ್ತ್ರಕ್ರಿಯೆಗಳಲ್ಲಿ ಸಂಮೋಹಿನೀ ಚೂರ್ಣವನ್ನು ಕೊಟ್ಟು ನಿಸ್ಸಂಜ್ಞನಾದ ಮೇಲೆ ಶಸ್ತ್ರಕ್ರಿಯೆಯನ್ನು ಮಾಡಿ ಪುನಃ ಸಂಜೀವಿನೀ ಔಷಧಗಳಿಂದ ಸಂಜ್ಞೆಯನ್ನು ತಂದ ಉಲ್ಲೇಖವಿದೆ. 'ತತಸ್ತಾವಪಿ ರಾಜಾನಂ ಮೋಹಯಿತ್ವಾ ಮೋಹನ ಚೂರ್ಣೇನ ಶಿರಃಕಪಾಲ ಮಾದಾಯ, ತತ್ಕರೋಟಿಕಾಯಾಂ ಸ್ಥಿತಂ ಶಫರಕುಲಂ ಗೃಹೀತ್ವಾಕಸ್ಮಿಂಶ್ಚಿದ್ಭಾಜನೇ ನಿಕ್ಷಿಪ್ಯ ಸಂಧಾನ ಕರಣ್ಯಾ ಕಪಾಲಂ ಯಥಾವದಾರಚಯ್ಯ, ಸಂಜೀವಿನ್ಯೋಷಧೀಭಿಸ್ತಂ ಪುನಃ ಜೀವಯಿತ್ವಾ ...... **(ಭೋಜಪ್ರಬಂಧ)** ವ್ರಣಚಿಕಿತ್ಸೆಯಲ್ಲಿ ವೇದನಾಶಾಮಕವಾಗಿ ಮದ್ಯವು ಶಸ್ತ್ರಕ್ರಿಯೆಯ ಕಾಲದಲ್ಲಿ ಉಪಯೋಗಿಸಲ್ಪಡುತ್ತಿತ್ತು. 'ಮದ್ಯಪಂ ಪಾಯಯೇನ್ಮದ್ಯಂ ತೀಕ್ಷ್ಣಂ ಯೋ ವೇದನಾಽಸಹಃ । ನಮೂರ್ಛತ್ಯನ್ನ ಸಂಯೋಗಾನ್ಮತ್ತಃ ಶಸ್ತ್ರಂನಬುಧ್ಯತೇ ॥ (ಸು. ಅ. ೧೭) ಸತ್ವಬಲಸಂವರ್ಧಿನೀಂ ಸುರಾಂಪಾಯಯಿತ್ವಾ ಇತ್ಯಾದಿ. ಲಘು (Minor) ಮತ್ತು ಬೃಹತ್ (Major) ಶಸ್ತ್ರಕ್ರಿಯೆಗಳಲ್ಲಿಯ ಒಂದೊಂದು ಶಸ್ತ್ರಕ್ರಿಯೆಯ ಹಿಂದಿನ ಮತ್ತು ಇಂದಿನ ವಿಧಾನಗಳನ್ನು ವಿವೇಚಿಸುವಾ.

**ವಿದ್ರಧಿ ಶಸ್ತ್ರಕ್ರಿಯಾ**—ಆಮವಿದ್ರಧಿಯು ಪಾಕವನ್ನು ಹೊಂದುವವರೆಗೆ ಉಪನಾಹಗಳಿಂದ ಪಾಚನಮಾಡಿ ಪಕ್ವವಾದಮೇಲೆ ಭೇದನಮಾಡಬೇಕು "ತಂ ಪಾಚಯಿತ್ವಾ, ಭಿಂದ್ಯಾದ್ಭಿನ್ನಂಚ ಶೋಧಯೇತ್" ಮತ್ತು ಕಷಾಯಗಳಿಂದ ತೊಳೆಯಬೇಕು. ಔಷಧಯುಕ್ತ ತೈಲಘೃತಗಳಿಂದ ರೋಪಣಮಾಡಬೇಕು. ಮಜ್ಜಾಗತ ವಿದ್ರಧಿಯಲ್ಲಿ ಅಸ್ಥಿಯನ್ನು ಭೇದಿಸಿ, ನಿಶ್ಶಲ್ಯವಾಗಿದೆಯೆಂದು ಮನಗಂಡ ಮೇಲೆ (ನಿಶ್ಶಲ್ಯಮಥವಿಜ್ಞಾಯ) "Void of bony sequestrum, dried material or any foreign body" ತಿಕ್ತಕಷಾಯಗಳಿಂದ ತೊಳೆದು ಘೃತವರ್ತಿಯನ್ನು ಉಪಯೋಗಿಸಬೇಕು. ಯಕೃದ್ವಿದ್ರಧಿಯಲ್ಲಿ ಮೊದಲು ಬಲಸತ್ವವರ್ಧಿನಿಯಾದ ಸುರೆಯನ್ನು ಕುಡಿಸಿ ಕ್ಷಿಪ್ರಹಸ್ತನೂ, ದೃಷ್ಟಕರ್ಮನೂ, ಸ್ಥಿರಚಿತ್ತನೂ ಆದ ವೈದ್ಯನು ವಿದ್ರಧಿಯು ಭೇದಿಸುವ ಹಾಗೆ ಶಸ್ತ್ರವನ್ನು ಪ್ರಯೋಗಿಸಬೇಕು.

Treatment of Abcess in brief—

As a rule however one relieves pain and encourages suppuration by applying fomentation or

Poultices to the part. As soon as such suppurati has occured an incession is made, any sloughs shou be removed .... the cavity shold be packed wi gauge soaked with idoform, foreign body, dea material, bony sequistruin, if any, require removal (Rose carless).

**ಉದರ ಶಸ್ತ್ರಕ್ರಿಯಾ**—(Laparotomy and paracente Abdomines ಬದ್ಧಗುದರಲ್ಲಿ Intestinal obstruction) ಸ್ನೇಹಸ್ವೇ ವನ್ನು ಮಾಡಿ ನಾಭಿಯ ಕೆಳಭಾಗದಲ್ಲಿ ಎಡಗಡೆಗೆ ರೋಮರಾಜಿಯನ್ನು (Len alba) ಬಿಟ್ಟು ಉದರವನ್ನು ಪಾಟನಮಾಡಬೇಕು. "ಅಧೋ ನಾಭೇರ್ವಾಮ ಚತುರಂಗಲಮುಪಹಾಯರೋಮರಾಜ್ಯಾಃ, ಉದರಂ ಪಾಟಯಿತ್ವಾ, ಚತುರಂಗು ಪ್ರಮಾಣಾನಿ ಅಂತ್ರಾಣಿ, ಬಹಿರ್ನಿಷ್ಕೃಷ್ಯ" ಇತ್ಯಾದಿ ೪ ಅಂಗುಲ ಪ್ರಮಾ ಕರಳನ್ನು ತೆಗೆದು ಪ್ರತಿರೋಧವನ್ನು ಮಾಡುವ ಶಲ್ಯವನ್ನು ತೆಗೆದು ಅಂತ್ರಗಳ ಯಥಾಸ್ಥಾನ ಸ್ಥಾಪಿಸಿ ಉದರವನ್ನು ಹೊಲೆಯಬೇಕು.

**ಉದಕೋದರ**—(Ascites) ಸ್ನೇಹಸ್ವೇದವಾದ ಮೇಲೆ, ಆಪ್ತರಿ ಹಿಡಿಯಲ್ಪಟ್ಟವನಾಗಿ, ಬಗಲಿನ ವರೆಗೂ ವಸ್ತ್ರಪಟ್ಟದಿಂದ ಸುತ್ತಬೇಕು. ನಾಭಿ ಕೆಳಗೆ ಎಡಗಡೆ, ರೋಮರಾಜಿಯಿಂದ ೪ ಅಂಗುಲಗಳನ್ನು ಬಿಟ್ಟು ವ್ರೀಹಿ ಮು ದಿಂದ (Trocar), ಅಂಗುಷ್ಠೋದರ ಪ್ರಮಾಣ ಆಳವಾಗಿ ಭೇದಿಸಬೇಕು. ನಾ ಯಂತ್ರವನ್ನು (Cannula) ಇಟ್ಟು ದುಷ್ಟವಾದ ಉದಕವನ್ನು ಸ್ರಾವಿಸಬೇ ಸಹಸಾ ನೀರನ್ನು ತೆಗೆದರೆ ಶ್ವಾಸಾದಿ ಉಪದ್ರವಗಳಾಗುವದರಿಂದ ಮೆಲ್ಲಗೆ ತೆಗೆ ಬೇಕು.

"If it is probable that the obstruction is in th small intestines, a small incision is made through th linea alba. The first presenting coil of the intestin is withdrawn and is tapped to allow first just of flat etc. The cause of obstruction should be discovere and dealt with according to circumstances. Foreig bodies are then removed by longitudinal incision.

**Paracentesis Abdominis**—The usual plan is t seat the patient in a chair and to encirle the abdomen

with flannel bandage, and is held by the assistants to maintain continous pressure. The median line below the umbilicus is the place usually chosen for the puncture. There is no objection to inserting through the flanks. It is disirable to withdraw the flannel more slowly so as to prevent shock. (Rose carles)."

ಗರ್ಭಿಣಿ ಮತ್ತು ಪ್ರಸೂತಿಯ ರೋಗಗಳ ಚಿಕಿತ್ಸೆಯನ್ನು ವಿಸ್ತಾರವಾಗಿ ವಿವೇಚಿಸಲು ಅವಕಾಶವಿಲ್ಲದ್ದರಿಂದ ವಿಶೇಷವಾಗಿ ಪ್ರಸೂತಿ ತಂತ್ರದಲ್ಲಿ ಶಲ್ಯ ಚಿಕಿತ್ಸಾ (obstetric surgery) ಭಾಗವನ್ನಷ್ಟೇ ಹೇಳಬಯಸುತ್ತೇನೆ.

**ಪೂರ್ವಕರ್ಮ**—(Preliminary preparations) ಉತ್ತಾನಾಯಾಃ ಅಭುಗ್ನಸಕ್ಥ್ಯಾಃ, ವಸ್ತ್ರಧಾರಕೋನ್ನಮಿತಕಟ್ಯಾಃ ಇತ್ಯಾದಿಃ (obstetric operations with the exception of caesarean section are usually undertaken with the patient in the lithotomy position.)

**ಪ್ರಧಾನಕರ್ಮದಲ್ಲಿ**—ಮೊದಲು ಉತ್ಕರ್ಷಣಾಪಕರ್ಷಣ, ಸ್ವಾಭಿನಾಪವರ್ತ, ಋಜೂಕರಣ (Versions and tractions), ಹೇಳಿರುತ್ತದೆ. ಇವುಗಳಲ್ಲಿ ಎರಡು ಭೇದಗಳಿವೆ. ೧. ಬಾಹ್ಯ, ೨. ಅಭ್ಯಂತರ. ಹಸ್ತಂ ಯೋನೌ ಪ್ರವಿಶ್ಯಗರ್ಭಮಾಹರೇತ್, ಇದು ಅಂತರ್ವಿಧಾನ. ಈ ಎಲ್ಲ ವಿಧಾನಗಳು ಮೇಲಿದ್ದ ಗರ್ಭವನ್ನು ಕೆಳಕ್ಕೂ, ಕೆಳಗಿದ್ದ ಗರ್ಭವನ್ನು ಮೇಲಕ್ಕೂ, ಮತ್ತು ವಕ್ರವಾದ ಗರ್ಭವನ್ನು ಋಜುವಾಗಿಯೂ, ಪ್ರಸವಕ್ಕನುಕೂಲವಾಗುವಂತೆ ಮಾಡಿಕೊಳ್ಳಲು ಉಪಯೋಗಿಸಲ್ಪಡುತ್ತಿದ್ದವು.

ಇವುಗಳಿಂದ ಶಕ್ಯವಾಗದಿದ್ದರೆ "ಏವಮಶಕ್ಯೇ ಶಸ್ತ್ರಮವಚಾರಯೇತ್" ಶಿರೋವಿದಾರಣ (craniotomy), ಉದರವಿದಾರಣ ವಾತಪೂರ್ಣೋದರಂ ವಿದಾರ್ಯ, ನಿರಸಾಚಾಂತ್ರಾಣಿ, ಶಿಥಿಲೀಭೂತಂ ಆಹರೇತ್) (Eviseration) ಮತ್ತು ಯಾವ ಯಾವ ಅಂಗಗಳು ಅಪತ್ಯಪಥದಲ್ಲಿ ಅಡ್ಡಬರುವವೋ ಅವುಗಳನ್ನು ಕತ್ತರಿಸಿ ನಾರಿಯನ್ನು ರಕ್ಷಿಸಬೇಕು (decapitation, clidotomy). ಇವೆಲ್ಲ ನಾಶಕಾರಕ ಶಸ್ತ್ರಕ್ರಿಯೆಗಳನ್ನು (Destructive operation) ಸಚೇತನ ಗರ್ಭದ ಮೇಲೆ ಮಾಡಬಾರದು. "ಸಚೇತನಂ ಶಸ್ತ್ರೇಣ ನಕಥಂಚನದಾರಯೇತ್" ಆದರೆ ತಾಯಿಗೆ ಅಪಾಯವಾಗುವ ಸಂಭವವಿದ್ದಲ್ಲಿ ಗರ್ಭವನ್ನು ತೆಗೆಯಬೇಕು.

When the child is dead and the safety of th mother is concerned craniotomy should be resorted t If the child is alive, the operation is justifiable only i exceptional cases. (Kadarnath Das).

**ಅಪರಾಪಾತನ ಪದ್ಧತಿಯು**—(Expressions of placenta ಆಧುನಿಕ ಸುಧಾರಿಸಿಪ ಪದ್ಧತಿಗೆ ಕಡಿಮೆ ಇಲ್ಲದಂತೆ ಆಯುರ್ವೇದದಲ್ಲಿ ವರ್ಣ ವಾಗಿದೆ. ಪ್ರಪೀಡನದಿಂದಾಗಲೀ (Dublin's Method of placenta expression) ಹಸ್ತದಿಂದಾಗಲಿ (Manual removal of placenta ಅಪರಾಪಾತನವನ್ನು ಮಾಡಿಸಬೇಕೆಂದು ಹೇಳಿದೆ.

ಶಾಲಾಕ್ಯಾಂಗದಲ್ಲಿ, ಊರ್ಧ್ವಾಂಗಗಳಲ್ಲಿ ಅತಿಮಹತ್ವದ ಇಂದ್ರಿಯವಾ ನೇತ್ರಚಿಕಿತ್ಸೆಯ ರೀತಿಗಳನ್ನು ನಿರ್ದೇಶಿಸಿ, ಹಿಂದಿನಕಾಲದಲ್ಲಿ ನೇತ್ರರೋಗಗಳ ಶಲ್ಯಚಿಕಿತ್ಸೆಯು ಹೇಗೆ ಮಾಡಲ್ಪಡುತ್ತಿತ್ತೆಂಬಡನ್ನು ಲಿಂಗನಾಶ (cataract) ಒಂದು ಉದಾಹರಣೆಯನ್ನು ಕೊಟ್ಟು ಇಂದಿನ ಲಿಂಗನಾಶದ ಶಸ್ತ್ರಚಿಕಿತ್ಸೆಗೆ ಹಿಂ ನದು ಸಾಮ್ಯವಿದೆಯೋ? ಎಂಬವನ್ನು ವಿಚಾರಸಬೇಕಾಗಿದೆ.

ಅಕ್ಷಿರೋಗಗಳಲ್ಲಿ ಮುಖ್ಯವಾಗಿ ಆಶ್ಚ್ಯೋತನ (Drops), ಅಂಜ (Collyrim) ಸ್ವೇದನ (Fomentation), ಉಪನಾಹ (Poultice) ಶಿರಾಮೋಕ್ಷಣ (blood letting) ವಸ್ತಿ, ಶಿರೋವಸ್ತಿ, ವಿರೇಚನ ಜಲೂ ಮತ್ತು ಶಸ್ತ್ರಗಳನ್ನು ದೋಷಗಳನ್ನು ಮತ್ತು ರೋಗಗಳ ಅವಸ್ಥೆಯನ್ನು ಅರಿ ಉಪಯೋಗಿಸುತ್ತಿದ್ದರು.

**ಲಿಂಗನಾಶ ಚಿಕಿತ್ಸಾ**—ಸಮಶೀತೋಷ್ಣಕಾಲದಲ್ಲಿ ರೋಗಿಯನ್ನು ಕುಳ್ಳಿ ಯಂತ್ರಿತನನ್ನಾಗಿಮಾಡಿ, ತನ್ನ ಮೂಗಿನ ಕಡೆಗೆ ನೋಡುತ್ತಿರಬೇಕೆಂದು ಹೇ ಕಣ್ಣುಗಳನ್ನು ಸರಿಯಾಗಿ ಅಗಲು ಮಾಡಿ ಕೃಷ್ಣದಿಂದ, ಶುಕ್ಲವನ್ನು ಬಿಟ್ಟ ಅಪಾಂಗದಲ್ಲಿ ಮೇಲಾಗಲೀ, ಕೆಳಗಾಗಲೀ, ಪಾರ್ಶ್ವಕ್ಕಾಗಲೀ, ಆಗದೆ ಹೆಬ್ಬೆ ನಡುಬೆರಳು, ನಿರ್ದೇಶಕ ಬೆರಳುಗಳಿಂದ, ಶಲಾಕೆಯನ್ನು ಹಿಡಿದು, ಎಡಗಣ್ಣ ಬಲಗೈಯಿಂದಲೂ, ಬಲಗಣ್ಣನ್ನು ಎಡಗೈಯಿಂದಲೂ, ವ್ಯಧಿಸಬೇಕು. ಕಣ್ಣಿ ಒಳಭಾಗದಿಂದ ನೀರು ಬಂದರೆ ಮತ್ತು ಶಬ್ದವಾದರೆ (ವಾರಿ ಬಿಂದ್ವಾಗಮ (aqueous escape), ಉತ್ತಮವ್ಯಥೆಯಾಗಿದೆಯೆಂದು ತಿಳಿಯಬೇಕು. ಯಾದ ಮೇಲೆ ಮೋಡವಿಲ್ಲದ ಸೂರ್ಯನಂತೆ; ದೃಷ್ಟಿಯು ಪ್ರಕಾಶವಾಗಬೇಕು

ಮತ್ತು ಘೃತವನ್ನು ಹಚ್ಚಿ ಧೂಳು, ಧೂಮವಿಲ್ಲದ ಮನೆಯಲ್ಲಿ ಅಂಗಾತನಾಗಿ ಮಲಗಿಸಬೇಕು. ಶಸ್ತ್ರಕ್ರಿಯೆಯ ಕಾಲದಲ್ಲಿ ಕೆಮ್ಮುವದು, ತೀಗುವದು, ಉಗುಳುವದು, ಮೊದಲಾದವುಗಳನ್ನು ಮಾಡಬಾರದು. ಮೂರು ಮೂರು ದಿನಗಳಿಗೊಮ್ಮೆ ವಾತಹರಕಷಾಯಗಳಿಂದ ತೊಳೆಯಬೇಕು. ಹೀಗೆ ಹತ್ತುದಿನಗಳವರೆಗೆ ನಿಯಮನ ಮಾಡಿ ಪಶ್ಚಾತ್ಕರ್ಮವನ್ನು ಮಾಡಬೇಕು. ಲಘು ಆಹಾರವನ್ನು ಕೊಡಬೇಕು.

ಈಗಿನ ಪದ್ಧತಿಗೂ ಮತ್ತು ಹಿಂದಿನ ಪದ್ಧತಿಗೂ ಇರುವ ಸಾಮ್ಯಗಳು—

ಶಸ್ತ್ರಕ್ರಿಯೆಯ ಕಾಲದಲ್ಲಿಯ ದೃಷ್ಟಿಯ ರೀತಿ 'ಸ್ವನಾಸಾಂ ಪಶ್ಯತಸ್ಸಮಂ (looking down during operation), ಶಸ್ತ್ರವನ್ನು ಹಿಡಿಯುವ ರೀತಿಯು "ಮಧ್ಯಪ್ರದೇಶಿನ್ಯಂಗುಷ್ಠ ಸ್ಥಿರಹಸ್ತಗ್ರಹೀತಯಾ' (The knife is held between the thumb and the two fingers) ಉನ್ಮೀಲ್ಯ ನಯನೆಸಮ್ಯಕ್ (Inserting the speculum), ಶಸ್ತ್ರಕ್ರಿಯೆಯಾದ ಮೇಲೆ ವಸ್ತ್ರಪಟ್ಟದಿಂದ ಕಟ್ಟುವದು. "ವಸ್ತ್ರಪಟ್ಟೇನ ವೇಷ್ಟಯೇತ್" (serve the pad with Moorfield's bandage), ಶಸ್ತ್ರಕ್ರಿಯೆಯನ್ನು ಮಾಡುವ ಕಾಲದಲ್ಲಿ ರೋಗಿಯು ಕೆಮ್ಮುವದು, ಶೀನುವದು ಇತ್ಯಾದಿ ಮಾಡಬಾರದು. (He must be cautioned not to strain). ಕಷಾಯದಿಂದ ಮೂರು ಮೂರು ದಿನಗಳಿಗೊಮ್ಮೆ ತೊಳೆಯಬೇಕು. ಮತ್ತು ಹತ್ತು ದಿವಸಗಳವರೆಗೆ ನಿಯಮನಮಾಡಿ ದೃಷ್ಟಿಪ್ರಸಾದನವಾದ ಪಶ್ಚಾತ್ಕರ್ಮವನ್ನು ಮಾಡಬೇಕು. 'ತ್ರ್ಯಹಾತ್, ತ್ರ್ಯಹಾತ್, ಧಾವೇತ; ದಶಾಹಮೇನಂ ಸಂಯಮ್ಯ ದೃಷ್ಟಿ ಪ್ರಸಾದನ ಪಶ್ಚಾತ್ಕರ್ಮಸೇವೇತ.' (The wound is inspected after 24 hours, or 48 hours if the patient is comfortable. After ten days nothing but smoked glasses should be worn (May Worth).

**ವೈಷಮ್ಯಗಳು**—ಹಿಂದಿನ ಕಾಲದಲ್ಲಿ ರೋಗಿಯನ್ನು ಕುಳ್ಳಿರಿಸಿ ಶಸ್ತ್ರಕ್ರಿಯೆಯನ್ನು ಮಾಡುತ್ತಿದ್ದರು. ಈಗ್ಗೆ ಮಲಗಿಸಿ ಮಾಡುತ್ತಾರೆ.

**ವಾರಿಬಿಂದ್ವಾಗಮ** --(aqueous escape)ವಾದರೆ ಸಮ್ಯಗ್ವ್ಯಧ ಲಕ್ಷಣವೆಂದು ಹಿಂದಿನ ರೀತಿಯಲ್ಲಿ ಹೇಳಿದೆ. ಇಂದಿನದರಲ್ಲಿ ಅದು ನಿರುಪಾಯ ದೋಷವೆಂದು ಹೇಳಿದೆ. (In making the incision it should be continued as if nothing had happened. The resulting coloboma will be large, ugly, but this eye in all

probability do quite well) ಇವು ವೈಷಮ್ಯಗಳು. ಕೇವಲ ವ್ಯ
ಮಾತ್ರವನ್ನೇ ಹೇಳಿದ್ದರಿಂದ ಆ ಕಾಲದಲ್ಲಿ ಈಗಿನಂತೆ ಕಾಚವನ್ನು (len
ಪೂರ್ಣವಾಗಿ ತೆಗೆಯದೆ (extraction) ಅಲ್ಲಿಯೇ ಅದರ ಸ್ಥಾನಚ್ಯುತಿಯ
(dislocation) ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಪಾರಂಪರ್ಯದಿಂದ ಲಿ
ನಾಶದ ಮೇಲೆ ಶಸ್ತ್ರಕ್ರಿಯೆಯನ್ನು ಮಾಡುತ್ತ ಬಂದಿದ್ದ ನೇತ್ರವೈದ್ಯರು ಈಗ
ಇದೇ ರೀತಿಯಲ್ಲಿಯೇ ಮಾಡುತ್ತಿರುವರೆಂದು ಕಾಣುತ್ತದೆ.

ಆಯುಧಗಳಿಂದ ಅಥವಾ ರೋಗಗಳಿಂದ ಮೂಗು ನಾಶವಾದಾಗ, ಬ
ಮೂಗನ್ನು ಹಚ್ಚುವ ವಿಧಾನವನ್ನು (Rhinoplasty) ಈಗಿನವರು 'Indian
method' ಎಂದು ಹಿಂದಿನದನ್ನೇ ತೆಗೆದುಕೊಂಡಿರುವರು. 'The method
of Rhinoplasty are many, but only one will b
described. The so called Indian method consists i
the formation of a nose etc.' (Rosecarless P. 909.)

ಉನ್ಮಾದ ಅಪಸ್ಮಾರ ಮೊದಲಾದ ಮಾನಸಿಕ ರೋಗಗಳಲ್ಲಿ, ಜ
ಹೋಮ, ಸಂಯಮ, ಯಜ್ಞ, ನಸ್ಯ, ವಿರೇಚನ, ಭೀಷಣ, ತ್ರಾಸನ, ಶಿರಾವ್ಯ
ಗಳನ್ನು ಮಾಡಬೇಕು. ಸರ್ವವಿಧವಾದ ಉನ್ಮಾದಗಳಲ್ಲಿ ಚಿತ್ತಪ್ರಸಾದನವಾ
ಚಿಕಿತ್ಸೆಯನ್ನು ಮಾಡಬೇಕು. ಶೋಕ ಶಲ್ಯವನ್ನು ಕಿತ್ತೊಗೆಯಬೇಕು. ಇ
ಸಂಕ್ಷೇಪವಾದ ಮಾನಸರೋಗಗಳ ಚಿಕಿತ್ಸೆಯು.

ಇದರಂತೆ ಬಾಲರೋಗ, ಮತ್ತು ಅಗದ ತಂತ್ರದಲ್ಲಿ ಸಂಕ್ಷೇಪವಾಗಿ ಹೇ
ಳ್ಪಟ್ಟ ಚಿಕಿತ್ಸೆಯ ಮೂಲತತ್ವಗಳ ಸೂತ್ರಗಳನ್ನು ಪ್ರಯೋಗಮಾಡಿ, ಅನುಭ
ವನ್ನು ಮುಂದಿನವರಿಗೆ ಅನುಕೂಲವಾಗುವಂತೆ ಬೇರೆ ಬೇರೆ ಸ್ವತಂತ್ರ ಗ್ರಂಥಗ
ರೂಪದಿಂದ ಪ್ರಕಟಿಸಬೇಕು. ಪ್ರತಿಯೊಂದು ಶಾಲೆಯಲ್ಲಿಯೂ ಬೇರೆ ಬೇರೆ ವಿಸ್ತ
ರವಾದ ಗ್ರಂಥಗಳನ್ನು ಬರೆಯಲು, ಬೇರೆ ಬೇರೆ ತಜ್ಞ ವೈದ್ಯರನ್ನು ನೇಮಿಸಬೇಕ
ರಸಾಯನ ವಾಜೀಕರಣಗಳು, ಬೇರೆ ವೈದ್ಯಶಾಸ್ತ್ರದಲ್ಲಿಲ್ಲದ ಅತ್ಯಮೂಲ್ಯ ಚ
ತ್ಸಾರತ್ನಗಳಾಗಿವೆ. ಮೊನ್ನೆ ಮೊನ್ನೆ ಪಂ॥ ಮಾಲವಿಯಾಜಿಯವರಿಗೆ ಕಾಯಕ
ವನ್ನು ಕೊಟ್ಟು ರಸಾಯನ ಚಿಕಿತ್ಸೆಯನ್ನು ಪ್ರಕಾಶಕ್ಕೆ ತಂದ ಯಶಸ್ಸು ಶ್ರೀ ತಾಪ
ಮಹಾರಾಜರಿಗೆ ಸಲ್ಲುವದು. ೧೮೦ ವರ್ಷದವರಾದರೂ ಶ್ರೀ ತಾಪಸೀ ಮಹ
ರಾಜರು ತರುಣರಂತೆ ಕಾಣುವ ಅವರ ದೇಹಸ್ಥಿತಿಯನ್ನು ನೋಡಿದರೆ ಈ ಚಿ
ತ್ಸೆಯ ಬೆಲೆಯು ನಮ್ಮ ನಿದರ್ಶನಕ್ಕೆ ಬರುತ್ತದೆ.

**ನಮ್ಮ ಕರ್ತವ್ಯ—**

ಆಯುರ್ವೇದಗ್ರಂಥಗಳಲ್ಲಿಯ ವಿವರಣೆಯ ಮೇಲಿಂದ, ಆಯುರ್ವೇದ ವೈದ್ಯರು ಈಗಿನ ಕಾಲದಲ್ಲಿ ಶಸ್ತ್ರಕ್ರಿಯೆಯನ್ನು ಮಾಡಲು ಸಾಧ್ಯವೆ? ಇತಿಹಾಸವು ಪ್ರಗತಿಗೆ ಕೆಲವುಮಟ್ಟಿಗೆ ಸಹಾಯವಾದರೂ, ಕೇವಲ ಇತ್ತು ಎನ್ನುವದರಿಂದ, ಇಂದಿನಕಾಲಕ್ಕೆ ಯಾವರೀತಿಯಿಂದಲೂ, ಸಹಾಯವಾಗಲಾರದು. ನಮ್ಮಲ್ಲಿ ಶಲ್ಯ ಶಾಲಾಕ್ಯಾದಿಗಳಿವೆ ಎಂದರೆ, "ಮಾಡಿತೋರಿಸಿರಿ" ಎಂಬ ಒಂದೇ ಪ್ರಶ್ನೆಯು ಉಪಸ್ಥಿತವಾಗುತ್ತದೆ. ಹಿಂದಿನ ಗ್ರಂಥಗಳನ್ನು ಸೂತ್ರರೂಪವಾಗಿ ಬರೆಯುವ ಪದ್ಧತಿಯಿಂದಲೋ ಎಲ್ಲ ಶಾಸ್ತ್ರಗಳಲ್ಲಿ ಸೂತ್ರಗಳಿವೆ. ಉದಾ—ಬ್ರಹ್ಮಸೂತ್ರ, ಯೋಗಸೂತ್ರ, ಕಾಮಸೂತ್ರ, ಭಕ್ತಿಸೂತ್ರ ಇತ್ಯಾದಿ. ಆ ಕಾಲಕ್ಕೆ ಅಚ್ಚಿನ ತಕ್ಕ ಅನುಕೂಲತೆಗಳಿಲ್ಲದ್ದರಿಂದಲೋ, ನೆನಪಿಗೆ ಅನುಕೂಲವಾಗುವಂತೆ ಎಲ್ಲ ವಿಷಯ ಗಳನ್ನು ಸೂತ್ರರೂಪವಾಗಿ ಹೇಳಿ, ಕ್ರಿಯೆಯನ್ನು ತಜ್ಞರು ಸ್ವತಃ ಇದುರಿಗೆ ನಿಂತು ಮಾಡಿಸುತ್ತಿದ್ದಿರಬೇಕೆಂದು ಊಹಿಸಬಹುದಾಗಿದೆ. ಈಗಿನ ಕಾಲದಲ್ಲಿ ಸೂತ್ರ ಗಳು ಹಾಗೆಯೇ ಉಳಿದು, ಕ್ರಿಯೆಯನ್ನು ಪ್ರತ್ಯಕ್ಷವಾಗಿ ಮಾಡಿತೋರಿಸುವ ತಜ್ಞರ ಅಭಾವದ ಮೂಲಕ ಈ ಸೂತ್ರಗಳ ಮೇಲಿಂದ ಶಸ್ತ್ರಕ್ರಿಯಗಳನ್ನು ಮಾಡುವದು ಸಾಧ್ಯವಿಲ್ಲೆಂದು ನಾವು ಒಪ್ಪಲೇಬೇಕಾಗಿದೆ. ವೈದ್ಯರಿಗೆ ಸಕ್ರಿಯ ಶಲ್ಯತಂತ್ರದ (operative surgery) ಜ್ಞಾನವು ಬೇಕು. ಈಗಿನ ಹೆಚ್ಚಿಗೆ ಸುಧಾರಿಸಿದ ಶಲ್ಯಶಾಸ್ತ್ರದ ಸಹಾಯವನ್ನು ತೆಗೆದುಕೊಂಡು, ಅವಶ್ಯವಿದ್ದ ಬದಲಾವಣೆಯನ್ನು ಮಾಡಿ, ವೈದ್ಯರ ಈ ಅಂಗದಲ್ಲಿಯ ಅಸಹಾಯತೆಯನ್ನು ಹೋಗಲಾಡಿಸುವದು ಅತ್ಯವಶ್ಯವಾಗಿದೆ. ನಮ್ಮಲ್ಲಿಂದ Rhinoplasty ವಿಧಾನವನ್ನು ಪಾಶ್ಚಾತ್ಯರು ತೆಗೆದುಕೊಂಡರೆ, ಅವರಿಂದ ನಾವು ನಮಗೆ ಅವಶ್ಯವಿದ್ದ ಗುಣಕಾರಿ ಯಾದದ್ದನ್ನು ಸ್ವೀಕರಿಸುವ ಗುಣಗ್ರಾಹಕತೆಯು ನಮ್ಮಲ್ಲಿ ಬೇಕು. ದೋಷ ಗಳನ್ನು ಬೇರ್ಪಡಿಸಿ ಗುಣಗಳನ್ನು ಸೇರ್ಪಡಿಸುವದೇ ಸಂಸ್ಕಾರದಲಕ್ಷಣ. ಹಿಂದಿ ನದೇ ಇರಲಿ, ಇಂದಿನದೇ ಇರಲಿ ಗುಣಕಾರಿಯಾದದ್ದು ಗ್ರಾಹ್ಯವೇ ಸರಿ. (ತಸ್ಮಾದ್ಗ್ರಾಹ್ಯಂ ಸುಭಾಷಿತಮ್). ಸಂಶೋಧನ, ಪರೀಕ್ಷಣಗಳಾಗಿ ನಮಗೆ ಹಿಂದೆ ಉಪಯೋಗಿಸಿದ ಸಂಮೋಹಿನಿ, ಸಂಜೀವಿನಿಗಳು ಸಿಗುವವರೆಗೆ, ಆಧುನಿಕ ಸಂಜ್ಞಾಹಾರಿಗಳನ್ನು ಉಪಯೋಗಿಸಲು ಆತಂಕವಿಲ್ಲ. ಈಗ ಪಾಶ್ಚಾತ್ಯಪದ್ಧತಿಗೆ ವ್ಯಯಮಾಡುತ್ತಿರುವದರಲ್ಲಿ ೧ ಲಕ್ಷಾಂಶದಷ್ಟಾದರೂ ದ್ರವ್ಯವನ್ನು ಆಯುರ್ವೇದ ಸಂಶೋಧನಕ್ಕೆ ವ್ಯಯಮಾಡಿದರೆ, ಆಯುರ್ವೇದ ಚಿಕಿತ್ಸೆಯು ಕಲ್ಪನಾತೀತ ಗುಣ

ಕಾರಿಯಾಗಬಹುದೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ತಮ್ಮ ಶಾ
ಮುತ್ತಾತರಿಂದ ನಡೆದುಬಂದ, ಅರ್ಶ (Piles) ಭಗಂದರ ಮತ್ತು ನಾಡೀವ್ರಣ
(Fistula) ಗಂಡಮಾಲಾ (Scrofula) ವ್ರಣ, ಮೋತಿಬಿಂದು (Cataract)
ಇವುಗಳ ಮೇಲಿನ ಶಸ್ತ್ರಕ್ರಿಯೆಯನ್ನು ಹಲಕೆಲವು ಆನುವಂಶಕ ಶಲ್ಯ ವೈದ್ಯರು
ಮಾಡುತ್ತಿರುವದು ಕಂಡುಬರುತ್ತದೆ. ಆಧುನಿಕ ದೊಡ್ಡ ದೊಡ್ಡ, ದವಾಖಾನೆ
ಗಳಲ್ಲಿ ಗುಣವಾಗದ ಮೇಲೆ ಹೇಳಿದ ರೋಗಗಳನ್ನು ಗುಣಮಾಡಿದ್ದು, ಗುಣ
ಹೊಂದಿದ ರೋಗಿಗಳು ಮತ್ತು ಅವರ ಸಂಬಧಿಕರು ಹೇಳಿದ್ದನ್ನು ಕೇಳಿದ್ದೇನೆ.
ಪ್ರಮೇಹ ಪಿಟಿಕೆಯ (Carbuncle) ಒಂದು ರೋಗಿಯನ್ನು, ಇಂಥ ವೈದ್ಯರ ಕಡೆಗೆ
ಕಳುಹಿಸಿ ಗುಣಪಡೆದದ್ದನ್ನು ನಾನು ಮನಗಂಡಿದ್ದೇನೆ. ಪರಂಪರೆಯಿಂದ ಒಂದೇ
ರೋಗವನ್ನು ಏಕಮೂಲಿಕಾ ಪ್ರಯೋಗದಿಂದ ಉಪಚಾರಮಾಡುತ್ತ ಬಂದಿರುವ
ಮನೆತನಗಳು ಎಷ್ಟೋ ಇವೆ. ಇವರೆಲ್ಲರು ಮಾಡುವ ವಿಧಾನ ಉಪಯೋಗಿಸುವ
ಔಷಧ ಮತ್ತು ಯಂತ್ರಗಳನ್ನು ನೋಡಿ, ಶಾಸ್ತ್ರೀಯಜ್ಞಾನವಿಲ್ಲದಿರಬಹುದಾದ್ದರಿಂದ,
ಅವರಲ್ಲಿ ಕಂಡು ಬರುವ ಲೋಪ ದೋಷಗಳನ್ನು ತೋರಿಸಿ, ವಿಹಿತವಾದ ರೀತಿ
ಯನ್ನು ತಿಳಿಸಿ ಅವರನ್ನು ಉತ್ತೇಜಿಸಬೇಕು. ಇದರಿಂದ ನಮ್ಮ ಶಾಸ್ತ್ರದ ಪ್ರಗತಿಗೆ
ಸಹಾಯವಾಗುವದು.

ಇಷ್ಟು ಹೊತ್ತಿನವರೆಗೆ, ಶಾಂತ ಮತ್ತು ಸಮಾಧಾನಚಿತ್ತದಿಂದ ನನ್ನ ನಾಲ್ಕು
ಮಾತುಗಳನ್ನು ಕೇಳಿದ ತಮಗೂ, ತಮ್ಮ ಮುಂದೆ ನನ್ನ ನಾಲ್ಕು ಹರಕುಮುರಕು
ವಿಚಾರಗಳನ್ನು ಇಡಲು ಅನುವುಕೊಟ್ಟು, ತಮ್ಮೆಲ್ಲರ ಸಹವಾಸದ ಸುಯೋಗವನ್ನು
ಕಲ್ಪಿಸಿಕೊಟ್ಟು, ನನ್ನನ್ನು ಆದರಿಸಿದ್ದಕ್ಕಾಗಿ ಸ್ವಾಗತಸಮಿತಿಗೂ, ನನ್ನ ಅತ್ಯಂತ
ಕೃತಜ್ಞತೆಗಳನ್ನು ಅರ್ಪಿಸಿ, ವಿರಮಿಸಲು ತಮ್ಮೆಲ್ಲರ ಅನುಜ್ಞೆಯನ್ನು ಕೋರುತ್ತೇನೆ.

(Sd) D. V. ರಾಮರಾವ್.

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

**ನಿಖಿಲ ಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941**

**ಸಮ್ಮೇಳನಾಂಗವಾದ ಪರಿಷತ್ತುಗಳ ಆರಂಭಭಾಷಣಕಾರರು.**



ಶ್ರೀ॥ ವೈ. ಪಾರ್ಥನಾರಾಯಣ ಪಂಡಿತರು,
ಪ್ರೊ॥ ಆಯುರ್ವೇದಿಕ್ ಫಾರ್ಮಸಿ, ಶಿವಮೊಗ್ಗ.
(ಚಿಕಿತ್ಸಾಸಂಭಾಷಾಪರಿಷತ್)
ಮತ್ತು ನಿ. ಕ. ಆ. ಮಂಡಳಿಯ ಚುನಾಯಿತ
ಉಪಾಧ್ಯಕ್ಷರು (1942 ಕ್ಕೆ)



ಶ್ರೀ॥ ಆ. ವಿ. ಪಂ. ಪಿ. ಆರ್. ರಂಗನಾಥನಾಯಕ್,
L.A.M.S., L.I M.S.
ಆಯುರ್ವೇದಿಕ್ ಪ್ರಾಕ್ಟಿಷನರ್, ರಾಣಿಬೆನ್ನೂರು.
(ದ್ರವ್ಯಸಂಭಾಷಾಪರಿಷತ್)



ಶ್ರೀ॥ ಆ. ವಿ. ಪಂ. ಎಲ್. ನರಸಿಂಹಮೂರ್ತಿ
L.A.M.S.,
ಪ್ರೊ॥ ಲಕ್ಷ್ಮೀನರಸಿಂಹವೈದ್ಯಶಾಲಾ, ತುಂಕೂರು.
(ರಸಾಯನಸಂಭಾಷಾಪರಿಷತ್)

# ೧೨ ನೆಯ ನಿಖಿಲಕರ್ಣಾಟಕದ ಮತ್ತು ಮೈಸೂರು ಸಂಸ್ಥಾನದ ೧ನೆಯ ಆಯುರ್ವೇದ ಸಮ್ಮೇಳನಾಂಗವಾದ ವಸ್ತುಪ್ರದರ್ಶನ ಸಮಾರಂಭದಲ್ಲಿ

### ಪ್ರದರ್ಶನಶಾಖಾಧ್ಯಕ್ಷರಾದ

### ಶ್ರೀಮಾನ್ ಎನ್. ನಾಗೇಶರಾವ್, ಎಂ.ಎ. ರವರು ಮಾಡಿದ

## ಪರಿಚಯಭಾಷಣ.

---

ಮಹಿಳೆಯರೇ, ಮಹನೀಯರೇ,

ಸ್ವಾಗತ ಸಮಿತಿಯ ಪರವಾಗಿ ನಿಖಿಲ ಕರ್ಣಾಟಕದ ಹನ್ನೆರಡನೆಯ ಮತ್ತು ಮೈಸೂರು ಸಂಸ್ಥಾನದ ಮೊದಲನೆಯ ಆಯುರ್ವೇದ ಸಮ್ಮೇಲನದ ಪ್ರದರ್ಶನಕ್ಕೆ ತಮ್ಮನ್ನು ಸ್ವಾಗತಿಸಲು ಹರ್ಷಿಸುತ್ತೇನೆ. ಈ ಪ್ರದರ್ಶನವನ್ನು ಆರಂಭಿಸಲಿರುವ ಶ್ರೀ ಗಂಗಾಧರ ವಿಷ್ಣುಪುರಾಣಿಕ್‌ರವರ ಪರಿಚಯವನ್ನು ತಮಗೆ ಮಾಡಿಸುವುದು ನನ್ನ ಪ್ರಥಮ ಕರ್ತವ್ಯ. ಪನವೇಲದವರು ಮೊಟ್ಟಮೊದಲು ಆಯುರ್ವೇದ ವೈದ್ಯ ಶಾಲೆಯನ್ನು ಸ್ಥಾಪಿಸಿದವರಲ್ಲಿ ಪ್ರಮುಖರು. ಪನವೇಲದಲ್ಲಿರುವ ವೈದ್ಯಶಾಲೆಯು ಸ್ಥಾಪಿತವಾಗಿ ಇಂದಿಗೆ ಎಪ್ಪತ್ತು ವರ್ಷಗಳಾಗಿವೆ. ಈ ವರ್ಷಗಳಲ್ಲಿ ಅವರ ವೈದ್ಯ ಶಾಲೆಯು ಬಹಳ ಮುಂದುವರಿದು ಬಹಳ ಮೇಲ್ಮಟ್ಟಕ್ಕೆ ಏರಿದೆ. ಅಲ್ಲಿ ವೈದ್ಯಶಾಲೆಯ ಜತೆಗೆ ಆಯುರ್ವೇದದ ವಿದ್ಯಾರ್ಥಿಗಳಿಗಾಗಿ ಒಂದು ವಿದ್ಯಾರ್ಥಿ ನಿಲಯವೂ ಇದೆ. ಆಯುರ್ವೇದಕ್ಕಾಗಿ ಇಷ್ಟು ಸೇವೆ ಸಲ್ಲಿಸುತ್ತಿರುವ ಶ್ರೀಮಾನ್ ಗಂಗಾಧರ ವಿಷ್ಣು ಪುರಾಣಿಕರು ನಮ್ಮ ಸಮ್ಮೇಳನವನ್ನು ಆರಂಭಿಸಲು ಒಪ್ಪಿರುವುದು ನಮ್ಮ ಸೌಭಾಗ್ಯ.

ಪ್ರದರ್ಶನದ ಉದ್ಘಾಟನೋಪಕ್ರಮವನ್ನು ನಡೆಸಲು ಅವರನ್ನು ಪ್ರಾರ್ಥಿಸುವ ಮುನ್ನ ಈ ಪ್ರದರ್ಶನವನ್ನು ಏರ್ಪಡಿಸಿದುದರಲ್ಲಿ ನಮ್ಮ ಉದ್ದೇಶ-ಆದರ್ಶಗಳಾವುವು, ಮತ್ತು ಈ ಪ್ರದರ್ಶನದಲ್ಲಿರುವ ಕುಂದುಕೊರತೆಗಳೇನು ಎಂಬುವನ್ನು ತಿಳಿಸಲು ಇಚ್ಛಿಸುತ್ತೇನೆ.

ಜ್ಞಾನಪ್ರಸಾರದ ದೃಷ್ಟಿಯಿಂದಲೂ ಔದ್ಯೋಗಿಕ ಕೌಶಲ್ಯದ ದೃಷ್ಟಿಯಿಂದಲೂ ಈ ಬಗೆಯ ಪ್ರದರ್ಶನಗಳನ್ನು ಏರ್ಪಡಿಸಲಾಗಿರುತ್ತದೆ. ವೈದ್ಯದ ಕಸಬಿನಲ್ಲಿರುವವರು ಗಮನಿಸಬೇಕಾದ ಅನೇಕ ವಸ್ತುವಿಶೇಷಗಳು ಇಲ್ಲಿವೆ; ಸಾಮಾನ್ಯ ಜನರು ಕಂಡು ಕಲಿಯ ಬೇಕಾದ ಅನೇಕ ವಿಚಾರಗಳೂ ಇಲ್ಲಿವೆ.

ಸಮಯ ಸಿಕ್ಕಿದರೆ ವೈದ್ಯರು ಇಲ್ಲಿರುವ ಕೆಲವು ಮೂಲಿಕೆಗಳ ಹೆಸರು ಮತ್ತು ಗುಣಗಳ ವಿಷಯಗಳನ್ನೂ, ಸ್ಪರ್ಧೆಗೂ ಮತ್ತು ಪುರಸ್ಕಾರಕ್ಕಾಗಿಯೂ ಕಳುಹಿಸಲ್ಪಟ್ಟಿರುವ ಅನೇಕ ಭಸ್ಮಗಳ ಅತ್ಯುತ್ತಮ ತಯಾರಿಕೆಯ ಬಗೆಯನ್ನೂ ಚರ್ಚಿಸಬಹುದು.

ಆದರೆ ಇಲ್ಲಿ ಪ್ರದರ್ಶಿಸಲ್ಪಟ್ಟಿರುವ ಅನೇಕ ಔಷಧಗಳ ಗುಣವನ್ನೂ ಪರೀ ಪ್ರಯೋಗ ಮಾಡವುದಕ್ಕೆ ಕಾಲವೂ ಅವಕಾಶವೂ ಬೇಕಾಗಿರುವುದರಿಂದ ಸಿ ವೈದ್ಯರ ಒಂದು ಸಂಸ್ಥೆಯೇ ಇರಬೇಕಾದುದಗತ್ಯವೆಂದು ನಮಗೆ ತೋರುತ್ತದೆ. ಕ್ಕಾಗಿ ಈ ಪ್ರದರ್ಶನದಲ್ಲಿ ಭಾಗವಹಿಸಿರುವ ಪಂಡಿತರನ್ನು ಔಷಧಗಳ ತಯಾರಿಕೆ ಅವರು ಉಪಯೋಗಿಸಿರುವ ವಸ್ತುಗಳ ವಿವರವನ್ನು ಕೊಡಬೇಕೆಂದು ಕೇಳಿಕೊ ಧೈರ್ಯಮಾಡಿದ್ದೇವೆ. ಅನೇಕ ಪಂಡಿತರು ನಮಗೆ ಈ ವಿಷಯಗಳನ್ನು ತಿಳಿ ಮುಂದೆ ಬಂದಿರುವುದು ಬಹಳ ಆಶಾದಾಯಕವಾದ ಸಂಗತಿ. ಇದು ನಮಗೆ ಹನ್ನೆರಡುವರ್ಷಗಳ ಹಿಂದೆ ನಡೆದ 21 ನೆಯ ಅಖಿಲ ಭಾರತ ಆಯುರ್ವೇ ಸಮ್ಮೇಲನವನ್ನು ನೆನಪಿಗೆ ತರುತ್ತದೆ. ಆಗ ಪಂಡಿತರು ನಮಗೆ ವಿವರಗಳನ್ನು ಸಲು ಬಹಳ ಹಿಂಜರಿಯುತ್ತಿದ್ದರು. ಈ ಹನ್ನೆರಡುವರ್ಷಗಳ ಕಾಲದಲ್ಲಿ ಅಗಾಧ ಬದಲಾವಣೆಯಾಗಿದೆ. ಈಗ ಪಂಡಿತರು ಸಹೋದ್ಯೋಗಿಗಳಿಗೆ ತಮ್ಮ ಅನು ವನ್ನು ತಿಳಿಸುವುದರ ಪ್ರಾಮುಖ್ಯತೆಯನ್ನು ಅರಿತಿದ್ದಾರೆ ಮತ್ತು ತಮ್ಮ ಔಷಧಿಗ ಪರೀಕ್ಷೆಗಾಗಿ ಕೊಡಲು ಸಿದ್ಧರಾಗಿದ್ದಾರೆ.

ಈ ಪ್ರದರ್ಶನದ ಏರ್ಪಾಡಿಗಾಗಿ ಇಡೀ ಕರ್ನಾಟಕದಲ್ಲಿ ಮತ್ತು ಸ ಸಂಸ್ಥಾನದಲ್ಲಿ ನಮಗೆ ದೊರೆತಿರುವ ಸಹಕಾರ ಸಹಾನುಭೂತಿಗಳು ಬಹು ಮ ವಿಷಯ. ಈ ಪ್ರದರ್ಶನದಲ್ಲಿ ಒಟ್ಟು 73 ಪ್ರದರ್ಶಕರು ಭಾಗ ವಹಿಸಿದ್ದಾ ಕೇವಲ ನಲ್ವತ್ತೇ ಸ್ಟಾಲುಗಳಿರುವುದಾದರೂ ಉಳಿದ ಪ್ರದರ್ಶಕರೆಲ್ಲರೂ ಸಾಮಾ ಸ್ಟಾಲಿನಲ್ಲಿ ತಮ್ಮ ಸಾಮಾನುಗಳನ್ನಿಟ್ಟಿರುವುದರಿಂದ ಅಲ್ಲಿ ಸಾಮಾನುಗಳು ಗುಂ ಸೇರಿಬಿಟ್ಟಿವೆ. ಈ ರೀತಿಯ ಅಭೂತಪೂರ್ವ ಸಹಕಾರವು ಆಯುರ್ವೇದದ ಚರಿತ್ರೆ ಬರಲಿರುವ ಸುದಿನಗಳನ್ನು ಸೂಚಿಸುತ್ತದೆ.

ಈ ಸ್ಟಾಲುಗಳ ಪೈಕಿ ಒಂದರಲ್ಲಿ ಡಾಕ್ಟರ್ ಸುಬ್ರಹ್ಮಣ್ಯಶಾಸ್ತ್ರಿಯ ತ್ರಿದೋಷ ತತ್ವಕ್ಕೆ ಸಂಬಂಧಪಟ್ಟ ರಕ್ತದ ನಮೂನೆಗಳನ್ನು ಪ್ರದರ್ಶಿಸಿದ್ದಾರೆ. ಅ ಪ್ರಾರಂಭಿಸಿರುವ ರೀತಿಯಲ್ಲಿ ಪರಿಶೋಧನೆಯನ್ನು ನಡೆಸಲು ಬೇಕಾದಷ್ಟು ಅವ ವಿದೆ. ಅವರು ಇನ್ನೂ ಅನೇಕ ಉಪಯುಕ್ತ ಚಾರ್ಟುಗಳ ಒಂದು ನಮೂನೆಯ ಪ್ರದರ್ಶಿಸಿದ್ದಾರೆ. ಪನವೇಲದ ಸ್ಟಾಲಿನಲ್ಲಿ ಗಿಡಗಳ ವರ್ಣಚಿತ್ರಗಳನ್ನಿಟ್ಟಿರು ಮತ್ತೊಂದು ಶಿಕ್ಷಾಪ್ರದ ವಿಷಯ. ಇನ್ನೊಂದು ಸ್ಟಾಲಿನಲ್ಲಿ ಔಷಧಿಯ ಲಕ್ಷಣ ವಿಂಗಡಿಸಲ್ಪಟ್ಟಿರುವ 300 ಜೀವಂತ ಗಿಡಗಳಿವೆ. ಇವುಗಳ ಸಂಗ್ರಹದಲ್ಲಿ ಆಸಕ್ತಿ ಪ್ರದರ್ಶನಕ್ಕಾಗಿ ಅಳವಡಿಸಿರುವ ಶ್ರೀಮಾನ್ ಎನ್. ನಾಗೇಶರಾಯರ ಕೆಲಸವು ಶ್ ವಾದುದು. ಗಿಡಗಳನ್ನು ಬೇರೆ ಬೇರೆ ಗುಂಪಿಗೆ ಸೇರಿಸುವುದರಲ್ಲಿ ಶ್ರೀ ಎನ್. ಭಟ್ಟಾಚಾರ್ಯರು ಉಪಯುಕ್ತ ಸಹಾಯವನ್ನಿತ್ತಿದ್ದಾರೆ.

ಮೈಸೂರಿನ ಪ್ರಾಚ್ಯ ಕೋಶಾಗಾರದವರು ಅನೇಕ ಪುರಾತನ ಓಲೆಯ ಗ್ರಂಥಗಳನ್ನೂ ಈಗಾಗಲೇ ಮುದ್ರಿತವಾಗಿರುವ ಆಯುರ್ವೇದದ ಗ್ರಂಥಗಳನ್ನೂ ಕಳುಹಿಸಿದ್ದಾರೆ. ಇವು ಬಹಳ ಅಪೂರ್ವವಾದುವು. ಈ ಗ್ರಂಥಗಳ ರಚನೆಯಲ್ಲಿ ಆಸಕ್ತರಾಗಿ ನೊಂದ, ಮಾನವನ ಸಹಾಯದಲ್ಲಿ ಶ್ರದ್ಧೆ ವಹಿಸಿದ್ದ ಪುರಾತನ ಕಾಲದ ಆಯುರ್ವೇದ ವಿಭೂತಿ ಪುರುಷರಿಂದ ವಿಷಯಗಳನ್ನು ತಿಳಿಯಕೊಳ್ಳಲು ಕಾತುರರಾಗಿರುವ ಆಯುರ್ವೇದ ವಿದ್ಯಾರ್ಥಿಗಳಿಗೆ ಅಮೂಲ್ಯವಾದುವು.

ನಂದೀದುರ್ಗ ಮತ್ತು ಅದರ ಸುತ್ತುಮುತ್ತಲಿನ ಪ್ರದೇಶಗಳ ಮೂಲಿಕೆ ಮತ್ತು ಖನಿಜಗಳು ಪ್ರದರ್ಶಿಸಲ್ಪಟ್ಟಿರುವ ಮತ್ತೊಂದು ಸ್ಟಾಲ್ ಇದೆ. ಆಯುರ್ವೇದದ ಉದ್ಯೋಗದಲ್ಲಿರುವವರು ಪರಿಶೀಲಿಸಬೇಕಾದ ಅನೇಕ ವಿಷಯಗಳು ಈ ಸ್ಟಾಲಿನಲ್ಲಿವೆ. ಅಲ್ಲದೆ ಸಾಮಾನ್ಯ ಜನರನ್ನೂ ಆಕರ್ಷಿಸುವ ವಿವಿಧತೆಯೂ ಇದೆ.

ಈ ದೇಶದ ನಾನಾ ಭಾಗಗಳಲ್ಲಿ ರೂಢಿಯಲ್ಲಿರುವ ಆಯುರ್ವೇದ ಪದ್ಧತಿಗಳ ತುಲನಾತ್ಮಕ ಅಧ್ಯಯನವನ್ನು ಮಾಡುವ ಪಂಡಿತರಿಗೆ ಈ ಗ್ರಂಥಗಳೆಲ್ಲವೂ ಮಹತ್ತರವಾದ ಉಪಯೋಗವುಳ್ಳವು. ಈ ಪುಸ್ತಕಗಳ ಪೈಕಿ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ಆಸ್ಥಾನ ವೈದ್ಯರಾಗಿದ್ದ ಶಿಂಗಾಪಂಡಿತರ ಒಂದು ದಿನಚರಿಯೂ ಇದೆ. ಇತ್ತೀಚೆಗೆ ಪ್ರಸಿದ್ಧಿಗೆ ಬಂದಿರುವ ಗ್ರಾಮ ವೈದ್ಯ ಪುಸ್ತಕವು ಪಂಡಿತ ಅಳಶಿಂಗರಾಚಾರ್ಯರದೆಂದು ಗೊತ್ತಾಗುತ್ತದೆ.

ಡಿಸ್ಟ್ರಿಕ್ಟ್ ಬೋರ್ಡಿನವರ ಸ್ಟಾಲನ್ನು ವಿವರಿಸಲು ನಾನು ಮರೆಯಕೂಡದು. ನಮ್ಮ ಸಂಸ್ಥಾನದ ಡಿಸ್ಟ್ರಿಕ್ಟ್ ಬೋರ್ಡಿನವರು ಆಯುರ್ವೇದದಲ್ಲಿ ಅತ್ಯಂತ ಆಸಕ್ತಿಯನ್ನು ವಹಿಸಿ ಆಯುರ್ವೇದ ಮಹಾವಿದ್ಯಾನಿಲಯದ ವಿದ್ಯಾರ್ಥಿಗಳನ್ನು ಕೆಲಸಕ್ಕೆ ನಿಯಮಿಸಿಕೊಳ್ಳುತ್ತಿದ್ದಾರೆ. ಏಕೆಂದರೆ ಅವರ ಆಶ್ರಯವು ಬಹಳ ಮುಖ್ಯವಾದುದು.

ಆಯುರ್ವೇದಕ್ಕೂ ಯೋಗಕ್ಕೂ ಬಹಳ ಹತ್ತಿರದ ಸಂಬಂಧ. ಶರೀರವನ್ನು ಆರೋಗ್ಯವಾಗಿ ಮತ್ತು ಶುದ್ಧವಾಗಿ ಇಡುವುದರಲ್ಲಿಯೂ, ಶರೀರದ ಅನೇಕ ಅವ್ಯವಸ್ಥೆಗಳನ್ನು ಸರಿಪಡಿಸುವುದರಲ್ಲಿಯೂ ಯೋಗಾಸನಗಳಿಗೆ ಒಂದು ಗೊತ್ತಾದ ಸ್ಥಾನವಿದೆ. ಯೋಗಾಸನಗಳಿಗೂ ಆಯುರ್ವೇದಕ್ಕೂ ಇರುವ ಸಂಬಂಧವನ್ನು ತೋರಿಸುವ ಮತ್ತು ಶರೀರದ ಅಂಗಗಳ ಮೇಲೆ ಯೋಗಾಸನಗಳ ಅಧಿಕಾರವನ್ನು ತಿಳಿಸುವ ಅನೇಕ ಚಿತ್ರಪಟಗಳು ಒಂದು ಸ್ಟಾಲಿನಲ್ಲಿವೆ. ಹೆಡತಲೆಯ ಶ್ರೀಮಾನ್ ಶ್ರೀರಂಗ ಎಂಬವರಿಂದಲೂ ಶ್ರೀಮಾನ್ ಕೃಷ್ಣಮಾಚಾರ್ಯರು ಮತ್ತು ಶಿಷ್ಯರಿಂದಲೂ ಯೋಗಾಸನಗಳ ಪ್ರದರ್ಶನವನ್ನು ಏರ್ಪಡಿಸಲಾಗಿದೆ. ಅವರುಗಳೇ ಅವುಗಳ ಮಹತ್ವವನ್ನು ವಿವರಿಸುವವರಾಗಿದ್ದಾರೆ.

ಪ್ರಾಚ್ಯ ಕೋಶಾಗಾರದ ಸ್ಟಾಲಿನಲ್ಲಿರುವ ಕೈಬರಹದ ಓಲೆಯ ಪ್ರಗತಿಗಳಲ್ಲಿ ಜೈನ ಆಯುರ್ವೇದ, ಆಂಧ್ರ ಆಯುರ್ವೇದ, ಮಲಬಾರ್ ಆಯುರ್ವೇದ ಮುಂತಾದ ಕೆಲವು ವಿಚಿತ್ರ ವಿಷಯಗಳೂ ಬಂದಿವೆ. ಡಾಕ್ಟರ್ ತನಾ ನಾದರ ರಸ ಆಯುರ್ವೇದವೂ ರಾಷ್ಟ್ರೀಯ ಯೋಜನೆಯಲ್ಲಿ ಸ್ಥಳೀಯ ಔಷಧಿಗಳಿಗೆ ಪ್ರಾಶಸ್ತ್ಯ ಕೊಡಬೇಕೆಂದು ಯುವ ಸೂಚನೆಯೂ ಅದರಲ್ಲಿವೆ.

ಮತ್ತೊಂದು ಸ್ಟಾಲಿನಲ್ಲಿ ಶುದ್ಧವಾದ ಕೇಸರಿ ಮತ್ತು ಕಸ್ತೂರಿಗಳು ಇಡಲ್ಪಟ್ಟಿವೆ. ಆಯುರ್ವೇದೀಯ ಔಷಧಗಳಲ್ಲಿ ಅವುಗಳ ಉಪಯೋಗವು ಬಹಳ. ಹೆಚ್ಚು ಶುದ್ಧವಾದ ನಮೂನೆಗಳನ್ನಿಟ್ಟಿರುವ ಪಂಜಾಬಿನ ಶ್ರೀ ಸೂಡ್‌ಕಂಪೆನಿಯವರು ವಂದನಾರ್ಹರು.

ಇನ್ನು ನಮ್ಮ ಸ್ಟಾಲುಗಳ ವಿಚಾರವಾಗಿ ಹೆಚ್ಚಿಗೆ ಹೇಳಿ ತಮ್ಮನ್ನು ಬೇಸರ ಪಡಿಸಲಾರೆ. ಸಾಮಾನ್ಯವಾದ ಒಂದೆರಡು ಮಾತುಗಳನ್ನಾಡಿ ನನ್ನ ಭಾಷಣವನ್ನು ಮುಗಿಸುತ್ತೇನೆ. ಅನೇಕ ಆಯುರ್ವೇದೀಯ ಔಷಧಾಲಯಗಳ ಉತ್ಪನ್ನವೂ ಇಲ್ಲಿವೆ. ಔಷಧಗಳ ಉತ್ತಮ ತಯಾರಿಕೆಗಾಗಿಯೂ ಅವುಗಳನ್ನು ಚೆನ್ನಾಗಿ ಪ್ಯಾಕ್ ಮಾಡಿ ಪ್ರದರ್ಶಿಸಿರುವ ರೀತಿಗಾಗಿಯೂ ಅವರನ್ನು ಅಭಿನಂದಿಸುತ್ತೇನೆ. ಈ ಔಷಧಿಗಳ ತಯಾರಿಕೆಯಲ್ಲಿ ಶಾಸ್ತ್ರೋಕ್ತವಾದ ಪದ್ಧತಿಯನ್ನು ಅನುಸರಿಸಿರುವುದು ಸಂತೋಷದ ವಿಷಯ.

ಉತ್ತಮ ಕಂಪೆನಿಗಳ ಬಣ್ಣಬಣ್ಣದ ಪದಾರ್ಥಗಳ ಮಧ್ಯೆ ನಮ್ಮ ಹಳ್ಳಿಯ ವೈದ್ಯರನ್ನೂ ಅವರ ಔಷಧಿಗಳನ್ನೂ ಮರೆಯಲಾಗದು. ತಪ್ಪು ಹೆಸರು ಕೊಟ್ಟಿರುವ ಔಷಧಿಯ ಸೀಸೆಗಳೂ, ಬೂಜುಗಟ್ಟಿರುವ ಲೇಹ್ಯಗಳೂ, ಅಪಕ್ವಭಸ್ಮಗಳೂ, ತಳದಲ್ಲಿ ಪುಡಿ ನಿಂತಿರುವ ಆಸವಾರಿಷ್ಟಗಳೂ ಕೆಲವು ಇವೆ. ಆದರೂ ಅವರ ಪೂರ್ವಾಚಾರದ ಅನುಭವದಿಂದ ಅನೇಕ ಅದ್ಭುತ ವಿಷಯಗಳನ್ನು ತಿಳಿಯಬಹುದು. ಅವರ ಅಭಿವೃದ್ಧಿಗೂ ಅವರ ಜ್ಞಾನವನ್ನು ಜನಸಾಮಾನ್ಯರ ಉಪಕಾರಕ್ಕೆ ಅನುಕೂಲಪಡಿಸುವುದಕ್ಕೂ ಅವರಿಗೆ ತಕ್ಕ ಅವಕಾಶ ಮತ್ತು ಪ್ರೋತ್ಸಾಹ ಬೇಕಾಗಿದೆ. ಇಂತಹ ಪ್ರದರ್ಶನಗಳ ಸಫಲತೆಯನ್ನು ಹಳ್ಳಿಯ ವೈದ್ಯರ ಸಹಕಾರದಿಂದಲೂ ಗೊತ್ತುಮಾಡುವುದು ಅವಶ್ಯಕ.

ಈಗ ಸ್ವಾಗತಸಮಿತಿಯ ಪರವಾಗಿ ಶ್ರೀಯುತ ವಿಷ್ಣುಪುರಾಣಿಕರನ್ನು ಪ್ರದರ್ಶನವನ್ನು ತೆರೆಯಬೇಕಾಗಿ ಪ್ರಾರ್ಥಿಸುತ್ತೇನೆ ಎಂದು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

॥ ಶ್ರೀ ॥

## 12ನೆಯ ನಿಖಿಲ ಕರ್ಣಾಟಕದ ಮತ್ತು ಮೈಸೂರು ಸಂಸ್ಥಾನದ 1ನೆಯ ಆಯುರ್ವೇದ ಸಮ್ಮೇಳನಗಳ ಅಂಗವಾದ

# ಆಯುರ್ವೇದ ವಸ್ತುಪ್ರದರ್ಶನೋದ್ಘಾಟನದ ಭಾಷಣ.

(ಶ್ರೀಮಾನ್ ವೈದ್ಯ ಗಂಗಾಧರ ವಿಷ್ಣು ಪುರಾಣಿಕ್, ಪನವೇಲ್ ರವರಿಂದ)

---

ब्रम्हदक्षाश्विदेवेशभरद्वज पुनर्वसु —
हुताशवेशचरकप्रभृतिभ्योनमोनमः ॥
योगेन चित्तस्य, पदेन वाचां मलं शरीरस्य च वैद्यकेन ।
अपाकरोद्यः प्रवरं मुनीनां पतञ्जलिं प्रांजलिरानतोस्मि ॥

ಮಹನೀಯರೇ ಹಾಗೂ ಮಹಿಳೆಯರೇ,

ನಿಮ್ಮ ಮೈಸೂರು ಸಂಸ್ಥಾನವು ವಿದ್ಯಾವಿನಯಗಳಿಗೆ ನೆಲೆವೀಡು. ಕರ್ನಾಟಕವು ಘನವೆತ್ತ ನಾಡು. ಇವೆರಡು ಪ್ರಾಂತಗಳಿಂದ ಬಂದ ಆಯುರ್ವೇದ ಶಾಸ್ತ್ರಜ್ಞರ ಸಮ್ಮೇಲನದೊಡನೆ ಈ ಆಯುರ್ವೇದ ಪ್ರದರ್ಶನವನ್ನು ತಾವು ಏರ್ಪಡಿಸಿದ್ದೀರಿ. ಇದರ ಉದ್ಘಾಟನಾ ಸಮಾರಂಭಕ್ಕೆಂದು ನನ್ನನ್ನು ಆಮಂತ್ರಿಸಿ ಬಹುವಾಗಿ ಗೌರವಿಸಿದ್ದೀರಿ. ಆದರೆ ಈ ಗೌರವಕ್ಕೆ ನಾನು ಅರ್ಹನಲ್ಲವೆಂಬುದು ನನಗೆ ಗೊತ್ತಿದೆ. ಧೂತಪಾಪೇಶ್ವರ ಸಂಸ್ಥೆಯ ಅಧಿದೇವತೆಗೆ ಮಾತ್ರ ಈ ಸನ್ಮಾನವು ಸಲ್ಲತಕ್ಕದ್ದು. ಇಂದು ನಾನು ಕೈಕೊಂಡ ಮಹತ್ತರ ಕಾರ್ಯವನ್ನು ಯಶಸ್ವಿ ರೀತಿಯಲ್ಲಿ ಕೊನೆಗಾಣಿಸುವಂತೆ ನನ್ನನ್ನು ಹುರಿಗೊಳಿಸುವವನು ಧೂತಪಾಪೇಶ್ವರನೆಂದೇ ನನ್ನ ನಂಬಿಗೆ. ಕಳೆದ ಎಪ್ಪತ್ತು ವರುಷಗಳಿಂದ ಆಯುರ್ವೇದ ಕ್ಷೇತ್ರದಲ್ಲಿ ಅವ್ಯಾಹತವಾಗಿ ಧೂತಪಾಪೇಶ್ವರ ಸಂಸ್ಥೆಯು ದುಡಿಯುತ್ತಲಿದ್ದ ಸಂಗತಿ ತಮಗೆ ಅರಿಯದ್ದೇನಲ್ಲ. ನನಗೆ ತಾವು ತೋರಿದ ಈ ಸತ್ಕಾರವನ್ನು ತಮ್ಮ ಅಪ್ಪಣೆ ಪಡೆದು ಆ ಸಂಸ್ಥೆಗೇ ಅರ್ಪಿಸುತ್ತೇನೆ.

ಕುಲಾಬಾ ಜಿಲ್ಹೆಯ ಪನವೇಲದಂಥ ಬಹು ದೂರದ ಸ್ಥಳದಿಂದ ಮೈಸೂರಿಗೆ ಈ ಪ್ರದರ್ಶನದ ಉದ್ಘಾಟನಾ ಕಾರ್ಯಕ್ಕೆಂದು ನನ್ನನ್ನು ತಾವು ಆಮಂತ್ರಿಸಿದ್ದುದು ತಮ್ಮ ಉದಾರಾಂತಃಕರಣಕ್ಕೆ ಸಾಕ್ಷಿಯಾಗಿದೆ. ನಮ್ಮ ಪ್ರಾಂತದಲ್ಲಿ ಆಯುರ್ವೇದದ ಉನ್ನತಿಗಾಗಿ ನಾವು ಮಾಡುತ್ತಿರುವ ಅಲ್ಪ ಸೇವೆಯನ್ನು ನೋಡಿ ತಾವು ತಮ್ಮ ಮೆಚ್ಚಿಕೆಯನ್ನು ತೋರಿದ್ದಕ್ಕಾಗಿ ನನಗೆ ಬಹು ಆಹ್ಲಾದವೆನಿಸಿದೆ. ತಮ್ಮ ಹಾಗೂ ನಮ್ಮ ಪ್ರಾಂತಗಳ ನಡುವೆ ಪರಸ್ಪರ ಸೌಹಾರ್ದಪ್ರೇಮಗಳು ಉಂಟಾಗಿ ಬೆಳೆಯಲೆಂಬ ತಮ್ಮ ಅಪೇಕ್ಷೆಗೆ ತಾವು ತೋರಿದ ಈ ಔದಾರ್ಯವೇ ಒಳ್ಳೆಯ ನಿದರ್ಶನ

ವಾಗಿದೆ. ತಮ್ಮ ದೊಡ್ಡ ಮನಸ್ಸಿಗೆ ಮೆಚ್ಚಿ ಬಹು ಆದರಪೂರ್ವಕವಾಗಿ ತಮ
ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಇದು ಮೈಸೂರು ಸಂಸ್ಥಾನದಲ್ಲಿ ಜರಗಿದ ಮೊದಲನೆಯ ವೈದ್ಯ ಸಮ್ಮೇ
ವಷ್ಟೆ ? ಮೈಸೂರು ಸಂಸ್ಥಾನ ಹಾಗೂ ಕನ್ನಡನಾಡಿನ ಸ್ಫೂರ್ತಿದಾಯಕವಾದ
ವೈದ್ಯ ಸಮ್ಮೇಲನವು ಆಯುರ್ವೇದದ ಭಾವೀ ಪ್ರಗತಿಗೆ ಶುಭಸೂಚಕವಾ
ಯೆಂದೇ ನನ್ನ ನಂಬಿಗೆ. (ಇಂದು ಮಾನವ ಜೀವಿತವು ಅತ್ಯಂತ ತೊಡಕುಳ್ಳದ್ದಾ
ಜನಾಭಿರುಚಿಗಳು ಅನೇಕ ಮುಖವಾಗಿರುವಾಗ) ಯಾವುದೇ ಕಾರ್ಯಕ್ಷೇತ್ರದ
ನಿಜವಾದ ಕಾರ್ಯವು ಆಗಬೇಕಿದ್ದರೆ ಸಾಂಘಿಕ ಪ್ರಯತ್ನವು ಅತ್ಯಗತ್ಯವಾಗಿ
ಇನ್ನು ಅನಾರೋಗ್ಯವನ್ನು ಹೋಗಲಾಡಿಸುವ ಆಯುರ್ವೇದ ಕ್ಷೇತ್ರದಲ್ಲಿ ಸಾಂಘಿ
ಪ್ರಯತ್ನವು ಎಷ್ಟು ಬೆಲೆಯುಳ್ಳದ್ದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದ್ದರಿ
ಆಯುರ್ವೇದದ ಭವಿತವ್ಯವನ್ನೂ ಸಾಧ್ಯಾಸಾಧ್ಯತೆಗಳನ್ನೂ ಕುರಿತು ಚರ್ಚಿಸ
ಡಲು ನೆರೆದ ಈ ದೊಡ್ಡ ವೈದ್ಯ ವೃಂದವನ್ನುನೋಡಿದರೆ ಮನಸ್ಸಿಗೆ ಪ್ರೋತ್ಸಾ
ವುಂಟಾಗುತ್ತಿದೆ. ಸರಕಾರದ ಆಶ್ರಯದ ಅಭಾವ ಹಾಗೂ ಮತ್ತಿತರ ಕಾರಣ
ಮೂಲಕ ಆಯುರ್ವೇದವು* ಅನಿಶ್ಚಿತ ಜೀವಿತವನ್ನು ಹೇಗೋ ನೂಕುತ್ತಲಿ
ಅದಕ್ಕೆ ಜೀವಿಸಲು ಕೂಡ ಅಧಿಕಾರವಿಲ್ಲವೆಂಬಂತಾದಾಗ ನಮ್ಮ ದೇಶದಲ್ಲಿ ಸ್ವ
ನಡೆಸುತ್ತಿರುವ ಪರದೇಶದ ವೈದ್ಯ ಪದ್ಧತಿಗಳೊಡನೆ ನಮ್ಮ ಆಯುರ್ವೇದವು ಸ
ಸಮಾನತೆಯಿಂದ ಹೆಜ್ಜೆಯಿಡುವುದು ಹೇಗೆ ಸಾಧ್ಯ ? ಇನ್ನು ಪಾಶ್ಚಾತ್ಯ ಪದ್ಧ
ಗಳಿಗಿಂತ ಆಯುರ್ವೇದವು ಶ್ರೇಷ್ಠ ಪದ್ಧತಿಯೆಂದು ಪ್ರಸ್ತಾಪಿಸುವದಂತೂ ದೂ
ಉಳಿಯಿತು. ಕಳೆದ ನೂರಾರು ಶತಮಾನಗಳಿಂದ ನಮ್ಮ ವೈದ್ಯಶಾಸ್ತ್ರವು ನಮ್ಮ
ದೇಶದ ಜನಾಂಗಕ್ಕೆ ಅನಂತ ಉಪಕೃತಿಯನ್ನು ಸಲ್ಲಿಸುತ್ತ ಬಂದಿದೆ. ನಮ್ಮಾ ವೈ
ಶಾಸ್ತ್ರದ ಪ್ರಯೋಗಕ್ಕೆ ಅನುಕೂಲ ಪರಿಸ್ಥಿತಿಯನ್ನು ಒದಗಿಸಿಕೊಟ್ಟರೆ ಅದು ತ
ಸಾಮರ್ಥ್ಯವನ್ನು ಜಗತ್ತಿಗೆ ತೋರಿಸಿಕೊಡುವಲ್ಲಿ ಸಂದೇಹವಿಲ್ಲ.

ಯುದ್ಧ ಪ್ರಸಂಗಗಳಲ್ಲಿ ಸರಕಾರವು ಹಣವನ್ನು ನೀರಿನಂತೆ ಸೂರೆಮಾ
ದರೂ ನಾವು ಅದನ್ನು ವಿರೋಧಿಸುವದಿಲ್ಲ. ದೇಶ ಸಂರಕ್ಷಣ ನಿಧಿಗೆ ನಾವ

*हिताहितं सुखं दुःखमायुस्तस्य हिताहितम् ।
मानंच तच्च यत्रोक्तमायुर्वेदः स उच्यते ॥ चरक. सूत्र १.
तत्र आयुर्वेद..... विद्या .... ज्ञानं शास्त्रं तंत्रमित्यनर्थान्तरम्.
चरक. सूत्र १

ಉತ್ಸಾಹದಿಂದ ಧನಸಹಾಯ ಮಾಡುತ್ತೇವೆ. ಯಾಕಂದರೆ ಯುದ್ಧಕ್ಕೆ ಮಾಡುವ ಸಹಾಯವೆಲ್ಲ ಕೊನೆಗೆ ನಮ್ಮ ಹಿತಕ್ಕಾಗಿಯೇ ಎಂಬುದು ನಮಗೆ ತುಂಬಾ ತುಂಬಾ ಗೊತ್ತಿದೆ. ಇದೇ ವಿಚಾರ ಸರಣಿಯನ್ನೇ ವೈದ್ಯ ಹಾಗೂ ಮತ್ತಿತರ ಶಾಸ್ತ್ರಗಳ ಸಂಶೋಧನೆಯ ಬಗೆಗೂ ನಾವು ಮಂಡಿಸಬಹುದು. ಯಾವದೊಂದು ಮಹಾಕಾರ್ಯವಾಗಬೇಕಾದರೆ ಸುಸಂಘಟಿತ ಸಂಸ್ಥೆಗಳು ಬೇಕು. ವೈದ್ಯಶಾಸ್ತ್ರ ಸಂಶೋಧನೆಯು ರಾಷ್ಟ್ರದ ತುಂಬ ಬಹು ಪರಿಣಾಮಕಾರಿಯಾಗಿ ಅನೇಕ ವರುಷ ಗಳ ವರೆಗೆ ಅವ್ಯಾಹತವಾಗಿ ಸಾಗಬೇಕಾದರೆ ಬಹಳ ಹಣ ಬೇಕು. ಇಷ್ಟು ಹಣ ಕೊಟ್ಟು ಇಂಥ ದೊಡ್ಡ ಕಾರ್ಯವನ್ನು ನಡೆಸಬೇಕಾದರೆ ಸರಕಾರದ ಹೊರತು ಮತ್ತಾವ ಸಂಸ್ಥೆಗಳಿಗೆ ಇದು ಸಾಧ್ಯವಾದೀತು ?

ಆಯುರ್ವೇದದ ಉನ್ನತಿಯ ಉಪಾಯವು ಸರಕಾರದ ಕೈಯಲ್ಲಿದೆ. ಈಗಿದ್ದ ನಮ್ಮ ವೈದ್ಯ ಪದ್ಧತಿಯ ಸ್ಥಿತಿ ಸುಧಾರಿಸುವದು ಸರಕಾರದ ಸಹಾನುಭೂತಿ ಯನ್ನೇ ಅವಲಂಬಿಸಿದೆ*

ನಮ್ಮ ಪ್ರಾಂತದಲ್ಲಿ ಸರಕಾರವು ಆಯುರ್ವೇದಕ್ಕೆ ಇತ್ತ ಮನ್ನಣೆಯು ತೀರ ಸ್ವಲ್ಪ. ಇಷ್ಟರಿಂದ ಆದ ಫಲಿತಾಂಶವೇನಂದರೆ, ವೈದ್ಯರಿಗೆ ಉಸಿರೆಳದಾಟಕ್ಕೆ ಮಾತ್ರ ಅಪ್ಪಣೆ ದೊರೆತಂತಾಗಿದೆ. ಸರಕಾರದವರೇ ಒಂದು ಚಿಕ್ಕ ಆಯುರ್ವೇದ ವಿದ್ಯಾಲಯವನ್ನು ಸ್ಥಾಪಿಸಿದ್ದಾರಲ್ಲದೆ ಕೆಲವು ಶಿಕ್ಷಣ ಸಂಸ್ಥೆಗಳಿಗೆ ಅಲ್ಪಸ್ವಲ್ಪ ವರ್ಷಾಶನಗಳನ್ನು ದಯಪಾಲಿಸಿದ್ದಾರೆ. ಸರಕಾರದ ಈ ಅಲ್ಪ ಧನಸಹಾಯವನ್ನು ನಾವು ಕಡೆಗಣಿಸಲಾಗದು. ಬಹುಶಃ ಈ ಧನಸಹಾಯವು ಆಯುರ್ವೇದಕ್ಕೆ ಅದು ಮುಂದೆ ಮಾಡಲಿರುವ ವಿಪುಲ ಧನಸಹಾಯದ ಮುಂಗಾಣಿಕೆಯೆಂದೇ ನಾವೀಗ ಭಾವಿಸೋಣ. ಈಗ ನಮಗೆ ಸರಕಾರದಿಂದ ದೊರೆತ ಧನಸಹಾಯವು ಅಲ್ಪವಾಗಿ ದ್ದರೂ ಇದರಿಂದ ಒಂದು ಸಂಗತಿ ಮಾತ್ರ ಸ್ಪಷ್ಟವಾಗುತ್ತಿದೆ. ಅದೇನಂದರೆ ಆಯು ರ್ವೇದದ ಸಂಸ್ಥೆಗಳೆಲ್ಲ ಒಟ್ಟಾಗಿ ಯೋಗ್ಯರೀತಿಯಲ್ಲಿ ಪ್ರಯತ್ನಿಸಿದ್ದಾದರೆ ಫಲ ದೊರಕದೆ ಇರಲಾರದು.

---

*ईति विषगररक्षोरक्षणायोपदेशं
भजतिनरपतिर्यो नित्यमेवाप्रमत्तः ।
निजपररिपुवृन्दैरप्रधृष्यो महात्मा
जनयति जनतायाः क्षेमयोगौ चिराय ॥

अष्टांगसंग्रह, सू. ८.

ಆಯುರ್ವೇದಕ್ಕೆ ಮೈಸೂರು ಸಂಸ್ಥಾನದಲ್ಲಿ ಬಹು ಅನುಕೂಲ ಪರಿಸ್ಥಿ ಯಿದೆಯೆಂಬು ನನ್ನ ಭಾವನೆ. ಹಿಂದೂ ವೈದ್ಯ ಪದ್ಧತಿಯು ಹಿಂದೂಸ್ಥಾನದ ಸಂಸ್ಥಾನಗಳಲ್ಲಿ ಅದರಲ್ಲೂ ವಿಶೇಷವಾಗಿ ನಿಮ್ಮ ಸಂಸ್ಥಾನದಲ್ಲಿ ಬೆಳವಣಿಗೆ ಹೊಂ ದಲು ಸಾಧ್ಯವಿದೆ. ನಿಮ್ಮ ಸಂಸ್ಥಾನವು ಸಂಸ್ಕೃತಿ, ಉದ್ಯಮ ಹಾಗೂ ವಿಜ್ಞಾ ಗಳಿಗೆ ಆಶ್ರಯಸ್ಥಾನವೆಂದು ಹೆಸರಾಗಿದೆ. ಅಲ್ಲದೆ ನಿಮ್ಮ ಮಹಾರಾಜರು ಸುಜ್ಞಾ ಸಹಾನುಭೂತಿಪರರೂ ವಿಶಾಲಹೃದಯಿಗಳೂ ಎಂದು ಭರತಖಂಡದ ತುಂಬ ಸು ಸಿದ್ಧರಿದ್ದಾರೆ. ಇಂಥ ಮಹಾನುಭಾವರ ಉದಾರಾಶ್ರಯದಲ್ಲಿಯೂ ಮತ್ತ ಅನುಕೂಲ ವಾತಾವರಣದಲ್ಲಿಯೂ ಆಯುರ್ವೇದವು ಇಲ್ಲಿ ಬೆಳವಣಿಗೆ ಹೊಂ ವದು ಶಕ್ಯವಿದೆ.

ಸರಕಾರದ ಕೈಯಿಂದ ಆಗಬೇಕಾದ ಕಾರ್ಯವನ್ನು ಮಾಡಿಸಿಕೊಳ್ಳುವು ಇಂಥ ಸಮ್ಮೇಲನಗಳಿಗೇ ಸಾಧ್ಯ. ಸರಕಾರವು ತನ್ನ ಕರ್ತವ್ಯವನ್ನು ದಕ್ಷತೆಯಿ ಮಾಡಬೇಕೆಂಬುದನ್ನು ಅದರ ಮನಸ್ಸಿನ ಮೇಲೆ ಬಿಂಬಿಸುವಂತೆ ಸಮ್ಮೇಲನ ಪ್ರಯತ್ನಿಸತಕ್ಕದ್ದು. ಆಯುರ್ವೇದದ ಕಡೆಗೆ ಸಹಾನುಭೂತಿಯನ್ನು ತೋರುತ್ತಿ ಮೈಸೂರು ಸರಕಾರವು ಅದಕ್ಕೆ ನಿಜವಾದ ಸಹಾಯನ್ನೀಯುವದೆಂದು ನಾ ಆಶಿಸಿದ್ದೇನೆ.

ಪ್ರದರ್ಶನ ಸಮಿತಿಯವರು ಬಹು ಪರಿಶ್ರಮಪಟ್ಟು ಏರ್ಪಡಿಸಿದ ಆ ರ್ವೇದ ಪ್ರದರ್ಶನವನ್ನು ನಾವೆಲ್ಲರೂ ಇಷ್ಟರಲ್ಲಿಯೇ ನೋಡುವವರಿದ್ದೇವಷ್ಟೆ? ಪ್ರದರ್ಶನದಲ್ಲಿ ಅಹಿಂಸಾಸ್ತ್ರಗಳು ಅಚ್ಚುಕಟ್ಟಾಗಿ ಪ್ರದರ್ಶಿತವಾಗಿರುವದನ್ನು ನಿ ನೋಡುವಿರಿ. ಈ ಕರುಣಾಸ್ತ್ರಗಳಿಂದಲೇ ಸುಸಜ್ಜಿತರಾಗಿ ಆಯುರ್ವೇದಿ ಅನಾದಿಕಾಲದಿಂದ ದೋಷಗಳು ಮತ್ತು ರೋಗಗಳೆಂಬ ಶತ್ರುಗಳ ಕೂಡ ಕಾ ಸಗುತ್ತಿದ್ದಾರೆ. ಈ ಯುದ್ಧ ಚಟವಟಿಕೆಗಳೂ ಈಗ ನಡೆದಿರುವ ಮಹಾಯುದ್ಧ ಚಟವಟಿಕೆಗಳಷ್ಟೇ ತೊಡಕಾಗಿವೆ. ಇಲ್ಲಿಯ "ಗೆಷ್ಟಪೋ ದಲ"ವು (ಲಕ್ಷ ಸಮುಚ್ಚಯ) ಶತ್ರುಗಳ ಯುದ್ಧ ಸನ್ನಾಹ (ಪ್ರಾಗ್ರೂಪ) ದ ಸುದ್ದಿಯನ್ನು ತಲು ತ್ತದೆ. ಶತ್ರುಗಳು ಗೌಪ್ಯವಾಗಿ ಹೊಂಚುಹಾಕಿ ಕುಳಿತ ಕಂದಕ ಪ್ರದೇಶಗಳ ತೋರಿಸುವದಲ್ಲದೆ ಅವರು ಕಣ್ಣಿಗೆ ಗೋಚರಿಸದೆ ನುಸುಳಿ ಪ್ರವೇಶಿಸುತ್ತಿ (ಸ್ಥಾನ ಸಂಶ್ರಯ) ಸಂಗತಿಯನ್ನೂ ನಮಗೆ ತಿಳಿಸುತ್ತದೆ. ಶತ್ರುಗಳ ಪ್ರಭಾವ ಯಾವ ಯಾವ ಪ್ರದೇಶಗಳಲ್ಲಿ ಹಬ್ಬಿರುವದೆಂಬುದನ್ನೂ (ಧಾತುದುಷ್ಟಿ) ಶತ್ರು ಪ್ರಧಾನ ಮಂಡಲದ ಒಲವು ಎತ್ತಕಡೆಗೆ ಸಾಗಿದೆಯೆಂಬುದನ್ನೂ (ದೋಷಗತಿ) ಅದು ನಮಗೆ ಹೇಳುತ್ತಿದೆ, ಮತ್ತು ವೈರಿಗಳ ಪಂಚಮದಲದ ಚಲನವಲನವೊ

ಬಹು ಸೂಕ್ಷ್ಮವಾಗಿ ನಡೆದಿರುತ್ತದೆ (**निजरोग**) ಅಲ್ಲದೆ ಒಮ್ಮೊಮ್ಮೆ ವೈರಿಗಳು ಅಕಸ್ಮಾತ್ತಾಗಿ ದಾಳಿ ಮಾಡಿ ಬಹಳ ಕೇಡುಂಟುಮಾಡುವದೂ ಉಂಟು. (**आगन्तु रोग**) ನಮ್ಮ ಈ "ಗೆಸ್ಪಪೋದಲ" (**लक्षण समुच्चय**) ದಿಂದ ಬಂದ ಸುದ್ದಿಯ ಲಾಭ ಪಡೆದು ನಾವು ಶತ್ರುಗಳ ಕೂಡ ಹೇಗೆ ಹೇಗೆ ಯಾವ ಯಾವ ಸ್ಥಳಗ ಳಿಂದವೈರಿಗಳನ್ನು ಹೊರದೂಡಬೇಕೆಂಬುದನ್ನು ಗೊತ್ತುಪಡಿಸಬಲ್ಲೆವು (**शोधन चिकित्सा**) ಅಥವಾ ಯೋಗ್ಯವೆನಿಸಿದರೆ ಸಂಧಿಯ ನೆವ ಚಾಚಿ ವೈರಿಗಳ ಚಟು ವಟಿಕೆಗಳನ್ನು ನಿಲ್ಲಿಸಿ ಕೆಲವೇಳೆ ವಿಶ್ರಾಂತಿಯನ್ನು ಹೊಂದಬಹುದು. ಮಾನವ ಜಾತಿಯ ಕಡುವೈರಿಗಳಾದ ಸಾಂಕ್ರಾಮಿಕ ಹಾಗೂ ಇತರ ರೋಗಗಳನ್ನು ಸಂಪೂ ರ್ಣವಾಗಿ ನಿರ್ಮೂಲ ಮಾಡಲು ಹೂಡಿದ ಈ ಜಾಗತಿಕ ಯುದ್ಧದಲ್ಲಿ ವೈದ್ಯ ಶಾಸ್ತ್ರಜ್ಞರಿಗಲ್ಲದೆ ಇನ್ನಾರಿಗೆ ಸೇನಾಧಿಪತ್ಯವನ್ನು ಕೊಡಬೇಕು? ಮಹನೀಯರೇ, ಅಷ್ಟೊಂದು ಶಾಸ್ತ್ರಸಮ್ಮತವಲ್ಲದ ಈ ಉಪಮೆಯನ್ನು ಕೊಡುತ್ತ ಲಷ್ಕರೀ ಪರಿಭಾ ಷೆಯಲ್ಲಿ ಆಯುರ್ವೇದ ಶಾಸ್ತ್ರವನ್ನು ವಿವರಿಸಿದ್ದೇನೆ. ಸುತ್ತುಮುತ್ತಲಿನ ವಾತಾ ವರಣವೆಲ್ಲ ರಣೋತ್ಸಾಹದಿಂದ ತುಂಬಿರುವಾಗ ಅರಿಯದೆ ಈ ಪರಿಭಾಷೆಯನ್ನು ಉಪಯೋಗಿಸಿದ್ದೇನೆ; ಕ್ಷಮಿಸಬೇಕು.

ಯುದ್ಧದ ಈ ದಿನಗಳಲ್ಲಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಔಷಧ ಗಳನ್ನು ಕಳಿಸುವದಾಗಲಿ ಅವುಗಳನ್ನು ತಯಾರಿಸುವುದಾಗಲಿ ಬಹು ದುಸ್ತರವಾ ಗಿದೆ. ಕಾರಖಾನೆಗಳೆಲ್ಲ ಯುದ್ಧ ಚಟುವಟಿಕೆಗಳಲ್ಲಿ ತೊಡಗಿಕೊಂಡಿವೆ. ಇದರಿಂದ ಉಪಯುಕ್ತ ಔಷಧಗಳೂ ಮೊದಲಿನ ಪ್ರಮಾಣದಲ್ಲಿ ತಯಾರಾಗದಂತಾಗಿವೆ. ಔಷಧಗಳಿಗಾಗಿ ಪರದೇಶಗಳಿಗೆ ಮೊರೆಹೋಗುವ ಚಟವೊಂದು ನಮಗೆ ಅಂಟಿಕೊಂ ಡಿದೆ. ಕಚ್ಚಾಪದಾರ್ಥಗಳು ಹಿಂದೂಸ್ಥಾನದಿಂದ ಪರದೇಶಗಳಿಗೆ ಕಳಿಸಲ್ಪಟ್ಟು ಅಲ್ಲಿ ಸಿದ್ಧವಾದ ಪದಾರ್ಥಗಳು ನಮ್ಮ ದೇಶದೊಳಗೆ ಎಣಿಕೆಯಿಲ್ಲದಷ್ಟು ಪ್ರವೇಶಿಸುವುದ ರಿಂದ ನಮ್ಮಲ್ಲಿಯ ಕಾರಖಾನೆಗಳಿಗೇ ಗಂಡಾಂತರವೊದಗುತ್ತದೆ. ನಮ್ಮ ಪ್ರತಿಭೆ ಯನ್ನು ಬೆಳೆಸಿಕೊಂಡು ಸ್ವಯಂಸ್ಫೂರ್ತಿಯಿಂದ ನಾವು ಕೆಲಸಮಾಡಿದರೆ ನಮ್ಮ ದೇಶವು ತನ್ನ ಕಾಲಮೇಲೆ ತಾನು ನಿಲ್ಲುವಂತಾಗುವಲ್ಲಿ ಸಂದೇಹವಿಲ್ಲ. ಇಂಥ ಸುಯೋಗವು ಈಗ ಬಂದಿದೆಯೆಂದೇ ನನ್ನ ಮತ. ಯುದ್ಧಕಾಲದಲ್ಲಿ ಪರದೇಶಗ ಳಿಂದ ಪದಾರ್ಥಗಳು ಬರುವದು ಕಟ್ಟಾಗಹತ್ತುವದರಿಂದ ಔಷಧಾಲಯಗಳಿಗೂ ಡಾಕ್ಟರರಿಗೂ ಔಷಧಗಳು ಸರಿಯಾದ ವೇಳೆಗೆ ಒದಗದಂತಾಗುತ್ತವೆ. ಯುದ್ಧ ಪರಿಸ್ಥಿತಿ ತಾತ್ಪೂರ್ತಿಕವೆಂಬುದು ನಿಜ. ಆದರೆ ಶಾಂತಿಕಾಲದಲ್ಲಿಯೂ ಕೂಡ ಪ್ರವಾಸದ ಅನುಕೂಲತೆಗಳಿಲ್ಲದ ದೂರದ ಹಳ್ಳಿಗಾಡುಗಳಿಗೆ ಔಷಧಗಳ ಪೂರೈಕೆಯು

ಸಾಕಷ್ಟಾಗಲಿ ಸರಿಯಾದ ವೇಳೆಗಾಗಲಿ ಆಗುವದು ಶಕ್ಯವಿಲ್ಲ. ಆದಕಾರಣ ಇ: ಹಳ್ಳಿಗಾಡುಗಳಲ್ಲಿಯ ವೈದ್ಯರು ತಮ್ಮ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ವಿಪುಲವ ಬೆಳೆಯುತ್ತಿರುವ ವನಸ್ಪತಿಗಳ ಜ್ಞಾನ ಮಾಡಿಕೊಂಡಿದ್ದರೆ ಔಷಧಗಳ ಕೊರತೆಯ ಸುಲಭವಾಗಿ ನೀಗಬಹುದಾಗಿದೆ. ಹಿಂದುಸ್ಥಾನದಲ್ಲಿ ವನಸ್ಪತಿ ಸಂಪತ್ತು ಅಪಾ ವಾಗಿದೆ. ಬೇಕೆಂದರೆ ಪ್ರತಿಯೊಬ್ಬ ವೈದ್ಯನಿಗೆ ಬೇಕಾದಷ್ಟು ವನಸ್ಪತಿಗಳು ದೊರೆ ತ್ತವೆ. ಇವುಗಳ ಉಪಯೋಗವನ್ನು ಸರಿಯಾಗಿ ಮಾಡಿಕೊಂಡಲ್ಲಿ ಔಷಧಗಳಿ ಪರರಿಗೆ ಕೈಯೊಡ್ಡುವ ಕಾರಣವಿಲ್ಲ. ವಿಸ್ತಾರವಾದ ಹಿಂದುಸ್ಥಾನದ ಜನಸ್ತೋಮಕ್ಕೆ ಔಷಧದ ಸಹಾಯವನ್ನೊದಗಿಸುವ ಸುಲಭೋಪಾಯವೆಂದರೆ ಇದೊಂದೇ ಆಗಿ

ತನ್ನ ಸುತ್ತುಮುತ್ತಲಿನ ವನಸ್ಪತಿಗಳನ್ನು ಉಪಯೋಗಿಸಹತ್ತಿದರೆ ಆ ವೈದ್ಯ ಚರಕನು ಹಾಕಿಕೊಟ್ಟ ಹಾದಿಯನ್ನು ತುಳಿಯಹತ್ತಿದನೆಂದೇ ಹೇಳಬೇಕು. ಚರಕನ ಯುಗಯುಗಾಂತರಗಳಲ್ಲಿಯೂ ಶ್ರೇಷ್ಠರೆಂದೆನಿಸಿಕೊಳ್ಳುವ ಮಹಾವೈದ್ಯರ ಶ್ರೇಣಿ ಸೇರುತ್ತಾನೆ. ಗುರುತಿಸುವ ಕಣ್ಣಿದ್ದರೆ ಈ ವಿಶ್ವದ ಸಕಲ ಪದಾರ್ಥಗಳಲ್ಲಿಯ ಒಂದಿಲ್ಲೊಂದು ಔಷಧಗುಣವು ಇದ್ದೇ ಇದೆಯೆಂದು ಸಾರಿದ ಧೀರ ವೈದ್ಯನವನು

ಹಳ್ಳಿಗಾಡುಗಳಲ್ಲಿಯ ಜನತೆಗೆ ಹೆಚ್ಚುಹೆಚ್ಚಾಗಿ ವೈದ್ಯಕ ಸಹಾಯವನ್ನೊ ಗಿಸುವ ಯೋಜನೆಯನ್ನು ಮೈಸೂರು ಸರಕಾರದವರು ಕೈಕೊಂಡಿರುವರೆಂ ಕೇಳಿದ್ದೇನೆ. ಈ ಯೋಜನೆಯನ್ವಯ ಕೆಲವೊಂದು ವಿಶಿಷ್ಟ ಶಿಕ್ಷಣಪಡೆದು ತರಬೇ ಹೊಂದಿದ ಆಯುರ್ವೇದ ಪಂಡಿತರಿಗೂ ಹಕೀಮರಿಗೂ ಪ್ರೋತ್ಸಾಹನೆ ದೊರೆ ಒಟ್ಟಿನಲ್ಲಿ ಮೈಸೂರು ಸರಕಾರದಿಂದ ಔಷಧದ ಸಹಾಯ ಪಡೆಯುವ ಹಳ್ಳಿ ಸಂಖ್ಯೆ ಬೆಳೆಯಬಹುದಾಗಿದೆ.

---

*Dr. Geo. E. Clark, M.A., M.D., Philadelphia, U.S.A. writes—

"I would rather trust ancient Hindu practice than the allopath practice of what we are want to learn in this enlightened age. If th physicians of the present day would drop from the Pharmacopoe all the modern drugs and chemicals and treat their patient according to the methods of Charaka, there would be less work fo the undertakers and few chronic invalids in the world."

†नानौषधिभूतं जगति किंचिद्द्रव्यमुपलभ्यते ।
शारीरजानां दोषाणां क्रमेण परमौषधम् ।
बस्तिर्विरेको वमनं तथा तैलं घृतं मधु ॥

अष्टांगहृदय, सू. अ. १

ನಿಮ್ಮ ಪ್ರಾಂತದಲ್ಲಿ ಪ್ರಕೃತಿಸಂಪತ್ತು ಸಮೃದ್ಧವಾಗಿದೆಯಷ್ಟೇ ಅಲ್ಲ, ಹೊಸ ಹೊಸ ವ್ಯವಹಾರೋದ್ಯಮಗಳೂ ಭರದಿಂದ ನಡೆಯುತ್ತಲಿವೆ. ಜೇನು ಸಾಕುವಿಕೆಯು ಅವುಗಳಲ್ಲಿ ಒಂದೆಂದು ಹೇಳಬಹುದು. ಪಾಶ್ಚಾತ್ಯರು ಜೇನುತುಪ್ಪವು ಒಂದು ಬಹುಮಹತ್ವದ ಪಥ್ಯಾಹಾರವೆಂದು ಹೇಳುತ್ತಾರೆ. ತ್ರಿದೋಷ ಚಿಕಿತ್ಸೆಯ ಮೂರು ಮುಖ್ಯ ಉಪಾಯಗಳಲ್ಲಿ ಜೇನುತುಪ್ಪವೂ ಒಂದಾಗಿದೆಯೆಂದು ಆಯುರ್ವೇದಿಗಳ ಮತ. ಇದರಲ್ಲಿ ಔಷಧಗುಣವು ವಿಶೇಷವಾಗಿರುವದರಿಂದ ಪ್ರಮಾಣದಲ್ಲಿ ಔಷಧಗಳ ಕೂಡಾಗಲಿ ಹಾಗೆಯೇ ಆಗಲಿ ಹೊಟ್ಟೆಯಲ್ಲಿ ಕೊಡುತ್ತಾರೆ. ಅಲ್ಲದೆ ಬಾಹ್ಯಾಂಗಗಳಿಗೆ ಲೇಪಿಸುವುದಕ್ಕೂ ಇದರ ಉಪಯೋಗವಾಗುತ್ತದೆ. ಜೇನುತುಪ್ಪದ ಈ ಉದ್ಯೋಗದಿಂದ ಶುದ್ಧ ಜೇನುತುಪ್ಪವು ಬಹು ದೊಡ್ಡ ಪ್ರಮಾಣದಲ್ಲಿ ದೊರೆಯಲು ಸಾಧ್ಯವಾಗಿದೆ. ಬೇರೆ ಬೇರೆ ಜಾತಿಯ ಜೇನ್ನೊಣಗಳನ್ನು ಸಾಕಿ ಬೇರೆ ಬೇರೆ ಕಾಲಗಳಲ್ಲಿ ನಾನಾಪ್ರಕಾರದ ಜೇನುತುಪ್ಪವನ್ನು ಸಂಗ್ರಹಿಸಬಹುದಾಗಿದೆ. ಪ್ರತಿಯೊಂದು ಪ್ರಕಾರದ ಜೇನುತುಪ್ಪವೂ ಒಂದೊಂದು ಔಷಧಗುಣದಿಂದ ಕೂಡಿದೆ.

ಔಷಧಗಳಿಗಾಗಿ ನಮ್ಮ ವೈದ್ಯರು ಪರದೇಶಗಳ ಕಡೆಗೆ ನೋಡದಂತಾಗಬೇಕಾದರೆ ನಾನು ಈ ಮೊದಲೇ ಹೇಳಿದಂತೆ ಅವರು ವನಸ್ಪತಿಗಳ ತಾಯಿಯಾದ ಭೂಮಾತೆಗೆ ಶರಣುಹೋಗಬೇಕು. ಆದರೆ ಅವರ ವನಸ್ಪತಿ ಜ್ಞಾನವು ಅಷ್ಟೊಂದು ಪರಿಪೂರ್ಣವಾದುದಲ್ಲ. ಗುಡ್ಡಗಾಡುಗಳಲ್ಲಿ ಹುಟ್ಟಿ ಬೆಳೆದು ನಿಂತಿರುವ ವನಸ್ಪತಿಗಳನ್ನು ಬಹುಮಟ್ಟಿಗೆ ಇವರು ಗುರುತಿಸಲಾರರು. ವನಸ್ಪತಿಗಳ ಬೇರುಗಳನ್ನು ಅವರು ನೋಡಿರಬಹುದು. ಆದರೆ ನೆಲದ ಮೇಲೆ ಕಾಣುವ ಎಲೆ, ಹೂವು ಮುಂತಾದ ಅವುಗಳ ಇತರ ಅಂಗಗಳನ್ನು ಅವರು ಅರಿಯರು. ಆದ್ದರಿಂದ ಇಂಥ ಆಯುರ್ವೇದ ಪ್ರದರ್ಶನಗಳು ಅವರ ಮಾಸಿದ ವನಸ್ಪತಿಜ್ಞಾನವನ್ನು ಬೆಳಗಿಸಲು ಬಹಳ ಅವಶ್ಯಕವಾಗಿವೆ. ವನಸ್ಪತಿಗಳ ತೋಟವನ್ನು ನಿರ್ಮಿಸುವದು ಬಹಳ ವೆಚ್ಚದ ಹಾಗೂ ಶ್ರಮದ ಕೆಲಸ. ವನಸ್ಪತಿ ವೈಭವದಿಂದ ಬೆಳಗುವ ಅರಣ್ಯಪ್ರದೇಶಗಳು ಎಲ್ಲರಿಗೂ ನೋಡಲು ಸುಲಭಸಾಧ್ಯವಿರುವದಿಲ್ಲ. ಆದಕಾರಣವೇ ಇಂಥ ಪ್ರದರ್ಶನಗಳ ಅವಶ್ಯಕತೆಯು ಮತ್ತಷ್ಟು ಹೆಚ್ಚುತ್ತದೆ.

ಭೂಮಿಗುಣ, ಹವಾಮಾನ ಹಾಗೂ ಆರ್ಥಿಕ ಪರಿಸ್ಥಿತಿಗಳಿಗನುಗುಣವಾಗಿ ಆಯುರ್ವೇದಶಾಲೆಗಳ ಸುತ್ತುಮುತ್ತು ವನಸ್ಪತಿಗಳ ತೋಟಗಳನ್ನು ನಿರ್ಮಿಸಿ ವನಸ್ಪತಿಗಳ ಪರಿಚಯ ಮಾಡಿಕೊಳ್ಳುವದು ಉತ್ತಮ ಉಪಾಯ. ಇಂಥ ಒಂದು ಪ್ರಯೋಗವನ್ನು ನಾವು ಮಾಡಿ ನೋಡಿದ್ದೇವೆ. ಆದರೆ ಇದು ಬಹು ವೆಚ್ಚದ

ಕೆಲಸ. ಭೂಮಿಯಲ್ಲಿ ಸ್ವಾಭಾವಿಕವಾಗಿ ಹುಟ್ಟಿ ಬೆಳೆದ ವನಸ್ಪತಿಗಳ ಅಭ್ಯಾ ಮಾಡುವದು ಉತ್ತಮ ಪಕ್ಷ. ಅದು ಶಕ್ಯವಿರದಿದ್ದರೆ ವರ್ಣ ಫಲಕ (Colour plates)ಗಳ ಮೂಲಕ ಈ ಅಭ್ಯಾಸವನ್ನು ನಡೆಸಬಹುದು. ವರ್ಣಫಲಕ ಅಭ್ಯಾಸವು ಗೌಣಪಕ್ಷದ್ದು. ಈ ವರ್ಣ ಫಲಕಗಳಿಗಿಂತ ವರ್ಣ ಛಾಯಾಚಿ (Colour Photography)ಗಳು ವನಸ್ಪತಿಗಳ ಅಭ್ಯಾಸಕ್ಕೆ ಹೆಚ್ಚು ಉಪಯು ವಾಗಿವೆ. ಈ ಛಾಯಾಚಿತ್ರ ಫಲಕಗಳ ಸಹಾಯದಿಂದ ಒಂದು ವನಸ್ಪತಿ ಅವಯವಗಳನ್ನು ಹೂವಿನಿಂದ ಮೊದಲುಗೊಂಡು ದೊಡ್ಡ ಮರದವರೆಗೆ ಅವು ಸಹಜ ಬಣ್ಣಗಳಲ್ಲಿಯೇ ಸವಿವರವಾಗಿ ಚಿತ್ರಿತವಾದಂಥವನ್ನು ನೋಡಬಹುದಾ ವರ್ಣಛಾಯಾ ಚಿತ್ರಕಲೆಯು ಈಗ ಬಹಳ ಮುಂದುವರಿದಿದೆ. ಈ ಕಲೆಯಲ್ಲಿ ನಾ ಸ್ವಲ್ಪ ಪ್ರಯೋಗಮಾಡಿ ಕೆಲವು ಛಾಯಾಚಿತ್ರ ಫಲಕಗಳನ್ನು ತಯಾರಿಸಿದ್ದೇ ಈ ಪ್ರದರ್ಶನದಲ್ಲಿ ಅವುಗಳನ್ನು ನೀವು ಇಷ್ಟರಲ್ಲಿಯೇ ನೋಡುವವರಿದ್ದೀ ಈ ಛಾಯಾ ಚಿತ್ರ ಫಲಕಗಳ ಸಹಾಯದಿಂದ ನೀವು ನಿಮ್ಮ ವನಸ್ಪತಿ ಜ್ಞಾನವ ಅಚ್ಚಳಿಯದೆ ಉಳಿಸಿಕೊಳ್ಳಬಹುದಾಗಿದೆ. ಅಲ್ಲದೆ ಈ ಚಿತ್ರ ಫಲಕಗಳನ್ನು ಪ್ರಾಂತಗಳಲ್ಲಿರುವ ನಿಮ್ಮ ಮಿತ್ರರಿಗೆ ಅಂಚೆಯ ಮೂಲಕ ಕಳಿಸಬಹುದು. ಈ ಚಿ ಫಲಕಗಳು ಬಹುದಿನ ಬಾಳುವಂಥವು. ಈ ದೃಷ್ಟಿಯಿಂದ ವಿಚಾರಿಸಿದರೆ ಸಂಗ್ರಹಿಸಿ ವನಸ್ಪತಿಗಳ ಮಾದರಿಗಳಿಗಿಂತ ಇವು ಉತ್ತಮವೆಂದು ಹೇಳಬಹುದು. ಯಾಕೆಂ ಕಾಯ್ದಿಟ್ಟ ವನಸ್ಪತಿಗಳು ಕೆಲಕಾಲದ ಮೇಲೆ ಕೆಟ್ಟುಹೋಗುತ್ತವೆ.

ಇಲ್ಲಿಯ ಎಗ್ಜಿಬಿಷನ್ ಕಟ್ಟಡದಲ್ಲಿ ಖಾಯಮಾಗಿರುವ ಸರ್ಕಾರಿ ವಸ್ತು ಸಂಗ್ರಹಾಲಯದ ವನವಿಭಾಗದಲ್ಲಿ ಒಂದು ಹೊಸ ಅಂಶವನ್ನು ನೋಡಿ ನನ ಆನಂದವಾಗಿದೆ. ಎಲ್ಲರೂ ಬಲ್ಲ ಸರ್ವಸಾಧಾರಣವಾದ ವನಸ್ಪತಿಗಳನ್ನು ಒಂ ಕ್ರಮದಲ್ಲಿ ಪ್ರದರ್ಶನಕ್ಕಾಗಿ ಇಟ್ಟಿದ್ದಾರೆ. ಶ್ರೀಯುತ ಎಮ್. ಜಿ. ಸಿಂಗರೈಯಂ ರ್ಯರು ಪ್ರಸಿದ್ಧಿಸಿದ "ಆಯುರ್ವೇದ ಸುಲಭ ಚಿಕಿತ್ಸೆಗಳು" ಎಂಬ ಗ್ರಂಥದ ವಿವರಿಸಿದ ರೋಗ ಚಿಕಿತ್ಸೆಯನ್ವಯ ಆ ವನಸ್ಪತಿಗಳನ್ನು ಕ್ರಮಗೊಳಿಸಿಟ್ಟಿದೆ.

ಮಹನೀಯರೇ, ಈ ಮೊದಲೇ ನಾನು ಹೇಳಿದಂತೆ ವನಸ್ಪತಿಗಳು ನಮ್ಮ ಪ್ರಾಚೀನಸಂಪತ್ತು. ಅವು ಇಂದಿಗೂ ನಮಗೆ ಬೇಕು. ಪಾಶ್ಚಾತ್ಯ ವೈದ್ಯಶಾಸ್ತ್ರಜ್ಞ ಕೂಡ ನಮ್ಮ ವನಸ್ಪತಿಗಳ ಉಪಯೋಗವನ್ನು ಮಾಡಿಕೊಳ್ಳುತ್ತಿದ್ದಾರೆ. ಪಾಶ್ಚಾತ್ಯ ಯಾವ ಔಷಧಕ್ಕೂ ಹಣಿಯದ ತೊನ್ನು ರೋಗದ ನಿವಾರಣೆಗೆ ನಮ್ಮ "ಬಾವಂ ಎಣ್ಣೆ" (Bouchi Oil)ಯನ್ನು ಅವರು ಉಪಯೋಗಿಸುವದನ್ನು ಉದಾಹ ಬಹುದು. Chamogra ಎಣ್ಣೆ ಹಾಗೂ ಇಸಬಗೋಲಿನ ಕಲ್ಪಗಳೂ ಇದ

ಮಾದರಿಯ ಉದಾಹರಣೆಗಳು. Tincture Vasakaವಂತೂ ಬ್ರಿಟಿಷರ ಸಿದ್ಧೌಷಧವಾಗಿ ಬಿಟ್ಟಿದೆ. ಹೀಗೆಯೇ ಇನ್ನೂ ಅನೇಕ ವನಸ್ಪತ್ಯೌಷಧಿಗಳು ಪಾಶ್ಚಾತ್ಯರ ಮೆಚ್ಚಿಕೆಯನ್ನು ಪಡೆಯಬಹುದಾಗಿದೆ.

ಇದಿಷ್ಟೇ ಅಲ್ಲ, ನಮ್ಮ ಸಿದ್ಧೌಷಧಗಳು ಅನೇಕ ರೋಗಗಳನ್ನು ಬಹು ಬೇಗನೆ ಗುಣಪಡಿಸಿವೆ. ಉದಾಹರಣೆಗೆಂದು "ಮಕರಧ್ವಜ" ವೆಂಬ ಔಷಧವನ್ನು ತೆಗೆದುಕೊಳ್ಳೋಣ. ರಸಾಯನಿಕ ದೃಷ್ಟಿಯಿಂದ ಮಕರಧ್ವಜವೆಂದರೆ ಪಾದರಸದ ಗಂಧಕಮಿಶ್ರಿತಕೆಂಪುಕಲ್ಪ. ಈ ಕಲ್ಪಗಳು ರಕ್ತದಲ್ಲಿ ಸರಿಯಾಗಿ ಬೆರೆಯುವವೋ ಇಲ್ಲವೋ ಎಂದು ಕೆಲವರು ಸಂಶಯ ಪಡುತ್ತಾರೆ. ಈ ಕಲ್ಪಗಳಲ್ಲಿ ಔಷಧಗು ಣವೇನೂ ಇಲ್ಲವೆಂದು ಪಾಶ್ಚಾತ್ಯರು ಅದನ್ನು ಉಪಯೋಗಿಸುವದಿಲ್ಲ. ಆದರೆ ಅದೇ ಆಯುರ್ವೇದ ಔಷಧಗಳಲ್ಲೆಲ್ಲ ಪಾದರಸವನ್ನು 'ಕಜ್ಜಲಿ' 'ರಸ ಸಿಂಧೂರ' ಮುಂತಾದ ಭಸ್ಮರೂಪದಲ್ಲಿ ವಿಶೇಷವಾಗಿ ಉಪಯೋಗಿಸುತ್ತಾರೆ. ಪಾದರಸದಂಥ ಮಹತ್ವದ ಖನಿಜ ಪದಾರ್ಥವನ್ನು ಔಷಧಗಳಿಗೆ ಉಪಯೋಗಿಸಿದ ಮೊದಲನೆಯ ವೈದ್ಯಶಾಸ್ತ್ರವೆಂದರೆ ಆಯುರ್ವೇದವೆನ್ನಬಹುದು. ಇತ್ತೀಚೆಯ ಕೆಲವು ಪ್ರಯೋಗ ಗಳಿಂದ ಆಯುರ್ವೇದದ ಈ ಪಾದರಸ ಭಸ್ಮಗಳು ಚಳಿಜ್ವರದಿಂದ ಉತ್ಪನ್ನವಾಗುವ ಹೃದಯ ವಿಕಾರಗಳಿಗೆ ಒಳ್ಳೆಯ ಉಪಾಯಗಳೆಂದು ಸಿದ್ಧವಾಗಿವೆ. ಮತ್ತು ಈ ಭಸ್ಮಗಳು ರಕ್ತದಲ್ಲಿ ಅಪಾಯವಾಗದಷ್ಟೇ ಪ್ರಮಾಣದಲ್ಲಿ ಬೆರೆಯುತ್ತವೆ.* ಅದೇ ಬ್ರಿಟಿಷರ ಪಾದರಸಜನ್ಯ ಔಷಧಗಳು ರಕ್ತದಲ್ಲಿ ಎಲ್ಲವೂ ಬಹುಬೇಗನೆ ಬೆರೆತು ಬಿಡುತ್ತವೆ. ಇದರಿಂದ ಪಾದರಸವು ಹೆಚ್ಚು ಪ್ರಮಾಣದಲ್ಲಿ ಮೈಯಲ್ಲಿ ಸೇರಿ ಅಪಾ ಯವನ್ನುಂಟು ಮಾಡುತ್ತದೆ.

ಮಹನೀಯರೇ, ಅನೇಕ ಔಷಧಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಉದಾಹ ರಿಸಿದ್ದೇನೆ. ಇದರಿಂದ ಆಯುರ್ವೇದದಲ್ಲಿ ಇನ್ನೂ ಸಂಶೋಧನೆಯಾಗಬೇಕೆಂದು ಸಿದ್ಧವಾಗುವುದಿಲ್ಲವೇ ? ಇದಕ್ಕೂಹೆಚ್ಚಾಗಿ ಆಯುರ್ವೇದದಿಂದ ಆಧುನಿಕ ವೈದ್ಯ ಶಾಸ್ತ್ರಕ್ಕೆ ಪ್ರಯೋಜನವುಂಟೆಂದು ತೋರುವದಿಲ್ಲವೆ ? ನಾವು ಮಾಡುವ ರೋಗ ಪರೀಕ್ಷೆ ಹಾಗೂ ಚಿಕಿತ್ಸಾಕ್ರಮಗಳು ನಿಜವಾಗಿವೆಯೆಂದು ಸಿದ್ಧ ಮಾಡಿ ತೋರಿಸಲು ಸುಯೋಗವಿನ್ನೂ ಬರಬೇಕಾಗಿದೆ.

ಹಿಂದುಸ್ಥಾನದಲ್ಲಿ ೧೮೫೪ರಿಂದ ಪಾಶಾತ್ಯ ಪದ್ಧತಿಗನುಸರಿಸಿ ವೈದ್ಯ ಶಾಸ್ತ್ರ ದಲ್ಲಿ ಸಂಶೋಧನೆ ನಡೆಯುತ್ತ ಬಂದಿದೆ. ಅಂದಿನಿಂದ ಇಂದಿನವರೆಗೆ ಅನೇಕ ಸಂಶೋಧನ ಸಂಸ್ಥೆಗಳು ಹುಟ್ಟಿವೆ. ೧೮೫೪ರಲ್ಲಿಯೇ ಸರಕಾರದವರು ಕೆಲವು ಅಧಿ ಕಾರಿಗಳನ್ನು ಕೆಲವೊಂದು ವೈದ್ಯಕ ಸಮಸ್ಯೆಗಳನ್ನು ಅಭ್ಯಸಿಸಲಿಕ್ಕೆಂದು ಕಳುಹಿ ತ್ತಿದ್ದರು. ಉದಾಹರಣಾರ್ಥವಾಗಿ ೧೮೬೯ರಲ್ಲಿ ಕನಿಂಗ್ಹ್ಯಾಮ್ ಮತ್ತು ಲೂಯಿಸ್ ಎಂಬಿಬ್ಬರನ್ನು ಕಾಲರಾ ಜೇನೆ ಹಾಗೂ ಚಳಿಜ್ವರಗಳನ್ನು ಅಭ್ಯಸಿಸುವದಕ್ಕಾಗಿ

* Sir, Dr. R. N. Chopra M.A., M.D., (Cantb) I.M.S.,: Indigenous Drugs of India. Pp, 421.

ಕಳಿಸಲಾಗಿತ್ತು. ೧೮೮೯ರಲ್ಲಿ ಹಿಂದುಸ್ತಾನ ಸರಕಾರದವರು "ಕಾಲಾ ಅಝ
ಮತ್ತು ಪ್ಲೇಗುಗಳ ಕಾರಣ ಮತ್ತು ನಿವಾರಣೋಪಾಯಗಳನ್ನು ತಿಳಿದುಕೊ
ವದಕ್ಕಾಗಿ ಮತ್ತೆ ಕೆಲ ಅಧಿಕಾರಿಗಳನ್ನು ಕಳಿಸಿದ್ದರು, ಈ ಇತಿಹಾಸವನ್ನು ಹೇ
ಸುವ ಉದ್ದೇಶವು ಇಷ್ಟೇ— ಆಯುರ್ವೇದ ಕ್ಷೇತ್ರದಲ್ಲಿಯೂ ಇಂಥ ಸಂಶೋ
ನಡೆಯಬೇಕು. ಇಂಥ ಸಂಶೋಧನ ಸಂಸ್ಥೆಗಳು ಹುಟ್ಟಬೇಕು. ಯೋಗ್ಯ
ಆಯುರ್ವೇದ ಶಾಸ್ತ್ರಜ್ಞರನ್ನು ಇಂಥ ಸಂಶೋಧನಾ ಕಾರ್ಯದಲ್ಲಿ ತೊಡ
ಹಣದ ಹಾಗೂ ಶಾಸ್ತ್ರೀಯ ದೃಷ್ಟಿಯಿಂದ ಎಲ್ಲ ಸಹಾಯವನ್ನೊದಗಿಸಿ ಕೊಡು
ಸರಕಾರದ ಕರ್ತವ್ಯವಾಗಿದೆ.

ಸಾಂಕ್ರಾಮಿಕ ರೋಗಗಳು ಹಬ್ಬುತ್ತಿರುವ ಪ್ರದೇಶಗಳಿಗೆ ರೋಗ ಪೀಡಿ
ಸಹಾಯಕ್ಕೆಂದು ಯೋಗ್ಯರಾದ ಆಯುರ್ವೇದ ವೈದ್ಯರನ್ನು ಕಳಿಸಿಕೊಡಬೇ
ಮೈಸೂರು ಸಂಸ್ಥಾನದ "ಆಯರ್ವಿನ್ ಕಾಲವೆಯ" ಪ್ರದೇಶದಲ್ಲಿ ಚಳಿಜ್ವ
ಉಪದ್ರವವು ಅತಿಯಾಗಿರುವದೆಂದೂ ಸರಕಾರದವರು ವೈದ್ಯರ ಸಹಾಯ
ನಿರೀಕ್ಷಿಸುತ್ತಿದ್ದಾರೆಂದೂ ನಾನು ಕೇಳಿದ್ದೇನೆ.

ಚಳಿಜ್ವರವು ನಿಜವಾಗಿಯೂ ಒಂದು ಜಾಗತಿಕ ಸಮಸ್ಯೆ. ಜಗತ್ತಿನ ಒ
ಮೂರಾಂಶದಷ್ಟು ಜನತೆಯು ಚಳಿಜ್ವರದಿಂದ ಬಳಲುತ್ತಿದೆ. ಚಳಿಜ್ವರವ
ಹೋಗಲಾಡಿಸಲಿಕ್ಕಾಗಲಿ ಅದು ಬಾರದಂತೆ ಮಾಡುವದಕ್ಕಾಗಲಿ ಕ್ವಿನಿನ್ ಔಷಧ
ಅತ್ಯವಶ್ಯವೆಂದು ಹಿಂದು ಜನಾಂಗಕ್ಕೆಲ್ಲ ತಿಳಿದದ್ದಾಗಿದೆ. ಹಿಂದೂಸ್ತಾನದಲ್ಲಿ ಹ
ಕೋಟಿ ಜನರು ಔಷಧೋಪಚಾರವಿಲ್ಲದೆ ಚಳಿಜ್ವರದಿಂದ ಬಳಲುತ್ತಿರುವರೆಂ
ಎಂಬತ್ತುಲಕ್ಷ ಜನರು ಪೂರ್ತಿಯಾಗಿ ಇಲ್ಲವೆ ಅರ್ಧ ಮರ್ಧ ಔಷದೋಪಚ
ಹೊಂದುತ್ತಿರುವರೆಂದೂ ಅಂದಾಜು ಮಾಡಲಾಗಿದೆ. ಕ್ವಿನಿನ್ನು ಬಹಳ ತುಟ್ಟಿಯಿ
ಹಿಂದೂಸ್ಥಾನದಲ್ಲಿ ಎಲ್ಲರೂ ಕೊಂಡುಕೊಳ್ಳುವದು ಶಕ್ಯವಿಲ್ಲ. *ಯುದ್ಧಕಾ
ದಲ್ಲಂತೂ ಅದರ ಬೆಲೆ ಮಿತಿಮೀರಿ ಏರುತ್ತಿದೆ. ಆದ್ದರಿಂದ ಕ್ವಿನಿನ್ನಿನ ಬದಲ
ಮತ್ತೊಂದು ಅಷ್ಟೇ ಪರಿಣಾಮಕಾರಿಯಾದ ಔಷಧಗಳನ್ನು ಶೋಧಿಸಿ ತೆಗೆಯು
ಕ್ರಮ ಅಗತ್ಯವಲ್ಲವೆ?

ಆಯುರ್ವೇದ ವೈದ್ಯರು ಅನುಭವಪಡೆದು ತಮ್ಮ ನೈಪುಣ್ಯವನ್ನು ತೋ
ಸಲೂ ತಮ್ಮ ವೈದ್ಯಪದ್ಧತಿಯ ಶ್ರೇಷ್ಠತೆಯನ್ನು ಪ್ರಸ್ಥಾಪಿಸಲೂ ಇದು ತಕ್ಕ ಸಮ
ವಾಗಿದೆ. ಆಯುರ್ವೇದಿಗಳು ಇಂಥ ಸುಸಂಧಿಯನ್ನು ಕಳೆದುಕೊಳ್ಳಲಾಗದು
"ತ್ರಿದೋಷ ಪದ್ಧತಿ" ಹಾಗೂ "ರಸವೀರ್ಯವಿಪಾಕ ಪ್ರಭಾವ" ಇವುಗಳ
ಕುರಿತು ಸಂಶೋಧನ ಕಾರ್ಯವು ನಡೆದರೆ ಇದರ ಫಲವಾಗಿ ಆಯುರ್ವೇದ
ಒಂದು ಶಾಸ್ತ್ರವಿದೆಯೆಂದು ಸಪ್ರಮಾಣವಾಗಿ ಸಿದ್ಧವಾಗಬಹುದಾಗಿದೆಯೆಂ
ಆಯುರ್ವೇದ ಹಾಗೂ ಪಾಶ್ಚಾತ್ಯ ವೈದ್ಯಶಾಸ್ತ್ರಗಳ ತುಲನಾತ್ಮಕ ಅಭ್ಯಾಸಿಗ
ಅಭಿಪ್ರಾಯ ಪಟ್ಟಿರುತ್ತಾರೆ. ಆಯುರ್ವೇದದ ಈ ಮೂಲಭೂತ ತತ್ವಗಳಿಗನು
ಸವಾಗಿ ಸಂಶೋಧನೆ ನಡೆದರೆ ಮಾತ್ರ ಆಯುರ್ವೇದದ ಪ್ರಗತಿಯಾಗುತ್ತ

ಇಲ್ಲದಿದ್ದರೆ ಪಾಶ್ಚಾತ್ಯ ವೈದ್ಯಶಾಸ್ತ್ರಕ್ಕೇ ಆ ಲಾಭವಾಗುವದು. ಆದ್ದರಿಂದ ಆಯುರ್ವೇದಿಗಳಿಗೆ ಈ ತರಹದ ಸಂಶೋಧನಾ ಕಾರ್ಯವನ್ನು ಒಪ್ಪಿಸಿ ತಕ್ಕ ಅನುಕೂಲತೆಗಳನ್ನೆಲ್ಲ ಒದಗಿಸಿಕೊಡಬೇಕೆಂದು ಮತ್ತೊಮ್ಮೆ ಒತ್ತಿ ಹೇಳುತ್ತೇನೆ. ಮೇಲಿನ ವಿವರಗಳಿಂದ ಸ್ಪಷ್ಟವಾಗುವ ಒಂದು ಸಂಗತಿ ಇದು. ಆಯುರ್ವೇದವು ಒಂದು ಶಾಸ್ತ್ರವಾಗಿದೆ; ಅಲ್ಲದೆ ನಮ್ಮ ದೇಶದ ಜನತೆಯ ರೋಗನಿವಾರಣೆಗೆ ಅದು ಸಮರ್ಥವಾಗಿದೆ.* ಆಯುರ್ವೇದವನ್ನು ಮೊದಲು ಉಪವಾಸ ಕೆಡವಿದರು, ಆ ಮೇಲೆ ಅದು ಬಲಹೀನವಾಗಿದೆ ಎಂದು ಹೇಳುತ್ತಿದ್ದಾರೆ. ಇದು ಯೋಗ್ಯವೇ ? ಪಾಶ್ಚಾತ್ಯ ವೈದ್ಯ ಪದ್ಧತಿಗಳು ಜಗತ್ತಿನ ತುಂಬೆಲ್ಲ ಹಬ್ಬಿ ಉನ್ನತಿ ಪಡೆಯುತ್ತಿರುವಾಗ ನಮ್ಮ ಆಯುರ್ವೇದವು ಚಿಕ್ಕಪುಟ್ಟ ಆಸ್ಪತ್ರೆಗಳನ್ನೂ ಹಳ್ಳಿಯ ವೈದ್ಯರನ್ನೂ ಆಶ್ರಯಿಸಿ ಹೇಗೋ ಬದುಕಬೇಕಾಗಿದೆ. ಕಠಿಣ ರೋಗವೊಂದು ಗುಣಪಟ್ಟರೆ ರೋಗಪರೀಕ್ಷೆಯ ಬಗ್ಗೆ ಜನರು ಇನ್ನೂ ಸಂಶಯಿತರಾಗಿಯೇ ಇರುತ್ತಾರೆ !

ಆದಕಾರಣ ದೊಡ್ಡ ಪ್ರಮಾಣದಲ್ಲಿ ಪ್ರಯೋಗಗಳನ್ನು ನಡೆಸಿ ಅನುಭವ ಪಡೆದು ಅದರ ಫಲಿತಾಂಶಗಳನ್ನು ಕ್ರಮಬದ್ಧವಾಗಿ ಪ್ರಕಟಿಸಿ ಜನತೆಯ ಮುಂದಿಡಬೇಕು. ಅಂದರೆ ಮಾತ್ರ ಜನತೆಗೆ ಆಯುರ್ವೇದದ ಶಕ್ತಿ ಸಾಮರ್ಥ್ಯಗಳ ಬಗ್ಗೆ ಮನಗಾಣಿಕೆಯಾಗುವದು. ಬೇರೆ ಬೇರೆ ಪ್ರದೇಶಗಳಲ್ಲಿರುವ ಆಯುರ್ವೇದದ ಔಷಧಾಲಯುಗಳು ತಮ್ಮ ತಮ್ಮ ಪ್ರಯೋಗಗಳನ್ನು ಹಾಗೂ ಅನುಭವಗಳನ್ನು ಕುರಿತು ಪರಸ್ಪರ ವಿಚಾರವಿನಿಮಯಮಾಡುತ್ತ ಹೋದರೆ ನಾವು ಎಷ್ಟೋ ಮಹತ್ವದ ಪ್ರಶ್ನೆಗಳನ್ನು ಬಿಡಿಸಿದಂತಾಗುವದು. ಆದ್ದರಿಂದ ಆಯುರ್ವೇದದ ಔಷಧಾಲಯಗಳೂ ಸ್ವತಂತ್ರವಾಗಿ ಉದ್ಯೋಗ ಮಾಡುತ್ತಿದ್ದ ವೈದ್ಯರೂ ಸುಸಂಘಟಿತರಾಗಿ " ಪಂಚಕರ್ಮ " " ರಸಕಲ್ಪ " ಮುಂತಾದ ವನಸ್ಪತ್ಯೌಷಧಗಳನ್ನು ಉಪಯೋಗಿಸಿ ಅವುಗಳಿಂದಾಗುವ ಪರಿಣಾಮಗಳನ್ನು ಅಭ್ಯಸಿಸಬೇಕು. ಒಂದು ವರುಷದಲ್ಲಿ ನಾವು ಹೀಗೆ ಪಡೆದ ಅನುಭವಗಳನ್ನೆಲ್ಲ ಕಲೆ ಹಾಕಿ ಬರೆದಿಟ್ಟು ಮುಂದಿನ ಆಯುರ್ವೇದ ಸಮ್ಮೇಲನದಲ್ಲಿ ಅವುಗಳನ್ನು ಚರ್ಚಿಸಿ ಏನಾದರೂ ಬದಲಾವಣೆಗಳನ್ನು ಮಾಡಬೇಕೆನಿಸಿದರೆ ಹಾಗೆ ಮಾಡಿ ಫಲಿತಾಂಶಗಳನ್ನು ಲೋಕೋಪಕಾರಕ್ಕಾಗಿ ಪ್ರಕಟಿಸುತ್ತ ಹೋಗಬೇಕು. ಮೈಸೂರು ಹಾಗೂ ಕರ್ನಾಟಕ ಪಾಂತಗಳಲ್ಲಿ ಇದಿಷ್ಟು ಕಾರ್ಯವನ್ನು ಈ ಸಮ್ಮೇಲನವು ಸಾಧಿಸಿದ್ದಾದರೆ ಉಳಿದ ಪ್ರಾಂತಗಳಿಗೆ ಒಂದು ಆದರ್ಶ ಪಾಠವನ್ನು ಕಲಿಸಿದಂತೆಯೇ ಸರಿ.

ಈಗಿದ್ದ ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ಆಯುರ್ವೇದದ ಎಲ್ಲ ಔಷಧಾಲಯುಗಳೂ ಸ್ವತಂತ್ರವಾಗಿ ಉದ್ಯೋಗ ನಡೆಸುತ್ತಿರುವ ವೈದ್ಯರೂ ಕೂಡಿ ಒಟ್ಟಾಗಿ ಪ್ರಯತ್ನಿಸಬೇಕು.

ಐತಿಹಾಸಿಕ ಪ್ರಸಿದ್ಧಿಯುಳ್ಳ ಮೈಸೂರಿಗೆ ನನ್ನನ್ನು ಆಮಂತ್ರಿಸಿದ್ದಕ್ಕಾಗಿ ಹೃತ್ಪೂರ್ವಕವಾಗಿ ತಮಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ನಾಡಿನ ಇತಿಹಾಸ ಹಾಗೂ ಪ್ರಾಚೀನ ವೈಭವಾತಿಶಯಗಳನ್ನು ಅನೇಕರು ಅನೇಕ ಬಗೆಯಾಗಿ ಹಾಡಿ ಹೊಗಳಿದ್ದಾರೆ. ಎಲ್ಲ ಹೊಗಳಿಕೆಗೂ ಈ ನಾಡು ಅರ್ಹವಾಗಿದೆ. ನಾನು ಹೊಗಳಲು ಪ್ರಯತ್ನಿಸಿದರೆ ಹಿಂದಿನವರಿಗಿಂತ ಹೆಚ್ಚಿಗೇನನ್ನೂ ಹೇಳಲಾರೆನಾದ್ದರಿಂದ ಮೌನವಾಗಿಯೇ ನಿಮ್ಮ ಸ್ತುತಿಗೆಯ್ಯುತ್ತೇನೆ. ನಿಮ್ಮ ಮಾತೃಭಾಷೆಯಲ್ಲಿಯೇ ಮಾತನಾಡಿದ್ದರೆ ನನಗೆ ಬಹು ಸಂತೋಷವಾಗುತ್ತಿತ್ತು. ತಾಯ್ನುಡಿಯಲ್ಲಿ ಸ್ವಚ್ಛಂದವಾಗಿ ವಿಚಾರವಿನಿಮಯ ಮಾಡಿದ್ದರೆ ನಮ್ಮಲ್ಲಿ ಉಂಟಾದ ಪ್ರೇಮಮೈತ್ರಿಗಳು ಹೆಚ್ಚು ಬಲಪಡುತ್ತಿ ನಿಮ್ಮ ಸೇವೆಯನ್ನು ಇದಕ್ಕೂ ಹೆಚ್ಚಾಗಿ ಮಾಡಿದಂತಾಗುತ್ತಿತ್ತು. ನನ್ನ ಮಿತ್ರರೂ ವಿದ್ವಾಂಸರೂ ಆದ ಹುಬ್ಬಳ್ಳಿಯ ವೈದ್ಯರಾಜ ಬುರ್ಲಿಯವರು ಬರೆದ "ಹಳ್ಳಿ ವೈದ್ಯ" ಎಂಬ ಗ್ರಂಥವನ್ನು ಪ್ರಕಟಿಸಿ ನಿಮ್ಮ ಭಾಷೆಯ ಬಗ್ಗೆ ಇರುವ ನನ್ನ ಆದರವನ್ನು ಹಿಂದಕ್ಕೇ ವ್ಯಕ್ತಮಾಡಿದ್ದೇನೆ. ಈ ಪುಸ್ತಕಕ್ಕೆ ಕನ್ನಡ ಜನತೆಯು ಸಾಕಷ್ಟು ಪ್ರೋತ್ಸಾಹನೆಯನ್ನು ಕೊಟ್ಟದ್ದರಿಂದ "ಸುಲಭ ಆಯುರ್ವೇದ ಸಂಗ್ರಹ" ಎಂಬ ಅವರ ಇನ್ನೊಂದು ಪುಸ್ತಕವನ್ನು ಪ್ರಸಿದ್ಧಿಸುವ ಆಲೋಚನೆಯಲ್ಲಿದ್ದೇನೆ. ಮರಾಠಿಯ ಮಾಸಿಕ ಪತ್ರಿಕೆಯಾದ "ಆರೋಗ್ಯಮಂದಿರ" ವನ್ನು ಕನ್ನಡದಲ್ಲಿ ಪ್ರಕಟಿಸುತ್ತಿದ್ದೇನೆ. ನಾನು ಕನ್ನಡದಲ್ಲಿಯೇ ಭಾಷಣ ಮಾಡಿದ್ದರೆ ಒಳಿತಾಗುತ್ತಿತ್ತು. ಆದರೆ ಅದು ಸಾಧ್ಯವಿಲ್ಲದ ಮೂಲಕ ನನ್ನ ಭಾಷಣದ ಕನ್ನಡದ ಅನುವಾದವನ್ನು ಓದಿಸಿ ನಾನು ತೃಪ್ತಿಪಡಬೇಕಾಗಿದೆ.

ಮಹನೀಯರೇ, ನೀವು ಈ ಆಯುರ್ವೇದ ಪ್ರದರ್ಶನವನ್ನು ಚಿತ್ತಾಕರ್ಷಕವಾಗುವಂತೆ ಏರ್ಪಡಿಸಿರುವಲ್ಲಿ ಬಹಳ ಶ್ರಮಪಟ್ಟಿರಲು ಸಾಕು. ನಿಮ್ಮ ಶ್ರಮಕ್ಕೆ ತಕ್ಕಂತೆ ಅದು ಉದ್ಬೋಧಕವೂ ಮನೋರಂಜಕವೂ ಆಗಿರುವಲ್ಲಿ ಸಂಶಯವಿಲ್ಲ. ನಾನು ಇದರ ಉದ್ಘಾಟನೆಯನ್ನು ಮಾಡಲು ತಕ್ಕವನಲ್ಲದಿದ್ದರೂ ನೀವು ತೋರಿದ ಪ್ರೀತಿ ವಿಶ್ವಾಸಗಳೇ ನನ್ನನ್ನು ಈ ಕಾರ್ಯಕ್ಕೆ ಪ್ರೇರೇಪಿಸಿವೆ. ನನ್ನನ್ನು ಇಲ್ಲಿ ಆಮಂತ್ರಿಸಿದ್ದಕ್ಕಾಗಿ ತಮಗೆ ಮತ್ತೊಮ್ಮೆ ನನ್ನ ಹಾಗೂ ನನ್ನ ಸಂಸ್ಥೆಯ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸಿ ಇದೀಗ ಈ ಪ್ರದರ್ಶನದ ಉದ್ಘಾಟನೆಯಾಯಿತೆಂದು ಎಲ್ಲರಿಗೂ ತಿಳಿಸುತ್ತೇನೆ.

भिषजां साधुवृत्तानां भद्रमागमशालिनाम् ।
अभ्यस्तकर्मणां भद्रं भद्रं भद्राभिलाषिणां ॥

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941

ಸ್ವಾಗತಸಮಿತಿಯ ಕಾರ್ಯನಿರ್ವಾಹಕಶಾಖೆಗಳ ಅಧ್ಯಕ್ಷರುಗಳು.



ಶ್ರೀ॥ ಎನ್. ನಾಗೇಶರಾಯರು, M.A.,
ಲೆಕ್ಚರರ್, 'ಇಂಟರ್‌ಮಿಡಿಯೆಟ್ ಕಾಲೇಜ್,
ಮೈಸೂರು.

(ಪ್ರದರ್ಶನಶಾಖಾ)



ಆಯುರ್ವೇದವಿದ್ವಾನ್ ವಿ. ಬಿಳಿಗಿರಿ ಆಯ್ಯಂಗಾರ್,
ಸೀನಿಯರ್ ಪಂಡಿತ್,
ಗ॥ ಆಯುರ್ವೇದಿಕ್ ಕಾಲೇಜ್, ಮೈಸೂರು.

(ಪ್ರಬಂಧಶಾಖಾ)



ಶ್ರೀ॥ ಕೆ. ಪಿ. ಪುರಾಣಿಕ್,
ಪ್ರೊ॥ ಶ್ರೀ ಧನ್ವಂತರಿ ವೈದ್ಯಶಾಲಾ,
ಮೈಸೂರು.

(ವಸತಿ ಮತ್ತು ಸಭಾನಿರ್ವಾಹಶಾಖಾ)

ತಾ|| ೨೯-೧೨-೯೪೧ ನೇ ಸೋಮವಾರದ ದಿವಸ

ಬೆಳಿಗ್ಯೆ ೮—೧೧ ಗಂ. ವರಿಗೆ ದ್ರವ್ಯಸಂಭಾಷಾಪರಿಷತ್

ಅಧ್ಯಕ್ಷರು—ಶ್ರೀಮಾನ್ ಆಯುರ್ವೇದ ಭೂಷಣ ಎಂ. ವಿ. ಶಾಸ್ತ್ರಿಗಳು.
ಪ್ರೊಪ್ರೈಟರ್—ಗೋಪಾಲಭೈಷಜ್ಯಾಶ್ರಮ, ಮಂಗಳೂರು—ರವರು.

ಆರಂಭಭಾಷಣಕಾರರು—ಶ್ರೀಮಾನ್ ಪಿ. ಆರ್. ರಂಗನಾಥನಾಯಕರು,
ಆ|| ವಿದ್ವಾನ್, ಎಲ್.ಎ.ಎಂ.ಎಸ್. ಇತ್ಯಾದಿ,
ಆಯುರ್ವೇದ ವೈದ್ಯರು—ರಾಣೇಬೆನ್ನೂರುರವರು.

ಪ್ರಬಂಧಗಳು, ಭಾಷಣಗಳು ಮತ್ತು ಚರ್ಚೆಗಳು —ವೈದ್ಯಸದಸ್ಯರಿಂದ.

ಉಪಸಂಹಾರ ಭಾಷಣಗಳು—ಪರಿಷತ್ತಿನ ಅಧ್ಯಕ್ಷರಿಂದ.

ವಂದನಾಸಮರ್ಪಣೆ—ಸ್ವಾಗತಕಮಿಟಿಯಿಂದ.

---

೧೧-೩೦ ರಿಂದ ಮ ೧.ರ ವರಿಗೆ—ಭೋಜನವ್ಯವಸ್ಥೆ—

(ಶ್ರೀ ಡಾ|| ಹೆಚ್. ವಿ. ಸವಣೂರ್‌ರವರ ಷಷ್ಟ್ಯಬ್ದಪೂರ್ತಿಯ
ಸಂತೋಷಾರ್ಥವಾಗಿ)

---

ಮ. ೨-೩೦—೫-೩೦ ರವರಿಗೆ ರಸಾಯನ ಸಂಭಾಷಾಪರಿಷತ್.

ಅಧ್ಯಕ್ಷರು —ಶ್ರೀಮಾನ್ ವೈದ್ಯ ಬಿ. ಆರ್. ಹರಿದಾಸ್‌ರವರು.
ಪ್ರೊಪ್ರೈಟರ್—ಶ್ರೀ ಸಮರ್ಥ ಆಯುರ್ವೇದಿಕ್ ಫಾರ್ಮಸಿ-ಮಂಗಳೂರು.

ಆರಂಭಭಾಷಣಕಾರರು—ಶ್ರೀ ಆ|| ವಿದ್ವಾನ್ ಎಲ್. ನರಸಿಂಹಮೂರ್ತಿ
ಎಲ್.ಎ.ಎಂ.ಎಸ್,
ಪ್ರೊಪ್ರೈಟರ್—ಶ್ರೀ ಲಕ್ಷ್ಮೀನರಸಿಂಹವೈದ್ಯಶಾಲಾ, ತುಂಕೂರು, ರವರು

ಉಪಭಾಷಣಕಾರರು - ಶ್ರೀ ಪಂ॥ ತತ್ವವಾದಿ ಚಿಕ್ಕಸುಬ್ಬಣ್ಣಾಚಾರ್ಯರು

ಪ್ರೊಪ್ರೈಟರ್—ಡಿ॥ ಬೋರ್ಡ್ ವೈದ್ಯಶಾಲಾ-ನಂದಿ,

ಪ್ರಬಂಧಗಳು, ಭಾಷಣಗಳು ಮತ್ತು ಚರ್ಚೆಗಳು—ವೈದ್ಯಸದಸ್ಯರಿಂದ

ಉಪಸಂಹಾರಭಾಷಣ— ಪರಿಷತ್ತಿನ ಅಧ್ಯಕ್ಷರಿಂದ.

ವಂದನಾಸಮರ್ಪಣೆ— ಸ್ವಾಗತಸಮಿತಿಯಿಂದ.

---

ಸಾಯಂಕಾಲ ೬ ರಿಂದ ೭-೩೦ ರ ವರಿಗೆ

ಯೋಗಸಾಧನೆಯಪ್ರದರ್ಶನ—ಆಯುರ್ವೇದ ದೃಷ್ಟ್ಯಾ,

ಶ್ರೀಮಾನ್ ಶ್ರೀರಂಗರವರು, ಯೋಗಾ

ಧ್ಯಕ್ಷರು—ಹೆಡತಲೆ, ರವರಿಂದ.

೮-೪೫ ರಿಂದ ೧೧-೩೦ ರ ವರೆಗೆ ವಿಷಯ ನಿರ್ಧಾರಣಸಮಿತಿ —

(ನಿ. ಕ. ಆ. ಮಂಡಲದ ಮತ್ತು ಮೈಸೂರು ಸಂಸ್ಥಾನದ ಪ್ರಸ್ತಾವಗ

ಕುರಿತು) (ಅಧ್ಯಕ್ಷರು ಮತ್ತು ಚುನಾಯಿತ ಪ್ರತಿನಿಧಿಗಳೂ

---

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941

ಸ್ವಾಗತಸಮಿತಿಯ ಕಾರ್ಯನಿರ್ವಾಹಕಶಾಖೆಗಳ ಅಧ್ಯಕ್ಷರುಗಳು.



ಶ್ರೀಮಾನ್ ಕೆ. ಧನಕೋಟಿಶೆಟ್ಟರವರು,
ಮರ್ಚೆಂಟ್, ಮೈಸೂರು.
(ಆರ್ಥಿಕಶಾಖಾ)



ಶ್ರೀಮಾನ್ ಎಂ. ಜಿ. ಶಿಂಗ್ರಯ್ಯಂಗಾರ್ಯರು,
ರಿ॥ ಅಸಿಸ್ಟೆಂಟ್ ಇಂಜಿನಿಯರ್, ಮೈಸೂರು.
(ಉಪಚಾರಶಾಖಾ)



ವಿದ್ವಾನ್ ಕೆ. ಶ್ರೀಪಾದಾಚಾರ್ಯರು, ಎಂ.ಎ.,
ಲೆಕ್ಚರರ್, ಟ್ರೈನಿಂಗ್ ಕಾಲೇಜ್, ಮೈಸೂರು.
(ಸರ್ವಸಾಮಾನ್ಯವಿಚಾರಣಾಶಾಖಾ)

## ೨೯-೧೨-೧೯೪೧ನೇ ಸೋಮವಾರದ ದಿವಸ

**ಈದಿನ ಬೆಳಿಗ್ಗೆ ೮—೧೧ ರ ವರೆಗೆ ದ್ರವ್ಯಸಂಭಾಷಾಪರಿಷತ್.**

ಮಂಗಳೂರಿನ ಗೋಪಾಲಭೇಷಜಾಶ್ರಮದ ಸಂಚಾಲಕರಾಗಿ ಸುಪ್ರಸಿದ್ಧ ವೈದ್ಯರಾದ **ಆಯುರ್ವೇದಭೂಷಣ ಎಂ. ವಿ. ಶಾಸ್ತ್ರಿಗಳವರ** ಅಧ್ಯಕ್ಷತೆಯಲ್ಲಿ ಈ ಪರಿಷತ್ತು ಪ್ರಾರಂಭವಾಯಿತು.

ಪದ್ಧತಿಯ ಪ್ರಕಾರ ಶ್ರೀಧನ್ವಂತರಿ ಪ್ರಾರ್ಥನೆಯಾದ ನಂತರ, ರಾಣೀಬೆನ್ನೂರು ನಿವಾಸಿಗಳಾದ ಆಯುರ್ವೇದವಿದ್ವಾನ್ **ಪಿ. ಆರ್. ರಂಗನಾಥನಾಯಕ** ರವರು ಎಲ್.ಎ.ಎಂ.ಎಸ್. ರ ವಿಚಾರಪೂರಿತವಾದ ಆರಂಭಭಾಷಣವು ಜರುಗಿತು.

ತರುವಾಯ ಪರಿಷತ್ತಿನ ಅಧ್ಯಕ್ಷರು ಸಭಿಕರ ಉತ್ಸಾಹವನ್ನು ಇಮ್ಮಡಿಗೊಳಿಸುತ್ತಾ ತಮ್ಮ ನೈಜವಾದ ವಿನೋದಸರಣಿಯಿಂದ ತಮ್ಮ ಸುಶ್ರಾವ್ಯವಾದ ಮತ್ತು ವಿಷಯಗರ್ಭಿತವಾದ ಭಾಷಣವನ್ನು ಮಾಡಿ ಸಭಿಕರಿಗೆ ಅವರಿಗೆ ಬೇಕಾದ ಅಂಶಗಳ ಮೇಲೆ ಚರ್ಚೆ ನಡೆಸಲು ಅವಕಾಶಕೊಟ್ಟರು.

ಈ ಪರಿಷತ್ತಿಗೆ ಸಂಬಂಧಿಸಿದಂತೆ ಪ್ರಬಂಧಗಳು, ಭಾಷಣಗಳು ಮತ್ತು ಚರ್ಚೆಗಳೂ ನಡೆದವು. ಉಪಯುಕ್ತ ತರ್ಕಗಳಾದ ಮೇಲೆ ಪುಷ್ಪಹಾರ ವಿನಿಯೋಗ ಮತ್ತು ವಂದನಾರ್ಪಣೆಯೊಡನೆ ಆಗಿನ ಸಭೆಯು ಮುಕ್ತಾಯವಾಯಿತು.

---

**ಈ ದಿನ ಮಧ್ಯಾಹ್ನ ೧೧-೩೦—ಮ. ೧ರ ವರಿಗೆ.**

ಜ್ಞಾನವೃದ್ಧರಾಗಿಯೂ, ವಯೋವೃದ್ಧರಾಗಿಯೂ, ಈ ನಿ. ಕ. ಆ ಮಂಡಳದ ಸ್ಥಾಪಕರಾಗಿಯೂ ಇರುವ **ಡಾ|| ಎಚ್. ವಿ. ಸವಣೂರ್, ಬೆಳಗಾಂ** ಇವರ **ಷಷ್ಟ್ಯಬ್ದಶಾಂತಿಯ** ಮರ್ಯಾದಾರ್ಥವಾಗಿ ಸ್ವಾಗತಸಮಿತಿಯಿಂದ ಭೋಜನಕೂಟವು ಏರ್ಪಟ್ಟಿದ್ದಿತು. ಸರ್ವರೂ ಆ ಸಂತೋಷಕೂಟದಲ್ಲಿ ಭಾಗಿಗಳಾಗಿ **ಶ್ರೀಯುತರಿಗೆ** ಆಯುರಾರೋಗ್ಯಗಳನ್ನು ಕೋರಿ, ಅವರು ಮಾಡಿರುವ ಮತ್ತು ಮಾಡುತ್ತಿರುವ ಆಯುರ್ವೇದ ಸೇವೆಯನ್ನು ಹೃತ್ಪೂರ್ವಕವಾಗಿ ಶ್ಲಾಘಿಸಿದರು.

---

## ೨೯-೧೨-೧೯೪೧ನೇ ಸೋಮವಾರದ ದಿವಸ

**ಮಧ್ಯಾಹ್ನ ೨-೩೦ ರಿಂದ ೫-೩೦ರ ವರೆಗೆ ರಸಾಯನಸಂಭಾಷಾಪರಿ** ಪ್ರಾರಂಭವಾಯಿತು.

ಮಂಗಳೂರಿನ ಶ್ರೀಸಮರ್ಥ ಆಯುರ್ವೇದಿಕ್ ಫಾರ್ಮಸಿಯ ಒಡೆಯ ಪ್ರಸಿದ್ಧ ವೈದ್ಯರು **ಶ್ರೀಯುತ ಬಿ. ಆರ್. ಹರಿದಾಸ್**ರವರು ಅಧ್ಯಕ್ಷತೆಯ ವಹಿಸಿದರು.

ದೇವತಾಪ್ರಾರ್ಥನೆಯಾದ ನಂತರ ತುಂಕೂರಿನ ಶ್ರೀ ಲಕ್ಷ್ಮೀನೃ ವೈದ್ಯಶಾಲಾಧ್ಯಕ್ಷರಾದ ಆಯುರ್ವೇದವಿದ್ವಾನ್ ಎಲ್. ನರಸಿಂಹಮೂ ಎಲ್.ಎ.ಎಂ.ಎಸ್. ರವರು ಆರಂಭಭಾಷಣಮಾಡಿ 'ರಸಾಯನ' ವೆಂಬು ಶಾಸ್ತ್ರೀಯದೃಷ್ಟ್ಯಾ ಮತ್ತು ಸಾಮಾನ್ಯದೃಷ್ಟ್ಯಾ ಅರ್ಥವಿವರಣೆಯನ್ನು ಉದಾ ಣಪೂರ್ವಕ ವಿವರಿಸಿದರು.

ನಂದಿಯ ಪಂಡಿತರಾದ ಶ್ರೀಮಾನ್ ತತ್ವವಾದಿ ಚಿಕ್ಕಸುಬ್ಬಣ್ಣಾಚಾರ್ಯರು ಉಪಭಾಷಣ ಮಾಡಿ ರಸಗಂಧಕಾದಿ ಧಾತುಗಳ ಪ್ರಾಶಸ್ತ್ಯವನ್ನೂ, ಯುಕ್ತ ಅನುಷ್ಠಾನಮಾಡಿದರೆ ಅವುಗಳಿಂದಾಗುವ ಮಹತ್ಪ್ರಯೋಜನವನ್ನೂ, ಅಯೋಗ ದಾಗುವ ಕಷ್ಟಗಳನ್ನೂ ವಿಶದಪಡಿಸಿ, ನೆರೆದಿದ್ದ ವೈದ್ಯರಿಗೆ ಪ್ರತ್ಯಕ್ಷಪ್ರದರ್ಶ ಮೂಲಕ ಅನೇಕ ಉಪಯುಕ್ತ ವಿಚಾರಗಳನ್ನು ವಿವರಿಸಿದರು.

ತರುವಾಯ ಪರಿಷದಧ್ಯಕ್ಷರು ಸಭಿಕರ ಸಂತೋಷಧ್ವನಿಯ ಮಧ್ಯೆ ಎ ನಿಂತು ತಮ್ಮ ಅಧ್ಯಕ್ಷಭಾಷಣವನ್ನು ಮಾಡಲುಪಕ್ರಮಿಸಿದರು.

ಇವರಿಗೆ ಅಧ್ಯಕ್ಷತೆಯನ್ನು ವಹಿಸಬೇಕೆಂಬ ಪ್ರಾರ್ಥನೆಯು ಕೆಲವು ಆಸ ರ್ಯಗಳಿಂದ ಸಾಕಾದಷ್ಟು ಮುಂಚಿತವಾಗಿ ತಲುಪದೆ, ಅವರ ಭಾಷಣವ ಮೊದಲೇ ಬರೆದಿಡಲು ಅವರಿಗೆ ಆಗದೆ ಹೋದಾಗ್ಯೂ, ಅವರು ಈ ಅನಿವಾರ್ಯಕ ಹಿಂತೆಗೆಯದೆ ದಕ್ಷತೆಯಿಂದ ಕಾರ್ಯನಿರ್ವಾಹ ಮಾಡಿದರು. ಧಾತುವರ್ಗದ ವಿಚಾ ವನ್ನೆತ್ತಿ ಅವುಗಳಲ್ಲಿ ಕೆಲವು ಉದಾಹರಣೆಗಳೊಡನೆ ಪೌರ್ವಾತ್ಯ ಪಾಶ್ಚಾತ್ಯದೃಷ್ ತುಲನಾತ್ಮಕ ಗುಣದೋಷಗಳನ್ನು ಸ್ಪಷ್ಟಪಡಿಸಿ ಆಯುರ್ವೇದರೀತ್ಯಾ ನಡೆಯ ಧಾತುಗಳ ಚಿಕಿತ್ಸೆಯ ಆಧಿಕ್ಯವನ್ನು ವ್ಯಕ್ತಗೊಳಿಸಿದರು.

ಇದೇ ವಿಚಾರದ ಮೇಲೆ ಪ್ರಬಂಧಗಳೂ ಭಾಷಣಗಳೂ ಜರುಗಿದವು.

ಶ್ರೀ

॥ ಧನ್ವಂತರಯೇನಮಃ ॥

12ನೇ ನಿಖಿಲಕರ್ನಾಟಕದ ಮತ್ತು ಮೈಸೂರು ಸಂಸ್ಥಾನದ 1ನೇ ಆಯುರ್ವೇದ ಸಮ್ಮೇಳನದಲ್ಲಿ ನಡೆದ

# ದ್ರವ್ಯಸಂಭಾಷಾಪರಿಷತ್ತಿನ ಆರಂಭ ಭಾಷಣ.

**(ಡಾ॥ ಪಿ. ಆರ್. ರಂಗನಾಥನಾಯಿಕ L.A.M.S., A.L.I.M., A.V. ರಾಣೇಬೆನ್ನೂರರಿಂದ)**

---

ಸನ್ಮಾನ್ಯ ಸ್ವಾಗತಸದಸ್ಯರೇ ಮತ್ತು ಒಲವಿನ ವ್ಯವಸಾಯ ಬಂಧುಗಳೇ,

ಸಮ್ಮೇಲನಗಳ ಅಂಗಭೂತವಾಗಿ ನಡೆಯಲಿರುವ "ದ್ರವ್ಯಸಂಭಾಷಾಪರಿಷತ್ತಿನ" ಪ್ರಾರಂಭೋತ್ಸವವನ್ನು ನಡೆಸಲು ನನ್ನ ಆರಿಸಿದ್ದು, ನನ್ನಲ್ಲಿ ತಮಗಿರುವ ಪ್ರೀತಿ ವಿಶ್ವಾಸಗಳೇ ಕಾರಣವು.

ದ್ರವ್ಯವಿಜ್ಞಾನದಲ್ಲಿ ನನಗಿಂತ ಹಿರಿಯರೂ, ಜ್ಞಾನವೃದ್ಧರೂ ಆದ ಮಾನ್ಯ ವ್ಯವಸಾಯಿಗಳು ತನ್ನ ನಾಡಿನ ಎಲ್ಲೆಡೆಯಿಂದಲೂ, ಕಲೆತಿರುವಿರಿ. ತಮ್ಮೆದುರು ದ್ರವ್ಯವಿಜ್ಞಾನದಲ್ಲಿ ಓದಲು ಮೊದಲಿಗನಾದ ನಾನು ಪ್ರಾರಂಭೋತ್ಸವವನ್ನು ನೆರವೇರಿಸಲು ಮೊದಲು ಮಾಡಿದ ನನ್ನ ಧಾಷ್ಟ್ಯವನ್ನು ಒಲವಿನ ವ್ಯವಸಾಯಿಗಳು ಮನ್ನಿಸಬೇಕಾಗಿ ಬಿನ್ನಹ.

ಆಯುರ್ವೇದ ಚಿಕಿತ್ಸಾ ಶಾಸ್ತ್ರಕ್ಕೆ ಮೂಲಾಧಾರಗಳಾದ, ಸಸ್ಯಜ, ಖನಿಜ, ಪ್ರಾಣಿಜ ದ್ರವ್ಯ ಮೊದಲಾಗಿ ಸಕಲದ್ರವ್ಯಗಳ ಪ್ರಥಕ್‌ಕರಣಸಮ್ಯಕ್‌ಜ್ಞಾನವು ಅವಶ್ಯವಾಗಿರುವದು. ಭೂದೇಶಕ್ಕೂ ದೇಹದೇಶಕ್ಕೂ ಪರಸ್ಪರ ಸಂಬಂದವಿರುವದು. ಭೂದೇಹದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾದವುಗಳೇ ದೇಹದೇಶಕ್ಕೂ ಸಂಬಂಧಿಸಿರುವವು. ಬ್ರಹ್ಮಾಂಡ ಮತ್ತು ಪಿಂಡಾಂಡಗಳ ಹುಟ್ಟು, ಇರುವು, ಅಳಿವುಗಳು ಒಂದಕ್ಕೊಂದು ಹೊಂದಿಕೊಂಡಿರುವವು. ಒಂದೇ ಶಕ್ತಿಯ ಪ್ರೇರಣೆಯಿಂದ ನಡೆಯುತ್ತಲಿರುವವು.

"ಸಿಸೃಕ್ಷುಭೂತಾನ್ಯಕ್ಷರಭೂತಃ ಸತ್ವೋಪಾದಾನ ಪೂರ್ವತರಮಾಕಾಶಂ ಸೃಜತಿ ತತಃ ಕ್ರಮೇಣ ವ್ಯಕ್ತತರಗುಣಾನ್ ಧಾತೂನ್‌ವಾಯ್‌ವಾದಿಕಾಂಶ್ಚಾತುರಃ, ತಥಾ ದೇಹಗ್ರಹಣೇಽಪಿ ಪ್ರವರ್ತಮಾನಃ." (ಚ. ಶಾ.)

ವಿಸರ್ಗಾದಾನವಿಕ್ಷೇಪ ಸೋಮಸೂರ್ಯನಿಲಾಯಥಾ ।
ಧಾರಯಂತಿ ಜಗದ್ದೇಹಂ ಕಫಪಿತ್ತಾನಿಲಾಸ್ತಥಾ ॥ (ಸು. ಸೂ.)

ಆದುದರಿಂದ ಸಕಲ ದ್ರವ್ಯಗಳ ಸಮ್ಯಕ್‌ಜ್ಞಾನವು ಅವಶ್ಯವಾಗಿರುವ

**ದ್ರವ್ಯಶಬ್ದೋತ್ಪತ್ತಿ**—ಗತ್ಯರ್ಥಕ 'ದ್ರು' ಧಾತುವಿನಿಂದ 'ದ್ರವತ್ಯ ಎಂಬುದಾಗಿರುವದು.

**ದ್ರವ್ಯಸಂಗ್ರಹ ಮತ್ತು ಭೇದ**—' ಖಾದೀನ್ಯಾತ್ಮಾ ಮನಃಕಾಲೋ ದ್ರವ್ಯಸಂಗ್ರಹಃ ! ಸೇಂದ್ರಿಯಂ ಚೇತನಂ ದ್ರವ್ಯಂ ನಿರಿಂದ್ರಿಯಮಚೇತನಮ್.

ಪಂಚಮಹಾಭೂತಗಳು, ಆತ್ಮ, ಮನಸ್ಸು, ಕಾಲ, ದಿಕ್ ವೇ ಗೊಂಡು ದ್ರವ್ಯಗಳು—ಚೇತನ ಮತ್ತು ಅಚೇತವೆಂದು ಎರಡು ವಿಧವಾಗಿ

**ದ್ರವ್ಯಲಕ್ಷಣ**—"ಯತ್ರಾಶ್ರಿತಾಃ ಕರ್ಮಗುಣಾಃ ಕಾರಣಂ ಸಮ ಯತ್ | ತದ್‌ದ್ರವ್ಯಂ." (ಚ. ಸೂ.) "ದ್ರವ್ಯಲಕ್ಷಣಂತು ಕ್ರಿಯಾಗುಣ ಸಮವಾಯಿ ಕಾರಣಮಿತಿ" (ಸು. ಸೂ.)

"ಕ್ರಿಯಾ ಗುಣವತ್ ಸಮವಾಯಿ ಕಾರಣಂ ದ್ರವ್ಯಃ" (ವೈಶೇಷಿಕ

ಕರ್ಮ ಮತ್ತು ಗುಣಗಳ ಸಮವಾಯಿಕಾರಣದಿಂದ ಕಾರ್ಯೋತ್ಪತ್ತಿ ಗುವದೋ ಅದೇ ದ್ರವ್ಯವೆಂದರ್ಥವಾಗುವದು.

ವೈದ್ಯಶಾಸ್ತ್ರದಲ್ಲಿ ದ್ರವ್ಯಶಬ್ದವನ್ನು ಅನೇಕಾರ್ಥದಲ್ಲಿ ಉಪಯೋಗಿಸು ದೇಹೋತ್ಪತ್ತಿಗೆ ಕಾರಣಗಳಾದ ಪಂಚಮಹಾಭೂತಗಳು ಕೂಡ ದ್ರವ್ಯಗಳೇ ರಿಂದ ಅವುಗಳಿಂದ ಆಗುವ ದೇಹದ ಹುಟ್ಟು, ಇರುವೂ, ಅಳಿವುಗಳ ಸೂಕ್ಷ ಸೂಕ್ಷ್ಮಜ್ಞಾನವು ಅತ್ಯವಶ್ಯವಾಗಿರುವದು. "ಸರ್ವದ್ರವ್ಯಂ" "ಪಂಚಭೌತಿ ನ್ನೇವಾರ್ಥೇ" ಎಲ್ಲ ಕಾರ್ಯದ್ರವ್ಯಗಳನ್ನು ಔಷಧಯೋಜನೆಯಲ್ಲಿ ಉಪಯೋ ವರು. ಜಗತ್ತಿನಲ್ಲಿ ಔಷಧೋಪಯೋಗಕ್ಕೆ ಅಯೋಗ್ಯವಾದ ದ್ರವ್ಯವು ದೊ ಲಾರದು.

ವೈದ್ಯಶಾಸ್ತ್ರದಲ್ಲಿ ಚಿಕಿತ್ಸೆಯಲ್ಲಿ ಉಪಯೋಗಿಸುವ, ಜಂಗಮವನ ಪಾರ್ಥಿವದ್ರವ್ಯಗಳು, (ಮಣಿ, ಸುವರ್ಣ, ರಜತ) ಮೊದಲಾದವುಗಳನ್ನು "ದ್ರ ವೆಂಬರ್ಥದಲ್ಲಿ ಹೆಚ್ಚಾಗಿ ಉಪಯೋಗಿಸಿರುವರು. "ಕಿಂಚಿದ್ದೋಷಪ್ರಶಮ ಕಿಂಚಿದ್ಧಾತುಪ್ರದೂಷಣಮ್ ಸ್ವಸ್ಥವೃತ್ತೌ......ತ್ರಿವಿಧಂ ದ್ರವ್ಯಮುಚ್ಯತೆ" ತ್ರಿ ವಿಧಂ ಜಂಗಮೌದ್ಭಿದಪಾರ್ಥಿವಮ್ | ಕೆಲವು ದ್ರವ್ಯಗಳು ದೋಷವನ್ನು ಪ್ರಶಮ

ಳಿಸುವವು, ಕೆಲವು ದೋಷವನ್ನು ಪ್ರಕೋಪಗೊಳಿಸುವವು, ಇನ್ನೂ ಹಲವು ಸ್ವಾಸ್ಥತೆಯಲ್ಲಿರಿಸುವವೆಂದು ಮೂರುವಿಧವಾಗಿರುವುವು. ಅವುಗಳನ್ನೆಲ್ಲ ಜಂಗಮ, ಔದ್ಭಿದ, ಪಾರ್ಥಿವವೆಂದು ಪುನಃ ಮೂರುವಿಧವಾಗಿ ವಿಂಗಡಿಸಿರುವರು. ಗೋರಸ, ಪಿತ್ತ, ವಸಾ, ಮಜ್ಜಾ, ರಕ್ತ, ಮೂತ್ರ, ಮಲ, ಅಸ್ಥಿ, ಶೃಂಗ, ನಖ, ಮೊದಲಾಗಿ ಜಾಂಗಮದ್ರವ್ಯಗಳು. ಲೋಹ, ಸುವರ್ಣ, ಉಪ್ಪು, ಗಂಧಕ ಮೊದಲಾದವು ಪಾರ್ಥಿವದ್ರವ್ಯಗಳು. ಔದ್ಭಿದ ಔಷಧಿಗಳು ಪುನಃ ೪ ಬಗೆಯಾಗಿ ವಿಂಗಡಿಸಲ್ಪಟ್ಟಿರುವವು.—ವನಸ್ಪತಿ, ವೀರುಧಾ, ವಾನಸ್ಪತ್ಯ, ಔಷಧಿ.

ಪ್ರಾಮುಖ್ಯವಾಗಿ ಹಿಂದಿನ ಕಾಲದಲ್ಲಿ ಔದ್ಭಿದ ವರ್ಗಕ್ಕೆ ಸೇರಿದ ಔಷಧಿಗಳನ್ನೇ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ವನಸ್ಪತಿಗಳ ವರ್ಗೀಕರಣ, ಅವುಗಳ ರೂಪಭೇದ, ಗುಣಭೇದಗಳನ್ನು ಹೆಚ್ಚಾಗಿ ತಿಳಿದುಕೊಂಡು ಔಷಧಗಳನ್ನು ತಯಾರಿಸುತ್ತಿದ್ದರು. ಈ ಬಗೆಯಲ್ಲಿ " ವನಸ್ಪತಿಗಳ ವಿಷಯದಲ್ಲಿ ಪ್ರತ್ಯೇಕವಾಗಿ ಅಧ್ಯಯನವನ್ನು ಮಾಡುತ್ತಿದ್ದರು, ೧೦೦ ಮೂಲಿಕೆಗಳನ್ನು ಬಲ್ಲವರಿಗೆ " ಶತಜ್ಞ"ನೆಂದು ಸಂಬೋಧಿಸುತ್ತಿದ್ದರು " ಸಹಸ್ರಜ್ಞ" ಸಾವಿರದ ಜ್ಞಾನವುಳ್ಳವನೆಂದು ಕರೆಯುತ್ತಿದ್ದರು. ಈಗಿನ ಕಾಲದಲ್ಲಿನಂತೆಯೇ, ಆಗ್ಯೂ ವನಸ್ಪತಿ ಶಾಸ್ತ್ರಜ್ಞರು (Botanist) ಇದ್ದರು. ಸಿದ್ಧಾಂತರತ್ನಾಕರದಲ್ಲಿ ವಸಸ್ಪತಿಗಳ ರೋಗಗಳನ್ನು, ಅವುಗಳ ಲಕ್ಷಣ, ನಿವಾರಣೋಪಾಯಗಳನ್ನು ತಿಳಿಸಿದ್ದರಿಂದ ಒಡೆದುಕಾಣುವದು.

ನರಾಣಾಮಿಹ, ವೃಕ್ಷಾಣಾಂ ವಾತಪಿತ್ತಕಫಾಽಽಗದಾಃ ।
ಸಂಭವಂತಿ ಯತಸ್ತಸ್ಮಾತ್ ಕುರ್ಯಾತ್ತದ್ದೋಷನಾಶನಮ್ ।
ಕೃಶೋದೀರ್ಘೋ ಲಘೂರೂಕ್ಷೋ ನಿದ್ರಾಹೀನೋಽಲ್ಪಜೀತನಃ ॥
ನಧತ್ತೆ ಫಲಪುಷ್ಪಾಣಿ, ವಾತಪ್ರಕೃತಿಕಸ್ತರುಃ ।
ಆತಪಾಽಸಹನಃ ಪಾಂಡು ಶಾಖಾಹೀನೊ ಮುಹುರ್ಯದಿ ।
ಅಕಾಲಪಾಕಃ ಸ್ಯಾಚ್ಛಾಖೀ ಸತುಪಿತ್ತಾತ್ಮಕಃ ಕೃಶಃ ॥
ಸಿದ್ಧಂತಿ ಶಾಖಾದಲ ಶಾಖೀ ಸಮ್ಯಕ್ ಪುಷ್ಪಫಲೋಜ್ವಲಃ ।
ಲತಾಪರಿತಗಾತ್ರಸ್ತು ಕಫವಾನ್ ಪರಿಮಂಡಲಃ ॥

ದ್ರವ್ಯಜ್ಞಾನೇ. ಇಂದಿಗೂ ವೈದ್ಯವೃಂದಕ್ಕೆ ಸಂದೇಹಾಸ್ಪದವಾಗಿ ಅನೇಕ ವನಸ್ಪತಿಗಳಿರುವವು. ಅವುಗಳ ಸಮ್ಯಕ್‌ಜ್ಞಾನವಾಗಬೇಕಾದಲ್ಲಿ ಆಯುರ್ವೇದ ರೀತಿಯಲ್ಲಿ, ವನಸ್ಪತಿಶಾಸ್ತ್ರಕ್ಕನುಸರಿಸಿ, ಅಭ್ಯಸಿಸಲು, ತಕ್ಕುದಾದ ಉದ್ಯಾನ, ಪ್ರಯೋ

ಶಾಲೆಗಳು ಅವಶ್ಯವಾಗಿರುವವು. ಅದೇ ಬಗೆಯಲ್ಲಿ---ರಸಶಾಸ್ತ್ರದ (Chemistry) ಅಧ್ಯಯನಕ್ಕಾಗಿ ಆಯುರ್ವೇದಗ್ರಂಥಗಳಾದ ರಸರತ್ನಾಕರ ರಸರತ್ನಸಮುಚ್ಚಯದಲ್ಲಿ ಹೇಳಿದಂತೆ ರಸಶಾಲೆಗಳೂ ಅವಶ್ಯವು. ಇಂಥವುಗಳು ರಾಜಾಶ್ರಯದಿಂದಲೇ ನಡೆ ಯಬೇಕು. ಆಯುರ್ವೇದಾಧ್ಯಯನಕ್ಕೆ ಇದು ಅವಶ್ಯವು. ಈ ಬಗೆಯ ಸೌಕರ್ಯ ಗಳನ್ನು ಮೈಸೂರು ಸರಕಾರದವರು ಆಯುರ್ವೇದ ವಿದ್ಯಾಲಯದ ಅಂಗವಾಗಿ ತೆರೆಯ ಬೇಕಾಗಿ ಬಿನ್ನವಿಸೋಣ.

ಸಮ್ಮೇಲನದ ಪ್ರಾರಂಭೋತ್ಸವವನ್ನುನೆರವೇರಿಸಿದ ಮಾನ್ಯರಾದ ಎಚ್. ಬಿ. ಗುಂಡಪ್ಪಗೌಡರು, ಆರೋಗ್ಯಮಂತ್ರಿಗಳು—ಆಯುರ್ವೇದರೀತಿಯಲ್ಲಿ "ವಿಷಮ ಜ್ವರಕ್ಕೆ (Malarial fever) ಉತ್ತಮವಾದ ಔಷಧವನ್ನು ಆಯುರ್ವೇದ ವೈದ್ಯರು ತಯಾರಿಸಿದಲ್ಲಿ ಅದನ್ನು ಪ್ರಚಾರಕ್ಕೆ ತರುವದಾಗಿ ಆಶ್ವಾಸನವನ್ನಿತ್ತಿರುವರು.

ನಮ್ಮ ಕನ್ನಡನಾಡಿನಲ್ಲಿಯೂ, ಮೈಸೂರುಸಂಸ್ಥಾನದಲ್ಲಿಯೂ, ವನಸ್ಪತಿಗಳಿ ಗೇನು ಕೊರತೆಯಿಲ್ಲ. ವೈದ್ಯಕಗ್ರಂಥಗಳಲ್ಲಿಯೂ, (ವನಸ್ಪತಿ) ರಸಶಾಸ್ತ್ರಗ್ರಂಥಗಳ ಲ್ಲಿಯೂ, ಹೇಳಿದ ಬಗೆಯಲ್ಲಿ, ಸಂಶೋಧನೆಯನ್ನು ನಡೆಸಿ, ಪ್ರಯೋಗಶಾಲೆಯಲ್ಲಿ ಔಷಧವನ್ನು ತಯಾರಿಸಬಹುದು. ಆದರೆ ಆ ಬಗೆಯ ಪ್ರಯೋಗಶಾಲೆಗಳನ್ನೂ, ತಮ್ಮ ವೃತ್ತಿಯನ್ನು ಬಿಟ್ಟು ಸಂಶೋಧನೆಯನ್ನು ನಡಿಸತಕ್ಕವರಿಗೆ ಸಂಭಾವನೆಯನ್ನು ಕೊಡುವ ವ್ಯವಸ್ಥೆಯನ್ನೂ, ಮಾನ್ಯ ಆರೋಗ್ಯಸಚಿವರು ಕಲ್ಪಿಸುವದಾದಲ್ಲಿ ಆಯು ರ್ವೇದ, ಎಲೊಪಥಿ, ವೈದ್ಯಶಾಸ್ತ್ರಜ್ಞರಾದ ಅನೇಕ ಪದವೀಧರರು ಮುಂಬರಲು ಸಿದ್ಧರಿರುವರು. ಕೇವಲ ವಿಷಮಜ್ವರವೇಕೆ? ಇನ್ನೂ ಅನೇಕ ಅಸಾಧ್ಯವೆಂದು (ಆಂಗ್ಲವೈದ್ಯರಿಂದ) ಗಣಿಸಿದ ಬೇನೆಗಳಿಗೆ ಕೂಡ ಉತ್ತಮ ಔಷಧವನ್ನು ತಯಾರಿಸ ಬಹುದು.

ಮುಖಮಾರ್ಗಕ್ಕಿಂತಲೂ ತ್ವಚಮಾರ್ಗದಿಂದ ಮತ್ತು ರಕ್ತದಿಂದ ಕೊಟ್ಟ ಔಷಧವು ಬಹುಬೇಗ ಗುಣವನ್ನು ಕೊಡುವದು. ಈ ಬಗೆಯ ಚಿಕಿತ್ಸಾವಿಧಾನವನ್ನು ಆಂಗ್ಲವೈದ್ಯರು (Injection therapy) "ಸೂಚಿಕಾಭರಣ ಚಿಕಿತ್ಸೆ" ಹೆಚ್ಚಾಗಿ ಮಾಡುತ್ತಿರುವರು. ಈ ಬಗೆಯ ವಿಧಾನವು ಆಯುರ್ವೇದ ಪಂಡಿತರಿಗೆ ಹೊಸದಲ್ಲ. ಅತಿಸಾರ ಉನ್ಮಾದ, ಅಪಸ್ಮಾರ, ಧನುರ್ವಾತ, ವಿಷದಂಶ ಮೊದಲಾದ ರೋಗಗ ಳಲ್ಲಿ, ಶೀಘ್ರಗುಣಕ್ಕಾಗಿ, ಸೂಚಿಕಾಭರಣವನ್ನು ಮಾಡುತ್ತಲಿದ್ದರು. ಈರೀತಿ ದೇಹ ದಲ್ಲಿನ ಸೂಕ್ಷ್ಮಛಿದ್ರಗಳಲ್ಲಿ ಬಹುಬೇಗ ಸೇರಬೇಕಾದಲ್ಲಿ ಆ ದ್ರವ್ಯಗಳಲ್ಲಿ ಸೂಕ್ಷ್ಮ, ವ್ಯವಾಯ, ವಿಕಾಸಿತ್ವಗುಣಗಳು ಅವಶ್ಯಕವು,

ದೇಹಸ್ಯ ಸೂಕ್ಷ್ಮಚ್ಛಿದ್ರೇಷು ವಿಶೇತ್‌ಎತ್-ಸೂಕ್ಷ್ಮ-ಮುಚ್ಯತೆ ।
ತದ್ಯಥಾ, ಸೈಂಧವಂ, ಕ್ಷೌದ್ರಂ, ನಿಂಬಸ್ತೈಲಂ, ರುಬೂದ್ಭವಂ ॥
ದೇಹಸ್ಯ ರುಧಿರಂ ಮೂಲಂ ರುಧಿರೇಣೈವಧಾರ್ಯತೆ ।
ತಸ್ಮಾದ್ಯತ್ನೇನಸಂರಕ್ಷ್ಯಂ ರಕ್ತಂ ಜೀವ ಇತಿಸ್ಥಿತಿಃ ॥

ರಕ್ತವೇ ಆತ್ಮನ ಆಶ್ರಯಸ್ಥಾನವು. ವ್ಯವಾಯಿ, ವಿಷತ್ವಗುಣವುಳ್ಳ ದ್ರವ್ಯವು ಅಣು ಮಾತ್ರದಲ್ಲಿ ಸೇರಿದರೂ ಕೂಡ ಬೇಗ ದೇಹವನ್ನೆಲ್ಲ ವ್ಯಾಪಿಸುವದು.

ವಿಷಂ, ನಾಹೇನ ಮುಪ್ರಾಪ್ಯ ರಕ್ತಂದೂಷಯತೆವಪುಃ ।
ರಕ್ತಮಣ್ವಪಿತುಪ್ರಾಪ್ತಂ ವರ್ಧತೆ ತೈಲಮಂಬುವತ್ ॥

ಈ ಬಗೆಯ ಔಷಧಪ್ರಯೋಗವು ಸನ್ನಿಪಾತಜ್ವರದಲ್ಲಿ,

ಮೃತಸಂಜೀವನಾಖ್ಯೋಯಾ ಸೂಚಿತಾಭರಣೋರಸಃ ।
ಸನ್ನಿಪತೇನ ತೀವ್ರೇಣ ತಾಲುನಿಪ್ರವೇಶಯಿತ್ವಾಥ ರಸಮೇನಂ ವಿನಿಕ್ಷಿಪೇತ್॥
(ರ. ರ. ಸ. ಉ. ಖ. ಲಿ. ಭಾ.)

**ಧನುರ್ವಾತದಲ್ಲಿ** ಸೂಚೀಮುಖಂ ನಾಮತಃ । ಬ್ರಹ್ಮದ್ವಾರಿ ವಿಕೀರ್ಣ್ಯಲೋಹಿತಲವೆ । ಸೂಚ್ಯೈಕಮಾತ್ರಂದದೆ. (ರ. ರ. ಸ.)

**ವಿಷಚಿಕಿತ್ಸೆಗೆ** ಮೂರ್ಧ್ನಿ ಕಾಕಪದಂ ಕೃತ್ವಾ ಸಾಸೃಗ್ವಾಪಿಸಿತಂ ಕ್ಷಿಪೇತ್ । (ಅ. ಹು,)

**ಅತೀಸಾರೆ**—ಸರಕ್ತೆ ಅತೀಸಾರ್ಯ ಮಾಣೆ ರಕ್ತೇನ ಬಸ್ತಿರ್ದೇಯಃ ।(ಚ.ಚಿ.) ಈ ಬಗೆಯ ಚಿಕಿತ್ಸಾ ಪದ್ಧತಿಯನ್ನು ವೈದ್ಯರು ಪ್ರಾರಂಭಿಸಬೇಕು.

ದ್ರವ್ಯದಲ್ಲಿರತಕ್ಕ ಗುಣ, ವೀರ್ಯ, ವಿಪಾಕ, ಪ್ರಭಾವ, ಶಕ್ತಿ, ರಸಗಳ ಸಮ್ಯಕ್ ಜ್ಞಾನವನ್ನೂ ಮಾಡಿಕೊಳ್ಳಬೇಕು. ರೋಗಿಯ ಆತುರತೆಯನ್ನು ಶಮನ ಪಡಿಸತಕ್ಕುದೇ ನಮ್ಮ ಗುರಿಯಾಗಿರಬೇಕು. ಒಳ್ಳೆಯದು ನಮ್ಮದಾದರೇನು ಅನ್ಯರಿಂದ ಬಂದರೇನು ? ಹೆಚ್ಚೇಕೆ, ವೈರಿಯಿಂದ ಬಂದರೂ ಕೂಡ ಆದರಿಸಬೇಕು. " ನಚೈವ ಹ್ಯಸ್ತಿ ಸುತರಾಮಾಯುರ್ವೇದಸ್ಯಪರಮ್ । ತಸ್ಮಾದಪ್ರಮತ್ತಃ ಶಶ್ವದಭಿಯೋಗ ಮಸ್ಮಿನ್ ಗಚ್ಛೇತ್ ಏತಚ್ಚಕಾರ್ಯಮೇವಂ ಭೂಯಶ್ಚ ವೃತ್ತಸೌಷ್ಠವಮನಸೂಯತಾ, ಪರೇಭ್ಯೋಪಗಮಿತವ್ಯಮ್ ॥ ಚರಕಾಚಾರ್ಯರ ಹಿತನುಡಿಯನು ನೆನೆದು ನಡಿಯೋಣ "

ಮಾನ್ಯ ಸ್ವಾಗತಿಕರೇ, ವ್ಯವಸಾಯ ಬಂಧುಗಳೇ, ತಮ್ಮ ಅಮೂಲ್ಯ ವೇಳೆಯನ್ನು ನಾನು ಹೆಚ್ಚಾಗಿ ತಕ್ಕೊಂಡಿರುವೆನು. ಶ್ರೀಧನ್ವಂತ್ರಿಯ ಅನುಗ್ರಹದಿಂದ ಈ ಪರಿಷತ್ತು ಯಶಸ್ವಿಯಾಗಿ ನಡೆಯಲಿ. ಈ ಪರಿಷತ್ತನ್ನು ಪ್ರಾರಂಭಿಸಲು ಆಮಂತ್ರಿಸಿದ ತಮಗೆ ನನ್ನ ಒಲವಿನ ವಂದನೆಗಳು.

ಶ್ರೀಧನ್ವಂತರಯೇ ನಮಃ

ನಮಾಮಿ ಧನ್ವಂತರಿಮಾದಿದೇವಮ್ ಸುರಾಸುರೈರ್ವಂದಿತ ಪಾದಪದ್ಮಂ ।
ಲೋಕೇಜರಾರುಗ್ಭಯಮೃತ್ಯುನಾಶಮ್ ।
ದಾತಾರಮೀಶಂ ವಿವಿಧೌಷಧೀನಾಮ್ ॥

ತಾ॥ 30–12–1942. (Sd.) ಪಿ. ಆರ್. ರಂಗನಾಥನಾಯಕ್.



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941

ಸ್ವಾಗತಸಮಿತಿಯ ಕಾರ್ಯನಿರ್ವಾಹಕ ಶಾಖೆಗಳ ಕಾರ್ಯನಿರ್ವಾಹಕರು.



ಶ್ರೀ॥ ಆ॥ ವಿ॥ ಎಂ. ಎಸ್. ನಾಗೇಶರಾವ್,
L. Ag ; L. A. M. S.,
ಪ್ರೊ॥ ಆಶೋಕ ಫಾರ್ಮಸಿ, ಮೈಸೂರು.
(ಪ್ರದರ್ಶನಶಾಖಾ)



ಶ್ರೀ॥ ಆ॥ ವಿ॥ ಕೆ. ಚನ್ನಕೇಶವಶಾಸ್ತ್ರೀ,
L. A. M. S.,
ಪ್ರೊ॥ ಶ್ರೀ ರಾಮ ಫಾರ್ಮಸಿ, ಮೈಸೂರು.
(ಪ್ರಬಂಧಶಾಖಾ)



ಶ್ರೀ॥ ಆ॥ ವಿ॥ ಲಕ್ಷ್ಮೀನಾರಾಯಣಶಾಸ್ತ್ರೀ,
L. A. M. S,
ಆಯುರ್ವೇದಿಕ್ ಪ್ರಾಕ್ಟಿಷನರ್, ಮೈಸೂರು.
(ವಸತಿ ಮತ್ತು ಸಭಾನಿರ್ವಾಹಶಾಖಾ)

॥ ಧನ್ವಂತರಯೇನಮಃ ॥

ಮೈಸೂರು ಸಂಸ್ಥಾನದ ಪ್ರಥಮ

ಮತ್ತು

ನಿಖಿಲ ಕರ್ಣಾಟಕದ ದ್ವಾದಶ

# ಆಯುರ್ವೇದ ಸಮ್ಮೇಲನಗಳಲ್ಲಿನ

# ದ್ರವ್ಯಸಂಭಾಷಾ ಪರಿಷತ್ತಿನ

ಅಧ್ಯಕ್ಷರಾದ

## ಆಯುರ್ವೇದ ಭೂಷಣ ಯಂ. ವಿ. ಶಾಸ್ತ್ರೀ,

ಮಂಗಳೂರು,

## ಇವರ ಭಾಷಣ.

---

ಪ್ರಿಯ ಸ್ವಾಗತಿಕರೇ, ಪ್ರಿಯ ಗೌರವ ಕಾರ್ಯದರ್ಶಿಗಳೇ,

ಪ್ರೇಮಪೂರ್ವಕವಾದ ಆಗ್ರಹದಿಂದ ಅರಿವಿಲ್ಲದಿರುವ ನನ್ನನ್ನು ದ್ರವ್ಯ ಸಂಭಾಷಾ ಪರಿಷತ್ತಿಗೆ ಅಧ್ಯಕ್ಷನನ್ನಾಗಿ ಮಾಡಿದಿರಿ. ಕನ್ನಡ ಜಿಲ್ಲೆಗೆ ಗೌರವವನ್ನು ತೋರಿಸಿದಿರಿ. ಇದಕ್ಕಾಗಿ ತಮ್ಮೆಲ್ಲರಿಗೂ ನನ್ನ ವಿನಯಪೂರ್ವಕವಾದ ಧನ್ಯವಾದಗಳು.

ಮಾನ್ಯ ದ್ರವ್ಯಜ್ಞರೇ,

ದ್ರವ್ಯ ತತ್ವದಲ್ಲಿ ಅನಭಿಜ್ಞನಾದ ನಾನು ತಮ್ಮ ದ್ರವ್ಯ ಸಂಭಾಷಾ ಪರಿಷತ್ತಿಗೆ ಅಧ್ಯಕ್ಷನು. ಇದೇನು ವಿಕೃತಿವಿಷಮಸಮವಾಯಾರಬ್ಧವೋ: ಅಥವಾ ವಿಚಿತ್ರ ಪ್ರತ್ಯಯಾರಬ್ಧವೋ— ತಾವೇ ಸಾಕ್ಷಿಗಳು. ಧಾರ್ಷ್ಟ್ಯವನ್ನು ಕ್ಷಮಿಸಿರಿ. ನಡಿಸಿರಿ ಅನಭಿಜ್ಞನನ್ನು.

### ಚಿಕಿತ್ಸೆಯಲ್ಲಿ ದ್ರವ್ಯತತ್ವವು ಪೃಥಕ್ ಪ್ರಸ್ಥಾನ

ದ್ರವ್ಯಜ್ಞರೇ, ನಾವು ಮಂತ್ರ, ಓಷಧಿ, ಮಣಿ, ಮಂಗಲ, ಬಲಿ, ಉಪಹಾರ, ಹೋಮ, ನಿಯಮ, ಪ್ರಾಯಶ್ಚಿತ್ತ, ಉಪವಾಸ, ಸ್ವಸ್ತ್ಯಯನ, ಪ್ರಣಿಪಾತ,

ತೀರ್ಥಗಮನ ಮೊದಲಾದ ಅದ್ಭುತ ದೈವಿಕ ಕರ್ಮಗಳಿಂದ ಅನಾರೋಗ್ಯವನ್ನು ಹೋಗಲಾಡಿಸಿ, ಆರೋಗ್ಯವನ್ನು ಸ್ಥಾಪಿಸುವ ದ್ರವ್ಯವ್ಯಪಾಶ್ರಯಿ ಚಿಕಿತ್ಸಕರೇ? ಅಥವಾ ಅಹಿತ ವಿಷಯಗಳಿಂದ ಮನಸ್ಸನ್ನು ವಿನಿಗ್ರಹಿಸಿ, ಯೋಗವನ್ನು ಅಭ್ಯಾಸಿಸುವ ಸತ್ವಾವಜಯಿಗಳೆಂಬ ಅಭ್ಯಾಸಯೋಗಿ ಚಿಕಿತ್ಸಕರೇ? . . . ಅಲ್ಲ; ನಾವು ಮಂತ್ರಾದಿಗಳಿಂದಲಾಗಲೀ ಯೋಗಬಲದಿಂದಲಾಗಲೀ ರೋಗಿಗಳನ್ನು ಚಿಕಿತ್ಸಿಸಿ, ರೋಗಗಳನ್ನು ಹೋಗಲಾಡಿಸುವವರಲ್ಲ. ಮಂತ್ರಾದಿಗಳಿಂದಲೂ ಯೋಗಬಲದಿಂದಲೂ ರೋಗಗಳನ್ನು ಹೋಗಲಾಡಿಸುವ ಮಂತ್ರವಾದಿಗಳೇ ಮೊದಲಾದವರು ಈಗಲೂ ಪ್ರಸಿದ್ಧರಾಗಿದ್ದಾರೆ. ನಾವು ಆ ಪಂಥಕ್ಕೆ ಸೇರಿದವರಲ್ಲ. ಅವರ ವಿರೋಧಿಗಳೂ ಅಲ್ಲ. ಆದರೆ ನಮ್ಮ ಪಂಥವು ಬೇರೆ. ನಮ್ಮ ಪಂಥಕ್ಕೆ ಚರಕಾಚಾರ್ಯರು ಯುಕ್ತಿವ್ಯಪಾಶ್ರಯವೆಂದು ಹೇಳಿದ್ದಾರೆ. ನಮ್ಮ ಪಂಥದವರು ಆಹಾರ ದ್ರವ್ಯಗಳಿಂದಲೂ ಔಷಧ ದ್ರವ್ಯಗಳಿಂದಲೂ ಪ್ರಾಣಿ ವರ್ಗದ ಸ್ವಾಸ್ಥ್ಯವನ್ನು ಕಾಪಾಡುವುದರಲ್ಲಿಯೂ ಅಸ್ವಾಸ್ಥ್ಯವನ್ನು ಹೋಗಲಾಡಿಸುವುದರಲ್ಲಿಯೂ ಸಂಪೂರ್ಣ ನಂಬಿಗೆ ಉಳ್ಳವರಾಗಿದ್ದಾರೆ. ಆದ್ದರಿಂದ ನಮ್ಮನ್ನು ದ್ರವ್ಯವ್ಯಪಾಶ್ರಯಿಗಳೆಂದು ಹೇಳಲಿಕ್ಕೂ ಬರುತ್ತದೆ. ಕರ್ಮ ಪುರುಷನ ಶಾರೀರಗಳಾದ ವಾಯು, ಪಿತ್ತ, ಕಫಗಳ ಪ್ರಕೋಪದಲ್ಲಿ ಶರೀರವನ್ನು ಆಶ್ರಯಿಸಿ, ಇಚ್ಛಿಸುವ ಅಂತಃಪರಿಮಾರ್ಜನ, ಬಹಿಃಪರಿಮಾರ್ಜನ ಮತ್ತು ಶಸ್ತ್ರಪ್ರಣಿಧಾನಗಳೆಂಬ ಮೂರು ಔಷಧಗಳೂ ನಮ್ಮ ಪಂಥಕ್ಕೆ ಸಮ್ಮತವಾದವುಗಳು. ಅವುಗಳಲ್ಲಿ ಅಂತಃಪರಿಮಾರ್ಜನವು ಶರೀರದ ಅಂತರವಕಾಶಗಳನ್ನು ಪ್ರವೇಶಿಸಿ, ಅಲ್ಲಿ ಆಹಾರಾದಿ ವೈಷಮ್ಯದಿಂದ ಉದ್ಭವಿಸುವ ರೋಗಗಳನ್ನು ತೊಳೆಯುವುದು. ಬಹಿಃಪರಿಮಾರ್ಜನವು ಬಾಹ್ಯ ಸ್ಪರ್ಶನೇಂದ್ರಿಯವನ್ನು ಆಶ್ರಯಿಸಿ, ಅಭ್ಯಂಗ, ಸ್ವೇದ, ಪ್ರದೇಹ, ಪರಿಷೇಕ, ಉದ್ವರ್ತನ, ಉನ್ಮರ್ದನ, ಉದ್ವಾಹನಾದಿ ಕ್ರಿಯೆಗಳಿಂದ ಬಾಹಿಕ ರೋಗಗಳನ್ನು ತೊಳೆಯುವುದು. ಶಸ್ತ್ರಪ್ರಣಿಧಾನವು ನಿಜ, ಆಗಂತುಕಗಳಾದ ವಿದ್ರಧಿ, ಶೋಫಾದಿಗಳನ್ನು ಶಸ್ತ್ರ, ಕ್ಷಾರ, ಜಲೌಕಪಾತಾದಿಗಳಿಂದ ಶುದ್ಧೀಕರಿಸುವುದು. ಇದೀಗ ಯುಕ್ತಿ ಅಥವಾ ದ್ರವ್ಯ ವ್ಯಪಾಶ್ರಯಿಗಳ ಪಂಥವು.

ಸಾರಾಂಶವೇನೆಂದರೆ ಇಲ್ಲಿ ಹಿಂದೆ ಉಲ್ಲೇಖಿಸಿರುವ ಮಂತ್ರ, ಓಷಧಿ, ಮಣಿ, ಮಂಗಲ, ಬಲಿ, ಉಪಹಾರ, ಮೊದಲಾದವುಗಳಿಂದ ಕೆಲವು ಕಾಲ, ಕೆಲವು ದೇಶ, ಕೆಲವು ವ್ಯಕ್ತಿಗಳ ಸ್ವಾಸ್ಥ್ಯವನ್ನು ರಕ್ಷಿಸಬಹುದು; ಅಸ್ವಾಸ್ಥ್ಯವನ್ನು ಹೋಗಲಾಡಿಸಬಹುದು. ಆದರೆ ಸಾಮಾನ್ಯದಿಂದ ಸರ್ವದೇಶದಲ್ಲಿ, ಸರ್ವಕಾಲದಲ್ಲಿ, ಅಧಿಕ ಜನರ ಸ್ವಾಸ್ಥ್ಯವನ್ನು ರಕ್ಷಿಸಲಿಕ್ಕೂ ಅಸ್ವಾಸ್ಥ್ಯವನ್ನು ಹೋಗಲಾಡಿಸಲಿಕ್ಕೂ ಸಾಧ್ಯವಾಗಲಾರದು. ಆದ್ದರಿಂದ ಅನೇಕ ಸಂದರ್ಭಗಳಲ್ಲಿ ಅನೇಕ ರೋಗಿಗಳು ಮಂತ್ರಾದಿ ಚಿಕಿತ್ಸೆಗಳಿಂದ ಹತಾಶರಾಗುತ್ತಿರುವುದನ್ನು ನಾವು ನಿತ್ಯವೂ ನೋಡುತ್ತಿದ್ದೇವೆ. ಅಂಗಿರಾ, ಜಮದಗ್ನಿ, ವಸಿಷ್ಠ ಮೊದಲಾದ ಪೂರ್ವ ಮಹರ್ಷಿ

ಗಳೂ (ದ್ರವ್ಯತತ್ವಜ್ಞರು) ಕೂಡ, ಮಂತ್ರಾದಿಗಳಿಂದ ಹತಾಶರಾದ ರೋಗಿಗಳನ್ನು ಕಂಡೇ ದುಃಖಿತರಾಗಿ, ಸ್ವಭಾವಸಿದ್ಧವಾದ ದಯೆಯಿಂದ ಮನುಷ್ಯನ ಆರೋಗ್ಯಕ್ಕೆ ನಿಘ್ನಪ್ರಾಯವಾದ ರೋಗಗಳನ್ನು ಹೇಗೆ ಶಾಂತಪಡಿಸಬಹುದು— ಎಂದು ಹಿಮವತ್ಪರ್ವತದ ಪಾರ್ಶ್ವದಲ್ಲಿ ಧ್ಯಾನತತ್ಪರರಾಗಿ ಕೂತುಕೊಳ್ಳಲಿಕ್ಕೆ ಕಾರಣವಾಯಿತು. ಮಂತ್ರಾದಿಗಳಿಂದ ರೋಗಗಳು ನಿವೃತ್ತವಾಗುತ್ತಿದ್ದರೆ ತಿರುಗಿ ರೋಗಗಳನ್ನು ನಿವೃತ್ತಿಪಡಿಸಲಿಕ್ಕೆ ಪ್ರಸ್ಥಾನಾಂತರವನ್ನು ಆಲೋಚಿಸುವ ಸಂದರ್ಭವು ಋಷಿಗಳಿಗೆ ಒದಗುತ್ತಿದ್ದಿಲ್ಲ. ಆದ್ದರಿಂದ ಮಂತ್ರಾದಿಗಳಿಂದ ರೋಗಗಳು ನಿವೃತ್ತವಾಗುತ್ತವೆ ಎಂದು ನಾವು ಉಪಾಯಾಂತರವನ್ನು ಹುಡುಕದಿರುವದು ದ್ರವ್ಯತತ್ವಜ್ಞರಾದ ಋಷಿಗಳಿಗೆ ಮಾನ್ಯವಲ್ಲ. ಇಲ್ಲಿ ಮಂತ್ರಾದಿವಾದಿಗಳು— ಚರಕಸಂಹಿತೆಯಲ್ಲಿ ಮೈತ್ರೇಯನು ಹೇಳುವಂತೆ ಸ್ವಗುಣಸಂಪನ್ನನಾದ, ಉಪಕರಣಗಳಿಂದ ಯುಕ್ತನಾದ ಮತ್ತು ಪರೀಕ್ಷಾಕಾರಿಯಾದ ಚತುರ ವೈದ್ಯನಿಂದ ಚಿಕಿತ್ಸಿಸಲ್ಪಟ್ಟ ಕೆಲವು ರೋಗಿಗಳು ಬದುಕುತ್ತಾರೆ; ಅದೇ ರೀತಿ ಕೆಲವು ರೋಗಿಗಳು ಸಾಯುತ್ತಾರೆ. ಇನ್ನೂ ಕೆಲವರು ಅಜ್ಞ ವೈದ್ಯ ಮತ್ತು ಮಂತ್ರಾದಿವಾದಿಗಳಿಂದ ಚಿಕಿತ್ಸಿಸಲ್ಪಟ್ಟವರು ಬದುಕುತ್ತಾರೆ; ಹಾಗೆ ಚಿಕಿತ್ಸಿಸಲ್ಪಟ್ಟ ಬೇರೆ ಕೆಲವರು ಸಾಯುತ್ತಾರೆ. ಆದ್ದರಿಂದ— ನಿಮ್ಮ ಔಷಧದ್ರವ್ಯವು ನಮ್ಮ ಅನೌಷಧದ್ರವ್ಯದಿಂದ ಸಮಾನವಾಗಿದೆ,— ಎಂತ ಹೇಳಬಹುದು. ಆದರೆ ಎಲ್ಲಾ ವ್ಯಾಧಿಗಳು ದ್ರವ್ಯೌಷಧಸಾಧ್ಯಗಳಲ್ಲ. ದ್ರವ್ಯೌಷಧಗಳಿಗೆ ಸಾಧ್ಯಗಳಾಗಿರುವ ವ್ಯಾಧಿಗಳು ಅದ್ರವ್ಯೌಷಧಗಳಿಂದ ನಿವೃತ್ತಗಳಾಗಲಿಕ್ಕಿಲ್ಲ. ಆದ್ದರಿಂದ ದ್ರವ್ಯೌಷಧಗಳಿಂದ ಸಾಧ್ಯಗಳಾಗುವ ಅಧಿಕಾಧಿಕ ವ್ಯಾಧಿಗಳು ದ್ರವ್ಯೌಷಧಗಳಿಂದ ಖಂಡಿತ ನಿವೃತ್ತಗಳಾಗುತ್ತವೆ. ಅದರಂತೆಯೇ ದ್ರವ್ಯತತ್ವವನ್ನು ಹೆಚ್ಚು ಹೆಚ್ಚು ತಿಳಕೊಂಡು ಚಿಕಿತ್ಸೆಯನ್ನು ಮಾಡಿದರೆ ಅಸಾಧ್ಯಗಳೆಂದು ಹೇಳಲ್ಪಡುವ ಹೆಚ್ಚು ಹೆಚ್ಚು ವ್ಯಾಧಿಗಳು ಗುಣವಾಗುವವು. ದ್ರವ್ಯತತ್ವವಿಮರ್ಶನೆಯು ಋಷಿಗಳ ಮತದಲ್ಲಿ ಪೃಥಕ್ ಪ್ರಸ್ಥಾನವಾಗಿದೆ. ಆದ್ದರಿಂದ ದ್ರವ್ಯವಾದಿಗಳಾದ ನಾವು ಜುಗುಪ್ಸೆಯನ್ನೂ ಔದಾಸೀನ್ಯವನ್ನೂ ಬಿಟ್ಟು, ಇನ್ನೂ ಇನ್ನೂ ಪೃಥಕ್ ಪ್ರಸ್ಥಾನವಾದ ದ್ರವ್ಯತತ್ವ ಶೋಧನೆಯಲ್ಲಿ ನಿರತರಾಗಬೇಕೆಂಬುದೇ ನನ್ನ ಅಭಿಪ್ರಾಯ.

## ದ್ರವ್ಯತತ್ವದ ಬಹಿರಂಗ ವಿಚಾರ

### ದ್ರವ್ಯದ ಶಬ್ದವ್ಯುತ್ಪತ್ತಿ; ಅರ್ಥನಿರ್ಣಯ ಮತ್ತು ಲಕ್ಷಣಸ್ವರೂಪ

**ಶಬ್ದವ್ಯುತ್ಪತ್ತಿ**:-ಗತ್ಯರ್ಥಕ "ದ್ರು" ಧಾತುವಿನಿಂದ "ದ್ರವತ್ಯೂರ್ಧ್ವಂ" ಎಂಬ ಅರ್ಥದಲ್ಲಿ ಮಿತದ್ವಾದಿತ್ವಾತ್ ಡು:—೩,೨,೧೮೦. ಅಥವಾ "ದ್ರು"

ಶಬ್ದದಿಂದ "ಭವ್ಯೇ" ಎಂಬ ಅರ್ಥದಲ್ಲಿ "ದ್ರವ್ಯಂ ಚ ಭವ್ಯೇ-೫.೩.೧೦೪. ಎಂಬ ಪಾಣಿನೀಯ ಸೂತ್ರಗಳಿಂದ ದ್ರವ್ಯ ಶಬ್ದವು ವ್ಯುತ್ಪನ್ನವಾಗುತ್ತದೆ.

**ದ್ರವ್ಯ ಶಬ್ದದ ಅರ್ಥ:**-ಭವ್ಯ (ಶುಭ, ಸತ್ಯ, ಯೋಗ್ಯ, ಭವಿಷ್ಯತ್, ಕರ್ಮರಂಗವೃಕ್ಷ, ಗಜಪಿಪ್ಪಲೀ, ಉಮಾ) ಧನ, ಕ್ಷಿತ್ಯಾದಿ ಸಪ್ತಪದಾರ್ಥ, ಮರ, ವಿನಯ, ಭೇಷಜ, ಹಿತ್ತಾಳಿ, ಗುಣಾಶ್ರಯ, ದ್ರವ್ಯ, ವಿಲೇಪ, ಅರಗು, ಮದ್ಯ, ಮೂಲವಸ್ತು, ಪಣ, ಸತ್ವಗಳೆಂಬ ಅರ್ಥಗಳು ನಾನಾಲಿಂಗಾನುಶಾಸನ, ವಿಶ್ವ, ಹೈಮ, ಮತ್ತು ಸಂಸ್ಕೃತ—ಇಂಗ್ಲಿಷ್ ನಿಘಂಟುಗಳಲ್ಲಿ ಕಂಡು ಬರುತ್ತವೆ. ಶಕ್ತಿಗ್ರಹಕ್ಕೆ ಸಾಧನಗಳಾದ ವ್ಯಾಕರಣ, ಉಪಮಾನ, ಕೋಶ, ಆಪ್ತವಾಕ್ಯ, ವ್ಯವಹಾರ, ವಾಕ್ಯಶೇಷ, ವಿವೃತಿ, ಸಿದ್ಧಪದದ ಸಾನ್ನಿಧ್ಯ, ಇವುಗಳಿಂದ ವ್ಯವಹಾರಕ್ಕೆ ಅನುಕೂಲವಾಗುವಂತೆ, ದ್ರವ್ಯ ಶಬ್ದದ ಅರ್ಥವನ್ನು ಎಳಕೊಂಡಂತೆ ಕಂಡು ಬರುತ್ತದೆ. ದ್ರವ್ಯ ಶಬ್ದಕ್ಕೆ ಬೇರೆ ಬೇರೆಯಾಗಿ ಹೇಳಿದ ಎಲ್ಲಾ ಅರ್ಥಗಳು ವ್ಯಾಪ್ಯಭಾವ ಮತ್ತು ವ್ಯಾಪಕಭಾವದಿಂದ ಆಯುರ್ವೇದದಲ್ಲಿ ಅನ್ವಯಿಸುತ್ತವೆ.

**ದ್ರವ್ಯ ಶಬ್ದದ ಲಕ್ಷಣ:**-ಯತ್ರಾಶ್ರಿತಾಃ ಕರ್ಮಗುಣಾಃ ಕಾರಣಂ ಸಮವಾಯಿಯತ್। ತದ್ದ್ರವ್ಯಂ—(ಚ. ಸೂ. ಅ ೧; ಶ್ಲೋ. ೫೦.) ದ್ರವ್ಯ ಲಕ್ಷಣಂತು ಕ್ರಿಯಾಗುಣವತ್ ಸಮವಾಯಿ ಕಾರಣಮಿತಿ।—(ಸು. ಸೂ. ಅ. ೪೦. ಸೂ. ೩.) ಅರ್ಥ:—ಎಲ್ಲಿ ಕರ್ಮಗಳು ಗುಣಗಳು ಆಶ್ರಿತವಾಗಿದೆಯೋ, ಯಾವುದು ಕಾರ್ಯೋತ್ಪತ್ತಿಯಲ್ಲಿ ಸಮವಾಯಿ ಕಾರಣವಾಗಿದೆಯೋ ಅದು ದ್ರವ್ಯವೆಂದು ಎರಡು ವಾಕ್ಯಗಳಿಗೂ ಒಂದೇ ಅರ್ಥ. ಆದ್ದರಿಂದ ಚರಕ—ಸುಶ್ರುತರ ಲಕ್ಷಣವು ಒಂದೇ ಅಭಿಪ್ರಾಯದ್ದಾಗಿದೆ.

ಈ ಮೇಲೆ ಹೇಳಿದ ವ್ಯುತ್ಪತ್ತಿ, ಅರ್ಥ ಮತ್ತು ಲಕ್ಷಣಗಳಿಂದ ದ್ರವ್ಯವೆಂದರೆ ಏನು?—ಎಂಬ ಸಾಮಾನ್ಯ ಜ್ಞಾನವಾಯಿತು. ಆದರೆ ದ್ರವ್ಯಜ್ಞರು "ದ್ರವ್ಯ' ಶಬ್ದವನ್ನು ಈ ಮೇಲೆ ಹೇಳಿದ ಯಾವ ಅರ್ಥದಲ್ಲಿ ತಕ್ಕೊಂಡಿದ್ದಾರೆಂದು ಹೇಳಲು ನಿಜವಾದ ಪ್ರಮಾಣವು ಸಿಕ್ಕುವುದಿಲ್ಲ. ಆದರೆ ವೈದ್ಯ ಶಾಸ್ತ್ರದಲ್ಲಿ ತಕ್ಕೊಂಡಿರುವ 'ದ್ರವ್ಯ' ಶಬ್ದಕ್ಕೆ ಪ್ರತ್ಯೇಕ ಔಷಧವಸ್ತುವಿನಲ್ಲಿ, ಔಷಧದ ಸಮುದಾಯದಲ್ಲಿ, ಭೌತಿಕ ಸಾಮಾನ್ಯದಲ್ಲಿ ಕೂಡ ತಾತ್ಪರ್ಯವು ಕಂಡು ಬರುತ್ತದೆ. ಉದಾಹರಣೆ:— ದ್ರವ್ಯಸ್ಯ ಜಾತ್ಯಾಕೃತಿ ವರ್ಣ ವೀರ್ಯರಸಪ್ರಭಾವಾದಿ ಗುಣೈರ್ಭವಂತಿ।" (—ಧನ್ವಂತರಿ ನಿಘಂಟು. ಪ್ರಸ್ತಾವ ಶ್ಲೋ. ೯) ಇಲ್ಲಿ ಪ್ರತ್ಯೇಕ ದ್ರವ್ಯದಲ್ಲಿ ತಾತ್ಪರ್ಯ. "ದ್ರವ್ಯಂ ತ್ರಿವಿಧಮುಚ್ಯತೇ" (—ಚ. ಸೂ. ಅ. ೧. ಶ್ಲೋ. ೬೮) "ಬಹುತಾ ತತ್ರಯೋಗ್ಯತ್ವಮನೇಕ ವಿಧ ಕಲ್ಪನಾ। ಸಂಪಚ್ಚೇತಿ ಚತುಷ್ಕೋಽಯಂ ದ್ರವ್ಯಾಣಾಂ ಗುಣ ಉಚ್ಯತೇ।" (—ಚ. ಸೂ. ಅ. ೯. ಶ್ಲೋ. ೭) ಈ ಎರಡು ಕಡೆಗಳಲ್ಲಿಯೂ "ದ್ರವ್ಯ" ಶಬ್ದಕ್ಕೆ ಔಷಧ ಸಮುದಾಯದಲ್ಲಿ ತಾತ್ಪರ್ಯ.

"ಇಹಹಿ ದ್ರವ್ಯಂ ಪಂಚಮಹಾಭೂತಾತ್ಮಕಂ।" (—ಅಷ್ಟಾಂಗ ಸಂಗ್ರಹ. ಸೂ. ಅ. ೧೭. ಸೂ. ೧.) ಇಲ್ಲಿ "ದ್ರವ್ಯ" ಶಬ್ದಕ್ಕೆ ಭೌತಿಕ ಸೃಷ್ಟಿ ಸಾಮಾನ್ಯದಲ್ಲಿ ತಾತ್ಪರ್ಯ.

ವೈದ್ಯಶಾಸ್ತ್ರದಲ್ಲಿ ಪ್ರಯೋಗಿಸಲ್ಪಟ್ಟ ದ್ರವ್ಯ ಶಬ್ದವು ಬಹು ವಿಪುಲಾರ್ಥವನ್ನು ಒಳಗೊಂಡು, ಸಮಸ್ತ ಪ್ರಾಪಂಚಿಕವನ್ನು ಔಷಧ ರೂಪದಿಂದ ಮಾರ್ಪಡಿಸಿದೆ. ದೃಷ್ಟಾಂತ:-"ಅನೇನೋಪದೇಶೇನ ನಾನೌಷಧಿಭೂತಂ ಜಗತಿಕಿಂಚಿದ್ದ್ರವ್ಯಮುಪಲಭ್ಯತೇ।" (ಚ. ಸೂ.ಅ. ೨೬, ಸೂ. ೧೧.)"ಇತ್ಥಂಚ ನಾನೌಷಧ ಭೂತಂ ಜಗತಿಕಿಂಚಿದ್ದ್ರವ್ಯಮಸ್ತಿ ವಿವಿಧಾರ್ಥ ಪ್ರಯೋಗವಶಾತ್।" (ಅ. ಸಂ. ಸೂ, ಅ.೧೭) ಹೆಚ್ಚು ಕಡಿಮೆ ಚರಕ ಮತ್ತು ಅಷ್ಟಾಂಗ ಸಂಗ್ರಹದ ಸೂತ್ರಗಳ ತಾತ್ಪರ್ಯವು ಸಮಾನವಾಗಿದೆ. ನಾನಾ ವಿಧದ ಪ್ರಯೋಜನದ ಪ್ರಯೋಗವಶದಿಂದ ಈ ರೀತಿಯ ಜಗತ್ತಿನಲ್ಲಿ ಅನೌಷಧಭೂತವಾದ ದ್ರವ್ಯವೇ ಇಲ್ಲ. ಅಂದರೆ ಸೃಷ್ಟಿಯ ವೈಚಿತ್ರ್ಯದಿಂದ ಒಂದು ವಿಧದಿಂದ ಅಪಥ್ಯವಾದ ವಸ್ತುವು ಅದೇ ರೋಗಿಗೆ ಇನ್ನೊಂದು ವಿಧದಿಂದ ಪಥ್ಯವಾಗುತ್ತದೆ— ಎಂದಾದ ಮೇಲೆ ಮರಳು, ಬೂದಿ, ಕೆಸರು ಮೊದಲಾದ ವಸ್ತುಗಳೂ ಕೂಡ ವೈದ್ಯಶಾಸ್ತ್ರ ದೃಷ್ಟಿಯಲ್ಲಿ ಔಷಧ ದ್ರವ್ಯಗಳಾಗಿವೆ. ಈ ಮೇಲೆ ಸೂಚಿಸಿದ ವಿಷಯಗಳಿಂದ ವೈದ್ಯಶಾಸ್ತ್ರದಲ್ಲಿ ದ್ರವ್ಯಶಬ್ದಕ್ಕೆ ಎಷ್ಟು ವಿಪುಲಾರ್ಥವಾಗುತ್ತದೆಂದು ವಿಚಾರಿಸಿರಿ. ನ್ಯಾಯವೈಶೇಷಿಕ ಮೊದಲಾದ ದರ್ಶನಗಳಲ್ಲಿ ಕಂಡುಬರುವ ದ್ರವ್ಯ ಶಬ್ದವು ಕಾರಣವಾಚಕದಿಂದ ಭೂತಾರ್ಥದಲ್ಲಿದೆ. ವೈದ್ಯಶಾಸ್ತ್ರದಲ್ಲಿರುವ ದ್ರವ್ಯಶಬ್ದವು ಕಾರಣವಾಚಕ ಮತ್ತು ಕಾರ್ಯವಾಚಕದಿಂದ ಭೂತಾರ್ಥ ಮತ್ತು ಭೌತಿಕಾರ್ಥ ಎರಡರಲ್ಲಿಯೂ ಇದೆ.

## ದ್ರವ್ಯೋತ್ಪತ್ತಿ

ವೈದ್ಯಶಾಸ್ತ್ರದಲ್ಲಿ ಶಾಸ್ತ್ರೀಯ ಚಿಕಿತ್ಸೆಯು ರಸದಿಂದ ಆರಂಭವಾಗುತ್ತದೆ. ಆದುದರಿಂದ ಗ್ರಂಥಕಾರರು ಅದಕ್ಕನುಗುಣವಾಗಿರುವ ದ್ರವ್ಯೋತ್ಪತ್ತಿಯ ಕ್ರಮವನ್ನು ಹೇಳಿರುತ್ತಾರೆ. ದ್ರವ್ಯೋತ್ಪತ್ತಿಗೆ ಕಾರಣಗಳಾದ ಪಂಚಭೂತಗಳನ್ನು ಅಧಿಷ್ಠಾನ ಕಾರಣ, ಯೋನಿ ಕಾರಣ, ನಿರ್ವೃತ್ತಿ—ವಿಶೇಷ ಕಾರಣವೆಂದು ಮೂರು ವಿಭಾಗ ಮಾಡಿರುತ್ತಾರೆ. ಪೃಥ್ವಿಯು ಅಧಿಷ್ಠಾನಕಾರಣ, ಅಂಬು ಯೋನಿ ಕಾರಣ, ಆಕಾಶ, ವಾಯು, ಅಗ್ನಿಗಳು ನಿರ್ವೃತ್ತಿಗೆ ಮತ್ತು ವಿಶೇಷಕ್ಕೆ ಕಾರಣ. ಅಂದರೆ ದ್ರವ್ಯವು ಪೃಥ್ವೀಭೂತವನ್ನು ಆಶ್ರಯಿಸಿ, ಅಭ್ಭೂತದಲ್ಲಿ ಮಿಶ್ರವಾಗಿ, ಆಕಾಶ—ವಾಯು—ಅಗ್ನಿಭೂತಗಳೊಂದಿಗೆ ಅನುಮಿಸಿ, ವ್ಯಕ್ತಭಾವವನ್ನೂ ವಿಶಿಷ್ಟತೆಯನ್ನೂ ಹೊಂದಿ, ದ್ರವ್ಯರೂಪದಲ್ಲಿ ಪರಿಣಮಿಸುತ್ತದೆ. ವೈದ್ಯಶಾಸ್ತ್ರದಲ್ಲಿ ಎಲ್ಲಾ ದ್ರವ್ಯಗಳೂ ಪಾಂಚಭೌತಿಕಗಳು. ಮೊದಲಾಗಿ ಅವುಗಳು ಚೇತನ ದ್ರವ್ಯಗಳೆಂದೂ ಅಚೇತನ ದ್ರವ್ಯಗಳೆಂದೂ ಎರಡಾಗಿ ವಿಭಾಗಿಸಲ್ಪಟ್ಟಿವೆ. ಈ ರೀತಿ

ಎರಡಾಗಿ ವಿಭಾಗಿಸಲ್ಪಟ್ಟ ಸರ್ವ ದ್ರವ್ಯಗಳೂ ದೋಷ ಪ್ರಶಾಮಕ, ದೋಷ ದೂಷಕ ಮತ್ತು ಸ್ವಾಸ್ಥ್ಯ ಸಂರಕ್ಷಕಗಳೆಂದೂ ತಿರುಗಿ ಮೂರು ವಿಧವಾಗಿ ವಿಭಾಗಿಸಲ್ಪಟ್ಟಿವೆ. ಹಾಗೆ ವಿಭಾಗಿಸಲ್ಪಟ್ಟ ಮೂರು ವರ್ಗಗಳು ಜಾಂಗಮ, ಔದ್ಭಿದ, ಪಾರ್ಥಿವವೆಂಬುದಾಗಿ ಪುನಃ ಮೂರಾಗಿ ವಿಭಾಗಿಸಲ್ಪಟ್ಟಿವೆ. ಇದರಲ್ಲಿ ಜೇನು, ಗೋರಸ, ಪಿತ್ತ, ಚರ್ಬಿ, ಮಜ್ಜಾ, ರಕ್ತ, ಮಾಂಸ, ಮೂತ್ರ, ಪುರೀಷ, ರೇತಸ್ಸು, ಚರ್ಮ, ಎಲುಬು, ಸ್ನಾಯು, ಕೊಂಬು, ಗೊರಸು, ಉಗುರು, ಕೇಶ, ರೋಮ, ರೋಚನ ಮೊದಲಾದವುಗಳು ಜಾಂಗಮಗಳು. ಸುವರ್ಣ, ಲೋಹ, ಲೋಹ ಮಲ, ರಸ, ಮಹಾರಸ, ಸಾಧಾರಣರಸ, ಉಪರಸ, ಮಣಿ, ಉಪ್ಪು, ಸುಣ್ಣ, ಮರಳು ಮೊದಲಾದುವುಗಳು ಪಾರ್ಥಿವಗಳು. ಔದ್ಭಿದವು ವನಸ್ಪತಿ, ವೀರುಧ, ವಾನಸ್ಪತ್ಯ, ಓಷಧಿ ಎಂಬುದಾಗಿ ತಿರುಗಿ ನಾಲ್ಕಾಗಿ ವಿಭಾಗಿಸಲ್ಪಟ್ಟಿದೆ. ಮೂಲ, ತೊಗಟೆ, ಸಾರ, ನಿರ್ಯಾಸ, ದಂಟು, ಸ್ವರಸ, ಚಿಗುರು, ಕ್ಷಾರ, ಕ್ಷೀರ, ಫಲ, ಪುಷ್ಪ, ಭಸ್ಮ, ತೈಲ, ಮುಳ್ಳು, ಪತ್ರ, ಅಂಕುರ ಗಡ್ಡೆ, ಪ್ರರೋಹಗಳು ಇವುಗಳು ಔದ್ಭಿದಗಳು. ಚಿಕಿತ್ಸಾ ಸೌಕರ್ಯಕ್ಕಾಗಿ ಈ ಮೇಲೆ ಹೇಳಿದ ದ್ರವ್ಯಗಳನ್ನು ಇನ್ನೂ ಬೇರೆ ರೀತಿಯಲ್ಲಿಯೂ ವಿಭಾಗಿಸಿದ್ದಾರೆ. ಪ್ರಕೃತ ಪ್ರಸ್ತಾವನೆಯಲ್ಲಿ ಅನಾವಶ್ಯಕವಾದ್ದರಿಂದಲೂ ದ್ರವ್ಯಜ್ಞ ಸಾಮಾನ್ಯರಿಗೆ ತಿಳಿದ ವಿಷಯವಾದ್ದರಿಂದಲೂ ಇಲ್ಲಿ ಈ ವಿಭಾಗಗಳನ್ನು ಸಂಕೋಚಿಸಿದ್ದೇನೆ. ವೈದ್ಯರಿಗೂ ಅವೈದ್ಯರಿಗೂ ಸಂಬಂಧಿಸಿರುವ ದ್ರವ್ಯ ಸಾಮಾನ್ಯ ವಿಚಾರವನ್ನು ಇಲ್ಲಿ ನಿಲ್ಲಿಸಿ, ವೈದ್ಯರಿಗೆ ಮಾತ್ರ ಸಂಬಂಧಿಸಿರುವ ದ್ರವ್ಯ ವಿಷಯವನ್ನು ಇಲ್ಲಿ ವಿಚಾರಿಸೋಣ.

ವೈದ್ಯ ಶಾಸ್ತ್ರವು ತನ್ನ ಅಧಿಕಾರಕ್ಕೆ ಒಳಪಟ್ಟ ದ್ರವ್ಯವನ್ನು ಭೇಷಜ ದ್ರವ್ಯವೆಂದೂ ಅಭೇಷಜದ್ರವ್ಯವೆಂದೂ ವಿಭಾಗಿಸಿ, ಭೇಷಜದ್ರವ್ಯವನ್ನು ಸ್ವಸ್ಥಹಿತ ಮತ್ತು ಅಸ್ವಸ್ಥಹಿತವೆಂದೂ ಅಭೇಷಜದ್ರವ್ಯವನ್ನು ಬಾಧನ, ಸಾನುಬಾಧನವೆಂದೂ ಪುನಃ ವಿಭಾಗಿಸಿದೆ. ರಸಾಯನ, ವಾಜೀಕರಣ, ವಮನ, ವಿರೇಚನ, ಆಸ್ಥಾಪನ, ಅನುವಾಸನ, ಶಿರೋವಿರೇಚನ, ಶಮನೌಷಧಗಳು, ಅನ್ನ, ಪಾನ, ಪಥ್ಯಾಪಥ್ಯಗಳು, ಭೇಷಜವರ್ಗದಲ್ಲಿ ಸೇರುತ್ತವೆ. ವಿಷ, ಉಪವಿಷ, ಮಹಾವಿಷ, ಅರ್ಥ ಶಾಸ್ತ್ರದಲ್ಲಿ ಹೇಳಿರುವ ಐಂದ್ರಜಾಲಿಕ ಮತ್ತು ಆಭಿಚಾರಿಕಕ್ಕೆ ಸಂಬಂಧಪಟ್ಟ ದ್ರವ್ಯಗಳು ಅಭೇಷಜ ವರ್ಗಕ್ಕೆ ಸೇರುತ್ತವೆ. ಇಲ್ಲಿ ಅಭೇಷಜವೆಂದರೆ ಕಿಂಚಿದ್ಭೇಷಜವೆಂದು ಅರ್ಥ.

## ಆರ್ಷಕಾಲ

ಜಾಂಗಮ, ಔದ್ಭಿದ, ಭೌಮಗಳೆಂಬ ಮೂರು ವರ್ಗಗಳಿಗೆ ಸೇರಿದ ಔಷಧಗಳಲ್ಲಿ ಪ್ರಾಯಃ ಔದ್ಭಿದ ವರ್ಗಕ್ಕೆ ಸೇರಿದ ಔಷಧಿಗಳನ್ನೇ ಋಷಿ ಕಾಲಗಳಲ್ಲಿ ಉಪಯೋಗಿಸುತ್ತಿದ್ದರು ಎಂದು—

ಯತ್ರೌಷಧೀಃ ಸಮಗ್ಮತ ರಾಜಾನಃ ಸಮಿತಾವಿವ ।
ವಿಪ್ರಃ ಸ ಉಚ್ಯತೇ । ಭಿಷಗ್ ರಕ್ಷೋಹಾಽಮೀವಚಾತನಃ ॥

—ಋಕ್. ೧೦, ೯೭, ೬.

ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ ।
ಮನೈಸು ಬಭ್ರೂಣಾಮಹಂ ಶತಂಧಾಮಾನಿ ಸಪ್ತ ಚ ॥

—ಋಕ್. ೧೦, ೯೭, ೧

ಈ ಮಂತ್ರಗಳಿಂದ ಕಂಡುಬರುತ್ತದೆ. ಅಲ್ಲದೆ ಋಗ್ವೇದ ಮತ್ತು ಅಥರ್ವ ವೇದಗಳಲ್ಲಿ ಮಧುವಲ್ಲೀ, ರೋಹಿಣೀ, ಪಿಪ್ಪಲೀ, ಪೃಶ್ನಿಪರ್ಣೀ, ಶ್ಯಾಮಾ, ದಶವೃಕ್ಷ, ಅಪಾಮಾರ್ಗ ಮೊದಲಾದ ಓಷಧಿಗಳನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ.

ಯಥಾಮರಾಣಾಮಮೃತಂ ಯಥಾ ಭೋಗವತಾಂ ಸುರಾ ।
ತಥಾಭವನ್ಮಹರ್ಷೀಣಾಂ ರಸಾಯನವಿಧಿಃ ಪುರಾ ॥

—(ಚ. ಚಿಕಿತ್ಸಾಸ್ಥಾನ ಅ. ೧ ಶ್ಲೋ. ೭೫.) ಚರಕ—ಸುಶ್ರುತದಲ್ಲಿಯೇ ಕಂಡು ಬರುವ ಇಂಥಾ ಬಹು ಪ್ರಮಾಣಗಳಿಂದಲೂ ಋಷಿಗಳು ಔದ್ಭಿದ ವರ್ಗದಲ್ಲಿಯೂ ಭೌಮ ವರ್ಗದಲ್ಲಿಯೂ ಹೇಳಿರುವ ಭೇಷಜದ್ರವ್ಯಗಳನ್ನೇ ಉಪಯೋಗಿಸುತ್ತಿದ್ದರು—ಎಂಬುದು ನಿಶ್ಚಯ. ಋಷಿಕಾಲಗಳಲ್ಲಿ ಓಷಧಿ-ವನಸ್ಪತಿಗಳಿಗೆ ಬಹಳ ಗೌರವವಿತ್ತೆಂದು ಶ್ರೌತ ಮಂತ್ರಗಳಿಂದಲೂ ಸ್ಮಾರ್ತ, ಸೂತ್ರ, ಶ್ಲೋಕಗಳಿಂದಲೂ ಕಂಡು ಬರುತ್ತದೆ. ಮನುಸ್ಮೃತಿಯ ಅಧ್ಯಾಯ ೧, ಶ್ಲೋಕ ೪೯ ರಲ್ಲಿ-

ತಮಸಾ ಬಹುರೂಪೇಣ ವೇಷ್ಟಿತಾ ಕರ್ಮ ಹೇತುನಾ।
ಅಂತಸ್ಸಂಜ್ಞಾ ಭವಂತ್ಯೇತೇ ಸುಖದುಃಖ ಸಮನ್ವಿತಾಃ ॥

ಅರ್ಥ:—ಕರ್ಮಕಾರಣವುಳ್ಳ, ವಿವಿಧ ತಮಸ್ಸಿನಿಂದ ಸುತ್ತಲ್ಪಟ್ಟ, ಒಳಗೇನೇ ಅರಿವುಳ್ಳ ಈ ವೃಕ್ಷಗಳು ಸುಖದುಃಖಗಳಿಂದ ಹೊಂದಲ್ಪಟ್ಟಿವೆ—ಎಂದು ಹೇಳಿದೆ. ಆಗಿನ ಕಾಲದ ಋಷಿಗಳಿಗೆ ಜಂಗಮ ವರ್ಗದಲ್ಲಿ ಇದ್ದಷ್ಟೇ ಪವಿತ್ರ ಬುದ್ಧಿಯು ಔದ್ಭಿದ ವರ್ಗದಲ್ಲಿಯೂ ಇತ್ತೆಂದು ಮೇಲಿನ ಸ್ಮೃತಿಯ ಮಾತಿನಿಂದ ವ್ಯಕ್ತವಾಗುತ್ತದೆ. ಶ್ರೌತ, ಸ್ಮಾರ್ತ, ಸೂತ್ರ, ಪುರಾಣಗಳಲ್ಲಿ ಔದ್ಭಿದ ವರ್ಗದ ವಿಷಯಗಳು ಪುಷ್ಕಲ ವರ್ಣಿಸಲ್ಪಟ್ಟಿದ್ದರೂ ಗೌರವ ಭಯದಿಂದ ಇಲ್ಲಿ ಅವನ್ನು ಬಿಟ್ಟಿರುತ್ತೇನೆ.

ಔದ್ಭಿದ ದ್ರವ್ಯಗಳಲ್ಲಿ ಇನ್ನೊಂದು ವಿಚಾರ. ಅಂದರೆ ದ್ರವ್ಯಗಳಲ್ಲಿ ಸಂಪತ್ಸಾನ್ನಿಧ್ಯ ಮತ್ತು ವಿಪತ್ಸಾನ್ನಿಧ್ಯವೆಂಬ ಎರಡು ವಿಧದ ಸಾನ್ನಿಧ್ಯಗಳಿರುವುವು. ಸಂಪತ್ಸಾನ್ನಿಧ್ಯವಿರುವ ಒಂದು ದ್ರವ್ಯವು ಆರೋಗ್ಯಕ್ಕೆ ಕಾರಣವಾದರೆ ವಿಪತ್ಸಾನ್ನಿಧ್ಯದಿಂದ ಅದೇ ದ್ರವ್ಯವು ಪುರುಷನ ರೋಗಕ್ಕೂ ಕಾರಣವಾಗುತ್ತದೆ. ದ್ರವ್ಯಗಳಲ್ಲಿ ಸಂಪತ್ಸಾನ್ನಿಧ್ಯವು ಅಧಿಕವಾಗಬೇಕಿದ್ದರೆ ಸುಶ್ರುತನು ಸೂತ್ರಸ್ಥಾನ ೩೭ನೇ

ಅಧ್ಯಾಯದಲ್ಲಿ ಹೇಳಿರುವ ದೇಶವಿಶೇಷಗಳಲ್ಲಿಯೂ ಋತುವಿಶೇಷಗಳಲ್ಲಿಯೂ ಔಷಧವಿಶೇಷಗಳನ್ನು ಸಂಗ್ರಹಿಸಬೇಕು. ಹಾಗೆ ಹೇಳಿರುವ ಶಾಸ್ತ್ರವಿಧಿಯಿಂದ ಔದ್ಭಿದ ದ್ರವ್ಯಗಳನ್ನು ಸಂಗ್ರಹಿಸಿದರೆ, ಅವುಗಳಲ್ಲಿ ಸಂಪತ್ಸಾನ್ನಿಧ್ಯವು ಅಧಿಕವಾಗಿ ದ್ರವ್ಯವು ಅಧಿಕ ವೀರ್ಯವತ್ತರವಾಗಿ ಕೆಲಸಮಾಡುವುದು.

## ಔದ್ಭಿದಗಳಲ್ಲಿ ಕೆಲವು ದಿವ್ಯೌಷಧಗಳು

ಮೇದಾ, ಮಹಾಮೇದಾ, ಜೀವಕ, ಋಷಭಕ, ಋದ್ಧಿ, ವೃದ್ಧಿ, ಕಾಕೋಲೀ, ಕ್ಷೀರಕಾಕೋಲೀ, ಬ್ರಹ್ಮಸುವರ್ಚಲಾ, ಆದಿತ್ಯಪರ್ಣೀ, ನಾರೀ ಕಾಷ್ಠಗೋಧಾ, ಸರ್ಪಾ, ಸೋಮ, ಪದ್ಮಾ, ಅಜಾ, ನೀಲಾ, ಶ್ವೇತಕಾಪೋತೀ, ಕೃಷ್ಣಕಾಪೋತೀ, ಗೋನಸೀ, ವಾರಾಹೀ, ಛತ್ರಾ, ಅತಿಚ್ಛತ್ರಾ, ಕರೇಣು ರಜಾ, ಚಕ್ರಕಾ, ಶ್ರಾವಣೀ, ಮಹಾಶ್ರಾವಣೀ, ಗೋಲೋಮೀ, ಅಜಲೋಮೀ, ಮಹಾವೇಗವತೀ—ಈ ದಿವ್ಯೌಷಧಿಗಳ ಪರಿಚಯವೇ ನಮಗಿಲ್ಲವೆಂದರೆ ಅಪರಾಧವಾಗಲಾರದು. ಇನ್ನೂ ಅಭಿಜ್ಞಾನ ಶಾಕುಂತಲ ಏಳನೇ ಅಂಕದಲ್ಲಿ (ಹೇಮಕೂಟದಲ್ಲಿ):—

"ಪ್ರಥಮಾ:—ಸುಣಾದು ಮಹಾರಾಓ । ಏಸಾ ಅವರಾಜಿದಾ ಣಾಮ ಓಸಹೀ ಇಮಸ್ಸ ಜಾತಕಮ್ಮ ಸಮಯೇ ಭಅವದಾ ಮಾರಿಏಣ ದಿಣ್ಣಾ. ಏದಂಕಿಲ ಮಾದಾಪಿದರೋ ಅಪ್ಪಾಣಂಚವಜ್ಜಿಅ ಅವರೋ ಭೂಮಿ ಪಡಿದಂಣ ಗೇಹ್ಣಾದಿ.

ರಾಜಾ:—ಅಥ ಗೃಹ್ಣಾತಿ?

ಪ್ರಥಮಾ:—ತದೋ ತಂ ಸಪ್ಪೋ ಭವಿಅ ದಂಸಇ ।

ರಾಜಾ:—ಭವತೀಭ್ಯಾಂ ಕದಾಚಿದಸ್ಯಾಃ ಪ್ರತ್ಯಕ್ಷೀಕೃತಾ ವಿಕ್ರಿಯಾ?

ಉಭೇ:—ಅಣೇ ಅಸೋ ।"

[ಮೊದಲನೆಯವಳು—ಕೇಳಲಿ, ಮಹಾರಾಜನು. ಇದು ಅಪರಾಜಿತಾ ಎಂದು ಪ್ರಸಿದ್ಧವಾದ ಓಷಧಿಯು. ಈ ಬಾಲಕನ ಜಾತಕರ್ಮ ಸಮಯದಲ್ಲಿ ಇದು ಪೂಜ್ಯರಾದ ಮಾರೀಚರಿಂದ ಕೊಡಲ್ಪಟ್ಟಿತು. ಇದನ್ನು ತಂದೆತಾಯಿಗಳು ಮತ್ತು ತಾನು ನಮ್ಮನ್ನು ಬಿಟ್ಟು, ಭೂಮಿಯಲ್ಲಿ ಬಿದ್ದದ್ದನ್ನು ಬೇರೆ ಯಾರೂ ತೆಗೆಯಲಿಕ್ಕಿಲ್ಲ.

ಅರಸು:—ಒಂದು ವೇಳೆ ತೆಗೆದರೆ....?

ಮೊದಲನೆಯವಳು—ಅಗ್ಗೆ ಸರ್ಪವಾಗಿ ಅವನನ್ನು ಕಚ್ಚುವುದು.

ಅರಸು:—ಯಾವಾಗಲಾದರೂ ನಿಮ್ಮಿಬ್ಬರಿಂದ ಇವರ ವಿಶೇಷ ಮಹಿಮೆಯು ಸಾಕ್ಷಾತ್ಕರಿಸಲ್ಪಟ್ಟಿದೆಯೋ?

ಇಬ್ಬರೂ:—ಅನೇಕ ವೇಳೆ!]

ದ್ರವ್ಯಶಾಸ್ತ್ರದ, ಅನುಭವಿಕೆಯ ಮಹಿಮೆಯನ್ನು ಕೇಳಿದಿರಾ?

"ಪರಯಸ್ತು ವಿಜಾನಂತಿ ಪಾರ್ವತೀಸ್ತ್ರಾಮಹೌಷಧೀಃ ॥. ಶ್ಲೋಕ ೩೯.

ಸಂಜೀವಕರಣೀಂ ದಿವ್ಯಾಂ ವಿಶಲ್ಯಾಂ ದೇವ ನಿರ್ಮಿತಾಂ ॥ ಶ್ಲೋಕ ೩೦.

ಚಂದ್ರಶ್ಚ ನಾಮದ್ರೋಣಶ್ಚ ಕ್ಷೀರೋದೇ ಸಾಗರೋತ್ತಮೇ ।

ಅಮೃತಂ ಯತ್ರ ಮಥಿತಂ ತತ್ರತೇ ಪರಮೌಷಧೀ ॥

—ರಾಮಾಯಣ ಯುದ್ಧ ಕಾಂಡ ಅಧ್ಯಾಯ ೫೦. ಶ್ಲೋಕ ೩೧

ದಕ್ಷಿಣೇ ಶಿಖರೇ ಜಾತಾಂ ಮಹೌಷಧಿಮಿಹಾನಯ ।

ವಿಶಲ್ಯಕರಣೀಂ ನಾಮ್ನಾ ಸಾವರ್ಣ್ಯಕರಣೀಂ ತಥಾ ॥

ಸಂಜೀವ ಕರಣೀಂ ವೀರ ಸಂಧಾನೀಂಚ ಮಹೌಷಧೀಂ ।

—ರಾಮಾಯಣ ಯು. ಕಾಂ. ಅ. ೧೦೩.

ರಾಮಾಯಣ ಯುದ್ಧಕಾಂಡದಲ್ಲಿ ಶಸ್ತ್ರಾಸ್ತ್ರಗಳಿಂದ ಗಾಯಗೊಂಡು ಮೃತಪಟ್ಟ ರಾಮಲಕ್ಷ್ಮಣರನ್ನೂ ಇತರ ಕಪಿ ಸೈನಿಕರನ್ನೂ ಪುನರ್ಜೀವಿಸಿ, ಅಂತಃಶರೀರದಲ್ಲಿದ್ದ ಶಲ್ಯಗಳನ್ನು ಅಪಹರಿಸಿ, ಆ ಗಾಯಗಳನ್ನೂ ಇತರ ಗಾಯಗಳನ್ನೂ ರೋಪಿಸಿ, ಸಂಧಿಚ್ಯುತ ಮತ್ತು ಭಗ್ನ ಚೂರ್ಣಗಳಾದ ಎಲುಬು ಮತ್ತು ಗಂಟುಗಳನ್ನು ತಿರುಗಿ ಸಂಧಾನಿಸಿ, ಮೊದಲಿನ ಮೈಬಣ್ಣವನ್ನು ರಚಿಸಿ, ಇದ್ದಕ್ಕಿದ್ದಹಾಗೆ ಮಾಡಿದ ೧. ಸಂಜೀವಕರಣೀ ೨. ವಿಶಲ್ಯಕರಣೀ ೩. ಸಂಧಾನಕರಣೀ ೪. ಸಾವರ್ಣ್ಯಕರಣೀ ಎಂಬ ದಿವ್ಯೌಷಧಗಳನ್ನು ನಾವು ಬಲ್ಲೆವೇ?

ಅಮೀ ನಕ್ಷತ್ರ ದೇವತ್ಯಾ ವೃಕ್ಷಾಃಸ್ಯುಃ ಸಪ್ತವಿಂಶತಿಃ ।

ಅಶ್ವಿನ್ಯಾದಿ ಕ್ರಮಾದೇಷಾಮೇಷಾ ನಕ್ಷತ್ರ ಪದ್ಧತಿಃ ॥

ರಾಜನಿಘಂಟು ಪರಿಶಿಷ್ಟ ೩೭. ನಕ್ಷತ್ರವೃಕ್ಷಾಃ ಶ್ಲೋ. ೩೬

ನಿಘಂಟುಕಾರನು ತನ್ನ ಗುರುಗಳ ವಚನ, ಬೃಹತ್ಸುಶ್ರುತ, ನಾರದೀಯ, ನಾರಾಯಣೀಯ, ಮತ್ತು ಇತರ ಬೇರೆ ತಂತ್ರಗಳಲ್ಲಿ ವಿವರಿಸಿರುವ ಇಪ್ಪತ್ತೇಳು ನಕ್ಷತ್ರ ದೇವತ್ಯಾ ವೃಕ್ಷಗಳನ್ನು ಹೇಳಿರುತ್ತಾನೆ. ಆದರೆ ಪ್ರಸಿದ್ಧ ವೈದ್ಯರಿಗೆ ಅವುಗಳು ಅಷ್ಟೊಂದು ಉಪಯೋಗಕರವಲ್ಲವೆಂದು ಅವನ ಅಭಿಪ್ರಾಯ.

## ಔದ್ಭಿದೌಷಧಗಳ ಪ್ರಥಮ ಪ್ರಯೋಗಕಾಲ

ಪ್ರಥಮಪ್ರಯೋಗಕಾಲನೆಂದರೆ ಆರ್ಷಕಾಲ ಮತ್ತು ಮಾನುಷಕಾಲದ ಮಧ್ಯಕಾಲ. ಈ ಕಾಲದಲ್ಲಿ ಆರ್ಷಕಾಲದ ಪ್ರಭಾವವು ಪೂರಾ ಹೋಗಿಲ್ಲ. ಆ ಆರ್ಷಕಾಲದಲ್ಲಿ ಸ್ವಾಸ್ಥ್ಯಸಂರಕ್ಷಣೆಯು, ಅಸ್ವಾಸ್ಥ್ಯದ ಸಂಹರಣೆಯು ಔದ್ಭಿದ ದ್ರವ್ಯಗಳಿಂದಲೇ ನಡೆಯುತ್ತಿತ್ತು.

ಔಷಧೀರ್ನಾಮರೂಪಾಭ್ಯಾಂ । ಜಾನತೇಹ್ಯಜಪಾವನೇ ॥

ಅವಿಪಾಶ್ಚೈವ ಗೋಪಾಶ್ಚ । ಯೇಚಾನ್ಯೇ ವನವಾಸಿನಃ॥

ನ ನಾಮಜ್ಞಾನಮಾತ್ರೇಣ । ರೂಪಜ್ಞಾನೇನ ವಾ ಪುನಃ ।
ಔಷಧೀನಾಂ ಪರಾಂಪ್ರಾಪ್ತಿಂ । ಕಶ್ಚಿದ್ವೇದಿತುಮರ್ಹತಿ ॥
ಯೋಗಜ್ಞಸ್ತಸ್ಯ ರೂಪಜ್ಞಸ್ತಾಸಾಂ ತತ್ವವಿದುಚ್ಯತೇ ।

—ಚರಕ. ಸೂತ್ರ. ಅ. ೧. ಶ್ಲೋಕ. ೧೧೯, ೧೨೦, ೧೨೧

ಗೋಪಾಲಾಸ್ತಾಪಸಾವ್ಯಾಧಾ ಯೇಚಾನ್ಯೇ ವನಚಾರಿಣಃ ।
ಮೂಲಾಹಾರಾಶ್ಚಯೇ ತೇಭ್ಯೋ ಭೇಷಜವ್ಯಕ್ತಿರಿಷ್ಯತೇ ॥

— ಸುಶ್ರುತ. ಸೂತ್ರ. ಅ. ೩೬. ಶ್ಲೋ. ೩

ಕಿರಾತ ಗೋಪಾಲಕ ತಾಪಸಾದ್ಯಾಃ। ವನೇಚರಾಸ್ತತ್ಕುಶಲಾಸ್ತಥಾನ್ಯೇ॥
ವಿದಂತಿ ನಾನಾವಿಧ ಭೇಷಜಾನಾಂ। ಪ್ರಮಾಣ ವರ್ಣಾಕೃತಿ ನಾಮಜಾತಿ॥

ಧನ್ವಂತರಿ ನಿಘಂಟು ಪ್ರಸ್ತಾವ ಶ್ಲೋ. ೬

ಈ ಮೇಲಿನ ಶ್ಲೋಕಗಳಲ್ಲಿ ದ್ರವ್ಯಗಳ ರಸ, ಗುಣ, ವೀರ್ಯ, ಪ್ರಭಾವ ವಿಶಿಷ್ಟಕರ್ಮಗಳನ್ನು ಕುರಿತು ಏನೂ ಹೇಳಲಿಲ್ಲ. ಕುರಿ, ಆಡು, ದನಗಳನ್ನು ಕಾಯುವವರು, ಬೇರೆ ಬೇರೆ ವನವಾಸಿಗಳು, ಮೂಲನಿವಾಸಿಗಳು, ತಾಪಸರು, ಕಂದ ಜೀವಿಗಳು, ವ್ಯಾಧರು ಇವರು ಭೇಷಜಗಳ ರೂಪವನ್ನೂ ಹೆಸರನ್ನೂ ತಿಳಿದವ ರಾಗಿರುತ್ತಾರೆ. ಇವರುಗಳಿಂದ ಭೇಷಜಗಳ ಪರಿಚಯವು ಆಗುವುದು. ಇಷ್ಟು ಮಾತ್ರ ತಿಳಕೊಂಡರೆ ಇವನು ಕೃತಕೃತ್ಯನಾಗುವುದಿಲ್ಲ. ಇವನ್ನು ಉಪಯೋಗಿ ಸುವುದನ್ನು ತಿಳಕೊಳ್ಳಬೇಕೆಂದು ಹೇಳುತ್ತದೆ. ಇದರಿಂದ ನಮಗೇನು ಕಂಡು ಬರುತ್ತದೆ? ಆ ಕಾಲದಲ್ಲಿ ವೈದ್ಯರಿಗೆ ಔಷಧಗಳ ರೂಪ, ಪ್ರಮಾಣ, ಹೆಸರು, ಮತ್ತು ಯಾವ ರೋಗಕ್ಕೆ ಕೊಡುವುದು ಎಂದು ಮಾತ್ರ ಗೊತ್ತಿತ್ತಲ್ಲದೆ ಅದಕ್ಕಿಂತ ಹೆಚ್ಚಿನ ಜ್ಞಾನವನ್ನು ಅವರಿಂದ ನಿರೀಕ್ಷಿಸುತಿದ್ದಿಲ್ಲ., ಅದಕ್ಕನುಗುಣವಾಗಿ—

ವಿಕಾರನಾಮಾ ಕುಶಲೋ ನ ಜಿಹ್ರೀಯಾತ್ಕದಾಚನ ।
ನಹಿ ಸರ್ವ ವಿಕಾರಾಣಾಂ ನಾಮ ತೋಸ್ತಿಧ್ರುವಾಗತಿಃ ॥

—ಚರಕ. ಸೂ. ಅ. ೧೮. ಶ್ಲೋ. ೪

ಈ ಪೂರ್ವದಲ್ಲಿ ಸಮುದಾಯದಿಂದ ರೋಗಗಳ ಹೆಸರನ್ನು ತಿಳಿದವರು ಕುಶಲ ವೈದ್ಯರೆಂದು ಅನ್ನಿಸುತಿದ್ದರು. ಅಲ್ಲದೆ ಅದಕ್ಕಿಂತ ಹೆಚ್ಚಿನ ಜ್ಞಾನವನ್ನು ಅವ ರಿಂದ ನಿರೀಕ್ಷಿಸುತಿದ್ದಿಲ್ಲ, ಅಂದರೆ ಆ ಕಾಲದಲ್ಲಿ ರೋಗಗಳ ನಿದಾನ, ಪೂರ್ವಲಕ್ಷಣ, ಲಕ್ಷಣಾದಿ ಜ್ಞಾನದ ಗೋಜಿಗೂ ದ್ರವ್ಯದಲ್ಲಿರುವ ರಸ, ಗುಣ, ವೀರ್ಯಾದಿ ಜ್ಞಾನ ಗಳ ಗೋಜಿಗೂ ಹೋಗುತ್ತಿರಲಿಲ್ಲ. ಗೋಷ್ಪಾರೆಯಿಂದ ರೋಗಗಳನ್ನು ತಿಳ ಕೊಂಡು, ಗೋಷ್ಪಾರೆಯಿಂದ ಔಷಧ ದ್ರವ್ಯಗಳನ್ನು ತಿಳಕೊಂಡು, ಚಿಕಿತ್ಸೆ ಸುತ್ತಿದ್ದರೆಂದು ಊಹಿಸಬಹುದಾಗುತ್ತದೆ. ಈ ಊಹನೆಯನ್ನು—

ತದೇವ ಯುಕ್ತಂ ಭೈಷಜ್ಯಂ ಯದಾರೋಗ್ಯಾಯ ಕಲ್ಪತೇ ।
ಸಚೈವ ಭಿಷಜಾಂ ಶ್ರೇಷ್ಠೋ ರೋಗೇಭ್ಯೋಯಃ ಪ್ರಮೋಚಯೇತ್

—ಚರಕ. ಸೂತ್ರ. ಅ. ೧. ಶ್ಲೋಕ ೧೩೪

ನೌಷಧೀರ್ಹೇತುಭಿರ್ವಿದ್ವಾನ್ ಪರೀಕ್ಷೇತ ಕಥಂಚನ ।
ಸಹಸ್ರೇಣಾಪಿ ಹೇತೂನಾಂ ನಾಂಬಷ್ಠಾದಿರ್ವಿರೇಚಯೇತ್ ॥
ತಸ್ಮಾತ್ತಿಷ್ಠೇತ್ತುಮತಿಮಾನ್ ಆಗಮೇನತು ಹೇತುಷು ।

—ಸುಶ್ರುತ. ಸೂತ್ರ. ಅ. ೪೦. ಶ್ಲೋ. ೧೮-೧೯.

ಈ ಮೇಲೆ ಹೇಳಿರುವ ಚರಕ—ಸುಶ್ರುತರ ವಚನಗಳು ಪುಷ್ಟೀಕರಿಸುತ್ತವೆ. ಆರ್ಷಕಾಲದಲ್ಲಿ ಲಕ್ಷ್ಯೈಕಚಕ್ಷುಷ್ಕರಾದ ಋಷಿಗಳು ರೋಗ ಮತ್ತು ದ್ರವ್ಯಗಳ ಪ್ರತ್ಯಕ್ಷಜ್ಞಾನದಿಂದ ರೋಗಿಗಳನ್ನು ಚಿಕಿತ್ಸಿಸುತ್ತಿದ್ದರು. ಆ ಅನುಭವವು ಕ್ರಮೇಣ ರೂಢಿಯಲ್ಲಿ ನಿಂತದ್ದರಿಂದ ಮಧ್ಯಕಾಲದವರು ಜ್ಞಾನಕ್ಷೇತ್ರದಲ್ಲಿ ಮುಂದೊತ್ತಲಿಲ್ಲ.

## ಮಾನುಷಕಾಲ ವ ವಿಜ್ಞಾನಕಾಲ

"ಮೂಲತತ್ವ—ಯಾವ ಗುರುತ್ವಾದಿ ಗುಣಗಳು ದ್ರವ್ಯಗಳಲ್ಲಿ ಹೇಳಲ್ಪಟ್ಟಿವೆಯೋ ಆ ಗುರುತ್ವಾದಿ ಗುಣಗಳು ಶರೀರದಲ್ಲಿಯೂ ದೋಷಗಳಲ್ಲಿಯೂ ಹೇಳಲ್ಪಟ್ಟಿವೆ. ಆದ್ದರಿಂದ ಶರೀರ ಮತ್ತು ದೋಷಗಳ ಸ್ಥಿತಿ, ವೃದ್ಧಿ, ಕ್ಷಯಗಳು ದ್ರವ್ಯ ಹೇತುಕಗಳಾಗಿವೆ. —ಅಷ್ಟಾಂಗ ಸಂಗ್ರಹ. ದ್ರವ್ಯಾದಿ ವಿಜ್ಞಾನೀಯ. ಅ. ೧೭."

ಈ ಕಾಲದಲ್ಲಿ ಮನುಷ್ಯರಿಗೆ ದ್ರವ್ಯದಲ್ಲಿಯೂ ರೋಗದಲ್ಲಿಯೂ ಸಾಕಲ್ಯವಾಗಿ ಪ್ರತ್ಯಕ್ಷ ಜ್ಞಾನವು ಇರುತ್ತಿರಲಿಲ್ಲ. ಆದ್ದರಿಂದ ಋಷಿಗಳು ಹೇತುಸ್ಕಂಧ, ಲಿಂಗಸ್ಕಂಧ ಮತ್ತು ಓಷಧಿಸ್ಕಂಧವೆಂದು ವಿಭಾಗಿಸಲ್ಪಟ್ಟ ಲಕ್ಷಣ ಶಾಸ್ತ್ರವನ್ನು ರಚಿಸಿದರು. ಅಂದಿನಿಂದ ರೋಗವೆಂದರೇನು? ಅದು ಯಾವ ಕಾರಣಗಳಿಂದ ಉತ್ಪನ್ನವಾಗುತ್ತದೆ? ಉತ್ಪನ್ನವಾದದ್ದು ಹೇಗೆ ವೃದ್ಧಿಯಾಗುತ್ತದೆ? ವೃದ್ಧಿಯನ್ನು ಹೊಂದಿ, ಹೇಗೆ ಶಾಂತವಾಗುತ್ತದೆ? ಅಥವಾ ಹೇಗೆ ರೋಗಿಯನ್ನು ನಾಶಮಾಡುತ್ತದೆಂಬ ವಿಚಾರಗಳನ್ನು ಮಾಡಿ, ನಿದಾನ, ಪೂರ್ವಲಕ್ಷಣ, ಲಕ್ಷಣ, ಉಪಶಯ, ಸಂಪ್ರಾಪ್ತಿ, ರಿಷ್ಟಗಳೆಂಬ ವಿಚಾರ ಸಾಧನಗಳನ್ನು ಪ್ರಕಾಶಿಸಿದರು. ಇನ್ನೊಂದೆಡೆ ಅದಕ್ಕೆ ಪ್ರತಿಪಕ್ಷವಾದ ದ್ರವ್ಯಗಳು ಹೇಗೆ ರೋಗಗಳನ್ನು ಆಯಾಯಾ ಅವಸ್ಥೆಯಲ್ಲಿ ಗುಣಪಡಿಸುತ್ತವೆ? ಅಥವಾ ಅಕಿಂಚಿತ್ಕರವಾಗುತ್ತವೆ?--ಎಂದು ವಿಚಾರಿಸಿ, ದ್ರವ್ಯಗಳಲ್ಲಿರುವ ರಸ, ಗುಣ, ವೀರ್ಯ, ವಿಪಾಕ, ಪ್ರಭಾವಗಳನ್ನು ಅನ್ವೇಷಣ ಮಾಡಿ, ಅದನ್ನು ತಿಳಕೊಳ್ಳುವ ವಿಚಾರಸಾಧನಗಳನ್ನು ಪ್ರಕಾಶಿಸಿದರು. ವ್ಯಾಪಕ ದೃಷ್ಟಿಯಿಂದ ದ್ರವ್ಯದಲ್ಲಿ ಲಕ್ಷ್ಯಜ್ಞಾನವಿಲ್ಲದಿರುವ ನಾವು ಲಕ್ಷಣ ಶಾಸ್ತ್ರದಿಂದ ದ್ರವ್ಯ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ದ್ರವ್ಯ ಸಂಭಾಷಾ ಪರಿಷತ್ತಿನ ಉದ್ದೇಶವು ದ್ರವ್ಯವಿಮರ್ಶನೆಯಾದ್ದರಿಂದ ನಮ್ಮ ಮೀಮಾಂಸೆಗೆ ದ್ರವ್ಯವೇ ವಿಷಯವಾಗಿರುತ್ತದೆ.

# ದ್ರವ್ಯ ವಿಮರ್ಶನೆ

ವಿಮರ್ಶನೆಯಿಂದ ದ್ರವ್ಯವು ಪಂಚಭೂತಾತ್ಮಕವಾಗಿದೆ. ಇದರಲ್ಲಿ ಮಧುರ, ಅಮ್ಲ, ಲವಣ, ತಿಕ್ತ, ಕಟು, ಕಷಾಯಗಳೆಂಬ ಆರು ರಸಗಳಿವೆ; ಈ ಆರು ರಸಗಳು ಸಂಯೋಗವಿಕಲ್ಪನೆಯಿಂದ ಪ್ರಧಾನವಾಗಿ 63 ರಸಗಳಾಗುತ್ತವೆ. ಈ 63 ರಸಗಳು ಅನುರಸ ತದ್ವಿಕಲ್ಪನಾದಿಗಳಿಂದ ಅನಂತರಸಗಳಾಗುತ್ತವೆ. ಗುರು, ಲಘು, ಮಂದ, ತೀಕ್ಷ್ಣ, ಹಿಮ, ಉಷ್ಣ, ಸ್ನಿಗ್ಧ, ರೂಕ್ಷ, ಶ್ಲಕ್ಷ್ಣ, ಖರ, ಸಾಂದ್ರ, ವಿರಲ, ಮೃದು, ಕಠಿಣ, ಸ್ಥಿರ, ಸರ, ಸೂಕ್ಷ್ಮ, ಸ್ಥೂಲ, ವಿಶದ, ಪಿಚ್ಛಿಲಗಳೆಂಬ ಇಪ್ಪತ್ತು ಗುಣಗಳಿವೆ. ಕೆಲವರ ಪಕ್ಷದಲ್ಲಿ ಗುರು, ಲಘು, ಶೀತ, ಉಷ್ಣ, ಸ್ನಿಗ್ಧ, ರೂಕ್ಷ, ಮೃದು, ಕಠಿಣಗಳೆಂಬ ಎಂಟು ವೀರ್ಯಗಳು; ಕೆಲವರ ಪಕ್ಷದಲ್ಲಿ ಶೀತ, ಉಷ್ಣಗಳೆಂಬ ಎರಡೇ ವೀರ್ಯಗಳು. ಮತ್ತೆ ಕೆಲವರ ಪಕ್ಷದಲ್ಲಿ ಮಧುರ, ಅಮ್ಲ, ಲವಣಗಳೆಂಬ ಮೂರು ವಿಪಾಕಗಳಿವೆ. ಇನ್ನೂ ಕೆಲವರ ಪಕ್ಷದಲ್ಲಿ ಮಧುರ, ಕಟುಗಳೆಂಬ ಎರಡೇ ವಿಪಾಕಗಳು. ಮತ್ತೆ ಕೆಲವರ ಪಕ್ಷದಲ್ಲಿ ಮಧುರ, ಅಮ್ಲ, ಲವಣ, ಕಟು, ತಿಕ್ತ, ಕಷಾಯಗಳೆಂಬ ಆರು ವಿಪಾಕಗಳು ಇವೆ. ಇವುಗಳಲ್ಲದೆ ಕೆಲವು ದ್ರವ್ಯಗಳಲ್ಲಿ ಪ್ರಭಾವವೆಂಬ ಅಚಿಂತ್ಯಶಕ್ತಿಯು ಇದೆ. ನಮ್ಮ ಸಿದ್ಧಾಂತದಲ್ಲಿ ಚಿಕಿತ್ಸೆಯು ರಸದಿಂದಲೇ ಪ್ರಾರಂಭವಾಗುತ್ತದೆ. ಪಾಂಚಭೌತಿಕ ಸೃಷ್ಟಿಯಲ್ಲಿ ಷಡ್ರಸಗಳು ಪ್ರತ್ಯಕ್ಷವಾಗಿ ಉಪಸ್ಥಿತಗಳಾಗಿವೆ. ಭೌತಿಕದಿಂದ ಚಿಕಿತ್ಸಾಶಾಸ್ತ್ರವನ್ನು ಆರಂಭಮಾಡಿಕೊಂಡರೆ ವಿಭಿನ್ನಗಳಾದ ಐದೇ ಭೌತಿಕಗಳಾಗಿ ಒಂದು ರಸವು ಪರಿಶಿಷ್ಟವಾಗಿ ಉಳಿಯುತ್ತದೆ. ಆದುದರಿಂದ ರಸದಿಂದಲೇ ಚಿಕಿತ್ಸಾರಂಭವನ್ನು ಮಾಡುವುದು ಯುಕ್ತಿಯುಕ್ತವಾಗಿದೆ.

ರಸದಿಂದ ಚಿಕಿತ್ಸಾಶಾಸ್ತ್ರವನ್ನು ಆರಂಭ ಮಾಡಲಿಕ್ಕೆ ಇನ್ನೊಂದು ಕಾರಣವಿದೆ. ದ್ರವ್ಯಗಳು ಅತಿಬಹುಲಗಳಾಗಿರುವುದರಿಂದ ಅಸಂಖ್ಯೇಯಗಳು— ಅನತಿಬಹುಲಗಳಾಗಿರುವುದರಿಂದ ರಸಗಳು ಪರಿಸಂಖ್ಯೇಯಗಳು—ಆದುದರಿಂದ ಸೌಕರ್ಯಕ್ಕಾಗಿಯೂ ಲಾಘವಕ್ಕಾಗಿಯೂ ರಸದಿಂದ ಚಿಕಿತ್ಸಾಶಾಸ್ತ್ರವನ್ನು ಆರಂಭಮಾಡಿದ್ದಾರೆ. ಇಲ್ಲಿ ಇನ್ನೊಂದು ಜಿಜ್ಞಾಸೆಯಿದೆ. ಪರಸ್ಪರ ವಿರುದ್ಧ ಧರ್ಮವುಳ್ಳ ರಸ, ಗುಣ, ವೀರ್ಯ, ವಿಪಾಕಗಳು ಏಕಾಶ್ರಯದಲ್ಲಿ ಅವಿರುದ್ಧ ಧರ್ಮದಿಂದ ಹೇಗೆ ನಿಲ್ಲುತ್ತವೆ ? ಮತ್ತು ಐಕ್ಯಭಾವದಿಂದ ಸಾಧ್ಯವಾಗುವ ಸ್ವಾಸ್ಥ್ಯಸಂರಕ್ಷಣೆ ಮತ್ತು ಅಸ್ವಾಸ್ಥ್ಯನಿರ್ಹರಣೆ ಎಂಬ ಕಾರ್ಯಗಳನ್ನು ಹೇಗೆ ಮಾಡುತ್ತವೆ ? —ಎಂದು. ಕಾರ್ಯಸಾಧನೆ ವಿಷಯದಲ್ಲಿ ಅನ್ಯೋನ್ಯವಿರೋಧಿಗಳಾದ ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳು ವಾತ, ಪಿತ್ತ, ಶ್ಲೇಷ್ಮಗಳೆಂಬ ದೋಷಗಳು ಏಕಾಶ್ರಯದಲ್ಲಿ ಅನ್ಯೋನ್ಯ ವಿಘಾತಿಗಳಾಗದೆ ಹೇಗೆ ಕಾರ್ಯಸಾಧನೆಯನ್ನು ಮಾಡುತ್ತವೋ ಅದೇ ರೀತಿಯಲ್ಲಿ ರಸಾದಿಗಳು ಕಾರ್ಯಸಾಧನೆ

ಯನ್ನು ಮಾಡುತ್ತವೆ. ಸಾಮಾನ್ಯವಾಗಿ ಕೆಲವು ದ್ರವ್ಯಗಳು ರಸದಿಂದಲೂ ಕೆಲವು ಗುಣಗಳಿಂದಲೂ ಕೆಲವು ವಿಪಾಕಗಳಿಂದಲೂ ಮತ್ತೆ ಕೆಲವು ವೀರ್ಯಗಳಿಂದಲೂ ಇನ್ನೂ ಕೆಲವು ಪ್ರಭಾವಗಳಿಂದಲೂ ಕಾರ್ಯವನ್ನು ಮಾಡುತ್ತವೆ. ರಸಾದಿಗಳಲ್ಲಿ ಬಲಾಬಲ ಪ್ರಸಂಗಗಳು ಬಂದರೆ ಅತಿಬಲವಾದದ್ದು ಹೀನಬಲವನ್ನು ತಿರಸ್ಕರಿಸಿ, ಕೆಲಸಮಾಡುತ್ತದೆ. ವಿರುದ್ಧಗುಣಸಂಯೋಗಗಳಲ್ಲಿ ಅಧಿಕವು ಅಲ್ಪವನ್ನು ಗೆಲ್ಲುತ್ತದೆ. ಸಾಮಾನ್ಯವಾಗಿ ರಸವನ್ನು ವಿಪಾಕವೂ ಅವೆರಡುಗಳನ್ನು ವೀರ್ಯವೂ ಆ ಮೂರನ್ನು ಪ್ರಭಾವವೂ ಜಯಿಸಿ, ಕಾರ್ಯವನ್ನು ಮಾಡುತ್ತದೆ. ಇವೆಲ್ಲ ಸಮಬಲಗಳಾದರೆ ಸ್ವಾಭಾವಿಕ ಬಲವು ಅವಿಶಿಷ್ಟ ಬಲಗಳನ್ನು ಜಯಿಸಿ, ಕಾರ್ಯವನ್ನು ಮಾಡುತ್ತದೆ.

ಮಹಾನುಭಾವರೇ, ದ್ರವ್ಯಜ್ಞರಿಗೆ ರಸ, ಗುಣ, ವೀರ್ಯ, ವಿಪಾಕಗಳ ವಿಮರ್ಶನೆಯು ಬಹು ಮುಖ್ಯವಾಗಿದ್ದದ್ದರಿಂದ ಈ ವಿಷಯದಲ್ಲಿ ನಾನು ಹೆಚ್ಚಿನ ಸಂಗತಿಯನ್ನು ಹೇಳಬೇಕೆಂತ ಇದ್ದೆ. ಆದರೆ ಚಿಕಿತ್ಸಾಶಾಸ್ತ್ರದಲ್ಲಿ ಅಲ್ಪ ವಿದ್ಯಾರ್ಥಿಯಿಂದ ಆರಂಭಿಸಿ, ಅಧಿಕ ವಿದ್ವಾಂಸರ ವರೆಗಿನವರಿಗೆ ಈ ವಿಷಯಗಳು ತಿಳಿದವುಗಳೇ ಆಗಿರುತ್ತವೆ. ಮತ್ತು ಈ ಸಭೆಯಲ್ಲಿರುವ ಅನೇಕ ಮಹನೀಯರು ಪ್ರಬಂಧಗಳನ್ನೂ ವ್ಯಾಖ್ಯಾನಗಳನ್ನೂ ಈ ವಿಷಯದಲ್ಲಿ ಮಾಡಲಿಕ್ಕೆ ಸಾಕು. ಈ ಕಾರಣಗಳಿಂದಲೂ ಇನ್ನೂ ಕೆಲವು ಪ್ರತ್ಯನುಕೂಲತೆಗಳು ಒದಗಿದ್ದರಿಂದಲೂ ಈ ವಿಷಯವನ್ನು ಇಲ್ಲಿಯೇ ನಿಲ್ಲಿಸುವ ಪ್ರಸಂಗ ಬಂತು.

## ಉಪಸಂಹಾರ

ದ್ರವ್ಯ ಸಂಭಾಷಾ ಪರಿಷತ್ತು ಅನ್ನ, ಪಾನ, ಪಥ್ಯ, ಅಪಥ್ಯ, ಚಿಕಿತ್ಸೆ ಮೊದಲಾದವುಗಳ ಪ್ರಕರಣಗಳಲ್ಲಿ ಉಕ್ತವಾಗಿರುವ ಔಷಧ ದ್ರವ್ಯಗಳಲ್ಲಿರುವ ನಮ್ಮ ಸಂದೇಹವನ್ನು ತೆಗೆದು, ನಿಶ್ಚಿತಜ್ಞಾನವನ್ನು ಚಿಕಿತ್ಸಕರೊಳಗೆ ಉಂಟು ಮಾಡುವಂತೆ ಐಕ್ಯದಿಂದ ನಾವೆಲ್ಲರೂ ಪ್ರಯತ್ನಿಸಬೇಕು. ಹಾಗೆ ಪ್ರಯತ್ನಿಸುವ ನಮಗೆ ಶ್ರೀ ಧನ್ವಂತರಿಯು ಅನುಗ್ರಹವನ್ನು ಮಾಡಲಿ ಎಂದು ಹೇಳಿ, ಮುಂದಕ್ಕೆ ತಾ. 17—7—'41ರಲ್ಲಿ ಬೊಂಬಾಯಿಯ ರಾಮಬಿಲಾಸ್ ಆನಂದೀಲಾಲ್ ಪೋದಾರ್ ಆಯುರ್ವೇದಿಕ್ ಕಾಲೇಜಿನ ಉದ್ಘಾಟನಾ ಸಂದರ್ಭದಲ್ಲಿ ಬೊಂಬಾಯಿಯ ಗವರ್ನರರ ಎಡ್ವೈಜರ್ ಶ್ರೀ. ಯಚ್. ಯಫ್. ನ್ಯಾಟ್—ಮಹಾಶಯರು ಹೇಳಿದ ಕೆಲವು ಮಾತುಗಳನ್ನು ತಿಳಿಸಿ, ನನ್ನ ಭಾಷಣವನ್ನು ಮುಗಿಸುತ್ತೇನೆ.

"In these days, every science had to welcome strangers within its gates, to test and prove them

whether they be true or false, and if true, to embody them in its own system—if necessary, rejecting from that system, such parts as will no longer stand the test. If a science fails to do so, and adopts a policy of isolation and of withdrawal from the stream of human progress, then its power of helping humanity inevitably decreases, and eventually that science fossilises into a mere superstition—an affair of spells and mantrams, of charms and incantations, of warlocks and witch-doctors"

|| ಶ್ರೀ ಧನ್ವಂತರಯೇ ನಮಃ ||



ರಾಷ್ಟ್ರಬಂಧು ಪ್ರೆಸ್, ಮಂಗಳೂರು

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941

## ಸ್ವಾಗತಸಮಿತಿಯ ಕಾರ್ಯನಿರ್ವಾಹಕ ಶಾಖೆಗಳ ಕಾರ್ಯನಿರ್ವಾಹಕರು.



ಶ್ರೀ॥ ಎಸ್. ಎ. ಪಂಡಿತ್,
ಪ್ರೊ॥ ಮೈಸೂರು ಆಯುರ್ವೇದಿಕ್ ಫಾರ್ಮಸಿ, ಮೈಸೂರು.
(ಆರ್ಥಿಕಶಾಖಾ)



ಶ್ರೀ॥ ಎನ್. ನರಸಿಂಹಯ್ಯನವರು,
ಪಂಡಿತ್ ಅಂಡ್ ಬ್ಯಾಂಕರ್, ಮೈಸೂರು.
(ಉಪಚಾರಶಾಖಾ)



ಶ್ರೀ॥ ಬಿ. ಎಸ್. ರಾಮಕೃಷ್ಣಯ್ಯ, ಆ॥ ವಿದ್ವಾನ್,
ಸಿಟಿ ಕೋ-ಆಪರೇಟಿವ್ ಬ್ಯಾಂಕ್ ಲಿ., ಮೈಸೂರು.
(ಸರ್ವಸಾಮಾನ್ಯವಿಚಾರಣಾಶಾಖಾ)

# ರಸಾಯನ ಸಂಭಾಷಾಪರಿಷತ್ತಿನ ಆರಂಭ ಭಾಷಣ.

---

(ಪಂ॥ ಎಲ್. ನರಸಿಂಹಮೂರ್ತಿ L.A.M.S. ತುಮಕೂರು) ಇವರಿಂದ

ಸುಧಾಕುಂಭಂ ಹಸ್ತೇದಧದಮರತಾರ್ಥಂ ಸುಮನಸಾಂ ।
ರಹಸ್ಯಂ ಜಿಹ್ವಾಗ್ರೇ ಗದಹರ ಮಥರ್ವೋಪನಿಷದಾಮ್ ॥
ಮಣಿಂ ಶ್ರೀವತ್ಸಾಂಕೇ ಹೃದಿ ಜಲನಿಧಿಯೋಜನಿಪುರಾ ।
ವಿನಿಘ್ನನ್ ವಿಘ್ನಂವಃ ಸುಖಯತು ಸ ಧನ್ವಂತರಿವಿಭುಃ ॥

ಮಾನ್ಯ ಮಹನೀಯರುಗಳೆ,

ತಾವುಗಳು ಅತ್ಯಲ್ಪನಾದ ನನಗೆ ಈ ಸಮಾರಂಭದಲ್ಲಿ ಇಂತಹ ಉತ್ತಮವಾದ ಗೌರವವನ್ನು ಕೊಟ್ಟಿರುವದಕ್ಕಾಗಿ ತಮ್ಮಲ್ಲಿ ಚಿರಋಣಿಯಾಗಿದ್ದೇನೆ. ಇಲ್ಲಿ ನೆರೆದಿರುವವರಲ್ಲಿ ಗುರುಗಳೂ ಪೂಜ್ಯರೂ ಮತ್ತು ಜ್ಯೇಷ್ಠಬಾಂಧವರುಗಳೂ ಅನೇಕರಿದ್ದಾರೆ. ಇಷ್ಟು ಜನರೆದುರಿನಲ್ಲಿ ನನ್ನನ್ನು ಈ ಸ್ಥಾನದಲ್ಲಿ ಕೂಡಿಸಿರುವದನ್ನು ನೋಡಿದರೆ ಸರ್ವರಲ್ಲಿಯೂ ಸರ್ವಾಂತರ್ಯಾಮಿಯಾದ ಭಗವಂತನು ಪೂಜ್ಯ ಪೂಜಕ ಭಾವದಿಂದ ತಾನೇ ಈ ರೂಪದಲ್ಲಿ ತಮ್ಮಿಂದ ಗೌರವಿಸಲ್ಪಡುತ್ತಿದ್ದಾನೆಯೆ ಹೊರತು ನನ್ನ ಈ ಶರೀರಕ್ಕೆ ಸಲ್ಲತಕ್ಕುದಲ್ಲ, ಇದು ನನ್ನನ್ನು ಈ ಸ್ಥಾನಕ್ಕೇರಿಸಿರುವ ತಮಗೆ ಸೇರತಕ್ಕದ್ದಿದೆ. ಆದಾಗ್ಯೂ ತಮ್ಮಗಳ ಆಜ್ಞೆಯನ್ನು ಶಿರಸಾವಹಿಸಿ ನನ್ನ ಕಾರ್ಯದಲ್ಲಿ ಮುಂದುವರಿಯುತ್ತೇನೆ.

ವಿದ್ವತ್ಸಭೆಗಳಲ್ಲಿ ಚರ್ಚಾರ್ಹವಾದ ವಿಷಯಗಳನ್ನು ಎಲ್ಲ ಶಾಸ್ತ್ರವೇತ್ತರುಗಳಿಂದಲೂ ಚರ್ಚಿಸಲು ಅವಕಾಶವುಂಟುಮಾಡಿಕೊಡುವದು, ಸಮ್ಮೇಲನದ ಕಾರ್ಯಕರ್ತರುಗಳ ಒಂದು ಮುಖ್ಯ ಕರ್ತವ್ಯ. ತದನುಸಾರವಾಗಿ ಈವರೆಗೆ ರಾ. ರಾ. ರಾಮರಾವ ದೇಸಾಯಿಯವರ ಅಧ್ಯಕ್ಷತೆಯಲ್ಲಿ ಚಿಕಿತ್ಸಾಸಂಭಾಷಾ ಪರಿಷತ್ತು ಮತ್ತು ವೈದ್ಯ ಭೂಷಣ ಇತ್ಯಾದಿ, ಬಿರುದಾಂಕಿತ ಎಂ. ವ್ಹಿ. ಶಾಸ್ತ್ರಿಗಳವರ ಅಧ್ಯಕ್ಷತೆಯಲ್ಲಿ ದ್ರವ್ಯಸಂಭಾಷಾಪರಿಷತ್ತು ನಡೆದು ತಮ್ಮಗಳಿಗೆಲ್ಲಾ ಒಂದು ವಿಷಯಭಾಂಡಾರವೇ ಒದಗಿರುತ್ತದೆ. ಆದರೆ ಈಗ ನಡೆಯುತ್ತಿರುವ ರಸಾಯನಾ ಸಂಭಾಷಾಪರಿಷತ್ತೂ ಕೂಡ ಯಶಸ್ವಿಯಾಗುವಂತೆ ಮಾಡುವ ಭಾರವು ಈ ಪರಿಷತ್ತಿನಲ್ಲಿ ಭಾಗಿಗಳಾಗಿರುವ ತಮಗೆ ಸೇರಿದ್ದು. ಆದುದರಿಂದ ತಮ್ಮೆಲ್ಲರ ಸಹಕಾರದಿಂದ ಯಥಾಮತಿಯಾಗಿ ನನ್ನ ಕಾರ್ಯಾರಂಭಮಾಡುತ್ತಿದ್ದೇನೆ.

ಯಜ್ಜರಾವ್ಯಾಧಿ ವಿಧ್ವಂಸಿ ವಯಸಃ ಸ್ಥಾಪನಂ ತಥಾ ।
ಚಕ್ಷುಷ್ಯಂ ಬೃಂಹಣಂ ವೃಷ್ಯಂ ಭೇಷಜಂ ತದ್ರಸಾಯನಂ ॥
ಲಾಭೋಪಾಯೋ ಹಿ ಶಸ್ತಾನಾಂ ರಸಾದೀನಾಂ ರಸಾಯನಮ್ ।
ಸ್ವಸ್ಥಸ್ಯೋಜಸ್ಕರಂ ಯತ್ತು ತದ್ವೃಷ್ಯಂ ತದ್ರಸಾಯನಮ್ ॥

ಎಂಬ ವಾಕ್ಯಗಳಿಂದ ರಸಾಯನದ ಅರ್ಥವು ವ್ಯಕ್ತವಾಗುತ್ತದೆ. ಜರಾವ್ಯಾಧಿಗಳನ್ನು ನಾಶಮಾಡುವ,ಆಯುರ್ವೃದ್ಧಿಯನ್ನುಂಟುಮಾಡುವ, ನೇತ್ರಪಾಟವವನ್ನು ವೃದ್ಧಿಸುವ, ಶರೀರವನ್ನುಪುಷ್ಟಿಗೊಳಿಸುವ, ಸ್ತ್ರೀ ಸೌಖ್ಯವನ್ನುಅನುಭವಿಸಲು ಸಹಾಯಕಾರಿಯಾದ ಔಷಧಿಯು ಯಾವುದೋ ಅದೇ ರಸಾಯನವೆಂದೂ, ಶರೀರದಲ್ಲಿ ರಸಾದಿ ಸಪ್ತ ಧಾತುಗಳು ಅಭಿವೃದ್ಧಿಯಾಗಲು ಸಹಾಯಕಾರಿಯಾದದ್ದು ರಸಾಯನವೆಂದೂ, ಸ್ವಸ್ಥವಾಗಿರುವ ಮನುಷ್ಯನಿಗೆ ಓಜೋಧಾತುವನ್ನು ಹೆಚ್ಚಿಸಿ ತನ್ಮೂಲಕ ಮೇಲೆ ಹೇಳಿದ ಸರ್ವಗುಣಗಳನ್ನು—ತೇಜೋಧಾತುವಾದ ಓಜಸ್ಸಿನಿಂದಲೇ ಉಂಟುಮಾಡಿಕೊಡುವ ಮತ್ತು ವೃಷ್ಯವೂ ಆಗಿರುವುದು ಯಾವುದೋ ಅದು ರಸಾಯನವೆಂತಲೂ ಚರಕಸಂಹಿತ ಮತ್ತು ಯೋಗರತ್ನಾಕರಗಳಲ್ಲಿ ಹೇಳಿದ್ದಾರೆ. ರಸಾಯನದಿಂದ ದೀರ್ಘಾಯುವೂ, ಜ್ಞಾಪಕಶಕ್ತಿ, ಮೇಧಾಶಕ್ತಿ, ಶರೀರಾರೋಗ್ಯ, ತಾರುಣ್ಯ, ದೇಹಕಾಂತಿ, ಉತ್ತಮ ಸ್ವರಶಕ್ತಿ ಮತ್ತು ಪಂಚೇಂದ್ರಿಯಪಾಟವ ವಾಕ್ಸಿದ್ಧಿ ಸರ್ವಜನಾದರಣೆಯೇ ಮೊದಲಾದ ಉತ್ತಮ ಗುಣಗಳೆಲ್ಲವೂ ರಸಾಯನೋಪಯೋಗಿಯಲ್ಲಿ ಉಂಟಾಗುತ್ತದೆಂದೂ ಹೇಳಿದ್ದಾರೆ.

ಈ ರಸಾಯನ ಸೇವನೆಯು ಎರಡು ಪ್ರಕಾರ. ಕುಟೀಪ್ರಾವೇಶಿಕ ಮತ್ತು ವಾತಾತಪಿಕ. ಇವುಗಳಲ್ಲಿ ಕುಟೀಪ್ರಾವೇಶಿಕವೇ ಹೆಚ್ಚು ಪ್ರಯೋಜನಕಾರಿಯಾದದ್ದು. ರಸಾಯನವನ್ನು ಸೇವಿಸತಕ್ಕ ಮನುಷ್ಯನು ಪಂಚಕರ್ಮಗಳಿಂದ ಶುದ್ಧನಾಗಿ ಶುಭದಿನದಲ್ಲಿ ಶಾಂತಿ, ಹೋಮ, ಸ್ವಸ್ತಿವಾಚನವೇ ಮೊದಲಾದ ದೇವತಾ ಸಂಬಂಧವಾದ ಕರ್ಮಗಳನ್ನು ಮಾಡಿ ಆಚಾರಶೀಲನಾಗಿದ್ದುಕೊಂಡು ಶಾಂತಸ್ವಭಾವದಿಂದ ಸೇವಿಸಬೇಕು.

ರಸಾಯನ ಎರಡು ಪ್ರಕಾರ. ಮೂಲಿಕಾ ವೈದ್ಯ ಮತ್ತು ರಸವೈದ್ಯ ಎಂದು ಗ್ರಂಥಗಳಲ್ಲಿ ಉಕ್ತವಾಗಿರುವ ಎರಡು ಪ್ರಕಾರ ರಸಾಯನಗಳಿವೆ. ಅನಾದಿಕಾಲದಿಂದಲೇ ಈ ಎರಡು ಪ್ರಕಾರವಾದ ಪ್ರಯೋಗಗಳಿದ್ದಾಗ್ಯೂ ಕೆಲವು ಗ್ರಂಥಕಾರರು (ಚರಕ, ಭೇಲ ಮುಂತಾದವರು) ಮೂಲಿಕಾ ಪ್ರಯೋಜನಗಳನ್ನು ಹೆಚ್ಚಾಗಿ ಎತ್ತಿ ಹೇಳಿದ್ದಾರೆ. ಇದಕ್ಕೆ ಕಾರಣವಿಷ್ಟೆ. ಸುಲಭವಾಗಿ ದೊರೆಯತಕ್ಕ ವನೌಷಧಿಗಳು

ಹೇರಳವಾಗಿ ತಮ್ಮ ತಮ್ಮ ಆಶ್ರಮಗಳ ಸಮೀಪದಲ್ಲಿಯೇ ದೊರೆಯುತ್ತಿದ್ದುದರಿಂದ ವೀರ್ಯವತ್ತಾದ ಮೂಲಿಕೆಗಳನ್ನು ಆರಿಸಿಕೊಂಡು ರಸಾಯನ ಚಿಕಿತ್ಸೆಗಳನ್ನು ಮಾಡಿಕೊಳ್ಳುತ್ತಿದ್ದರು. ಇದರಂತೆಯೇ ಕಾಲಾಂತರದಲ್ಲಿ ಉಪಯೋಗಿಸಲು ಸಾಧ್ಯವಾಗುವಂತೆ ಸಿದ್ಧರಸೌಷಧಿಗಳನ್ನು ತಯಾರ್ಮಾಡಿಟ್ಟುಕೊಳ್ಳುವ ವಾಡಿಕೆಯೂ ಕೆಲವರಲ್ಲಿದ್ದಿತೆಂದು ತೋರುತ್ತದೆ. ಪ್ರಭಾವಶಾಲಿಗಳಾದ ರಸಾಯನ ಮೂಲಿಕೆಗಳು ಈಗಲೂ ಅನೇಕ ದೊರೆಯುತ್ತವೆ. ಮೊದಲು ಹೇರಳವಾಗಿ ದೊರೆಯುತ್ತಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ನಮ್ಮ ಪೂರ್ವಜರು ಅನಾದಿಕಾಲದಿಂದಲೂ ಮೂಲಿಕಾ ಪರಿಚಯದಲ್ಲಿ ನಿಷ್ಣಾತರಾಗಿದ್ದುದರಿಂದಲೇ ಚರಕಾಚಾರ್ಯರಂತಹ ಮಹಾತ್ಮರುಗಳಿಂದ ಉತ್ತಮೋತ್ತಮ ರಸಾಯನ ಕಲ್ಪಗಳು ಹೇಳಲ್ಪಟ್ಟಿವೆ. ರಸವೈದ್ಯವು ಸುಮಾರು ೨೫೦೦ ಸಾವಿರ ವರ್ಷಗಳಿಂದೀಚೆಗೆ ಹೆಚ್ಚು ಪ್ರಚಾರಕ್ಕೆ ಬಂದಿರಬಹುದೆಂದು ನಾವು ಊಹಿಸಬಹುದಾಗಿದೆ. ಮತ್ತು ಮೂಲಿಕಾವೈದ್ಯಕ್ಕಿಂತಲೂ ರಸವೈದ್ಯವು ಹೆಚ್ಚು ಪ್ರಚಾರಕ್ಕೆ ಬರಲು ಅನೇಕಾನೇಕ ಕಾರಣಗಳನ್ನೂ ನಾವು ಎತ್ತಿ ತೋರಿಸಬಹುದಾಗಿದೆ. ರಸಾಯನಗಳಲ್ಲಿ ಬ್ರಾಹ್ಮೀ ಆಮಲಕ ರಸಾಯನಗಳೂ, ಮಕರಧ್ವಜ ರಸಸಿಂಧೂರ ಮುಂತಾದ ಸಿದ್ಧರಸಾಯನಗಳೂ ಇವೆ. ರಾಮಾಯಣಕಾಲದಲ್ಲಿ ವಿಶ್ವಾಮಿತ್ರರಿಂದ ಮಂತ್ರಪುರಸ್ಸರವಾಗಿ ಶ್ರೀರಾಮಲಕ್ಷ್ಮಣರಿಗೆ ಉಪದೇಶಿಸಲ್ಪಟ್ಟ ಬಲಾ ರಸಾಯನವು ಹಸಿವು ಬಾಯಾರಿಕೆಗಳನ್ನು ಪರಿಹರಿಸಿರುವುದು. ಅತಿಬಲಾ ಶಸ್ತ್ರವ್ರಣಗಳನ್ನು ಪರಿಹರಿಸಿರುವುದು. ಇವೇ ಮೊದಲಾದ ರಸಾಯನಗಳೂ ಮತ್ತು ಅಣಿಮಾದ್ಯಷ್ಟಸಿದ್ಧಿಗಳನ್ನು ಕೊಟ್ಟು ಪ್ರಭಾವಶಾಲಿಗಳಾದ ರಾಮಮುದ್ರಿಕಾ ಚೂಡಾಮಣಿ ಮುಂತಾದ ಸಿದ್ಧರಸಗಳೂ ಮತ್ತು ಸ್ಪರ್ಶಮಾತ್ರದಿಂದಲೇ ಪ್ರತ್ಯಹವೂ ೮ ಭಾರ (೧೬೯೦ ಪಲ) ಸಾಮಾನ್ಯ ಲೋಹಗಳನ್ನು ಸ್ವರ್ಣವನ್ನಾಗಿ ಮಾರ್ಪಡಿಸಬಲ್ಲ ಶ್ಯಮಂತಮಣಿಯೂ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿವೆಯಾದುದರಿಂದ ಮೂಲಿಕಾ ರಸಾಯನಗಳೂ ಮತ್ತು ಸಿದ್ಧರಸಾಯನಗಳೂ ಪುರಾತನಕಾಲಗಳಿಂದಲೂ ಪ್ರಚಾರದಲ್ಲಿವೆಯೆಂಬುದಕ್ಕೆ ಪುರಾಣ ಇತಿಹಾಸಗಳಿಂದ ಉದಾಹರಿಸಲ್ಪಡಬಹುದು.

ಮೂಲಿಕೆಗಳು ಸದಾಕಾಲದಲ್ಲಿಯೂ ದೊರೆಯುವುದಿಲ್ಲ. ಒಂದು ವೇಳೆ ದೊರೆತರೂ ವೀರ್ಯವತ್ತಾಗಿರುವುದಿಲ್ಲ. ಚ್ಯವನಪ್ರಾಶ ಬ್ರಾಹ್ಮಿರಸಾಯನ ಮೊದಲಾದ ಕಲ್ಪಗಳು ಕಲ್ಪದಲ್ಲಿ ಉಕ್ತವಾಗಿರುವ ಮೂಲಿಕೆಗಳು ರಸವತ್ತಾಗಿರುವಾಗ ಸಿದ್ಧಮಾಡಲು ಸಾಧ್ಯವೇ ಹೊರತು ಮಿಕ್ಕಕಾಲದಲ್ಲಿ ಸಾಧ್ಯವಿಲ್ಲ. ಮೂಲಿಕೆಗಳನ್ನು ಸಂಗ್ರಹಿಸಿಟ್ಟುಕೊಂಡು ಸಮಯಕ್ಕೆ ಉಪಯೋಗಿಸಿಕೊಂಡರೂ ನ್ಯೂನಾತಿರೇಕಗಳು

ಇದ್ದೇ ಇರುತ್ತವೆ. ಹಾಗಲ್ಲದೆ ಅಕಾಲದಲ್ಲಿ ಮೂಲಿಕೆಯನ್ನು ಸಂಗ್ರಹಿಸಿ ಮಾಡಿದ ರಸಾಯನಗಳು ಸಿದ್ಧಮಾಡಿದ ಬಹುಕಾಲದ ಮೇಲೆ ಉಪಯೋಗಿಸಲ್ಪಟ್ಟಲ್ಲಿ ಹೆಚ್ಚು ಲಾಭದಾಯಕಗಳಲ್ಲವೆಂಬುದು ಶಾಸ್ತ್ರಸಮ್ಮತವೂ ಸರ್ವರ ಅನುಭವವೂ ಆಗಿವೆ. ಆದುದರಿಂದಲೇ ಈ ತೊಂದರೆಗಳನ್ನು ಪರಿಹರಿಸಲು ಬಹಳ ದಿನಗಳವರಿಗೂ ಕೆಡದಂತೆ ಇಡಲು ಸಾಧ್ಯವಾಗುವ ಔಷಧಿಗಳನ್ನು ಸಿದ್ಧಮಾಡುವ ಅವಶ್ಯಕತೆಯು ತೋರಿಬಂದುದರಿಂದಲೆ ನಮ್ಮ ಪೂರ್ವಜರು ರಸೌಷಧಿಗಳನ್ನು ಆಚರಣೆಗೆ ತಂದಿರಬಹುದು. ಶೀತೋಷ್ಣವಾತಾತಪಗಳಿಂದ ಹೆಚ್ಚು ಮಾರ್ಪಾಡು ಹೊಂದದೆ ಇರತಕ್ಕ ರಸಾದಿ ದ್ರವ್ಯಗಳಿಂದಲೇ ರಸಾಯನಗಳನ್ನು ಸಿದ್ಧಮಾಡುವರೂಢಿಯನ್ನು ತಂದುಕೊಂಡಿರಬಹುದು.

ನಮ್ಮ ಭಾರತ ಭೂಮಿಯಲ್ಲಿ ಬೌದ್ಧ, ಜೈನಮತಗಳ ಬೆಳವಣಿಗೆಯಿಂದ ಚರಕ ಮತ್ತು ಸುಶ್ರುತರ ಅನುಯಾಯಿಗಳ ವೈದ್ಯ ವ್ಯವಸಾಯಕ್ಕೆ ಧಕ್ಕೆ ತಗುಲಿ "ಅಹಿಂಸಾ ಪರಮೋಧರ್ಮಃ" ಎಂಬ ಈ ಮತಗಳ ಏಳಿಗೆಯಿಂದ ಪ್ರಾಣಿ ಹಿಂಸಾರಹಿತವಾದ ಔಷಧ ಕ್ರಿಯೆಗಳು ಹೆಚ್ಚಾಗಿ ಪ್ರಚಾರಕ್ಕೆ ಬಂದವು. ಆಗ ರಸಾಯನ ತಂತ್ರದಲ್ಲಿ ಅಡಗಿರುವ ರತ್ನಗಳನ್ನು ಬಹು ಶ್ರಮದಿಂದ ಹೊರಗೆ ತೆಗೆದು ರಸವಾದಿಗಳು ರಸರತ್ನ ಸಮುಚ್ಚಯವೇ ಮೊದಲಾದ ರಸತಂತ್ರಗಳನ್ನು ರಚಿಸಿದರು. ನಾಗಾರ್ಜುನನೆ ಮೊದಲಾದವರು ರಚಿಸಿದ ರಸಗ್ರಂಥಗಳು ಧರ್ಮದ ವಿಪರೀತ ಸಂದರ್ಭಗಳಲ್ಲಿ ಬೆಳಕಿಗೆ ಬಂದವು. ರಸೌಷಧಿಗಳಿಂದ ಮಾಡಲ್ಪಟ್ಟ ರಸಾಯನಗಳೂ ಔಷಧಿಗಳೂ ಬಹಳ ದಿನಗಳ ವರಿವಿಗೂ ಶಿತೋಷ್ಣ ವಾತಾತಪಗಳಿಂದ ಮಾರ್ಪಡದೆ ವೀರ್ಯವತ್ತಾಗಿಯೂ ಇರುವದರಿಂದಲೇ ಇಂದಿಗೂ ಶತಮಾನಗಳ ಹಿಂದೆಯೇ ಸಿದ್ಧಮಾಡಲ್ಪಟ್ಟ ಕೂಪಿಸ್ಥರಸಾಯನಗಳೂ ನಮಗೆಲ್ಲಾ ದೊರೆಯುವ ಸುಯೋಗ ವುಂಟಾಗಿದೆ. "ಶತ್ರುಗಳಿಂದಲಾದರೂ ವಿದ್ಯಾ ಸಂಪಾದನೆ ಮಾಡಬಹುದು" ಎಂಬ ಚರಕಾಚಾರ್ಯರ ಮತದಂತೆ ಈಗ ನಮ್ಮಲ್ಲಿ ಖಿಲವಾಗಿ ಹೋಗಿರುವ ಶಸ್ತ್ರವೈದ್ಯ, ರಸವೈದ್ಯಗಳನ್ನು ಯಾರ ಸಹಾಯದಿಂದಲಾದರೂ ಕಲಿತು ನಮ್ಮ ಪೂರ್ವಜರ ಮಟ್ಟಕ್ಕೆ ನಮ್ಮ ಯೋಗ್ಯತೆಯನ್ನು ತಂದುಕೊಳ್ಳುವ ಪ್ರಯತ್ನಮಾಡಬೇಕು. ಈ ಪ್ರಯತ್ನದಿಂದ ನಮಗೆ ಹೆಚ್ಚು ಹೆಚ್ಚಾದ ಹೊಸ ವಿಷಯಗಳೂ ಅನುಭವಕ್ಕೆ ಬಂದು ನಾವೂ ಕೂಡ ಪ್ರಖ್ಯಾತರಾಗಬಹುದು.

ರಸ, ಗಂಧಕ, ಪಾಷಾಣಾದಿಗಳ ಸಂಯೋಗದಿಂದ ತಯಾರಾದ ರಸಾಯನ ಔಷಧಿಗಳು ಹೇರಳವಾಗಿವೆ. ಇವುಗಳು ಕಫ, ವಾತದೋಷಗಳ ಪ್ರಾಬಲ್ಯವಿರುವ

ದೋಷಗಳಲ್ಲಿ ಸಂಜೀವನ, ಇದೇ ಚಿಕಿತ್ಸೆಯೇ ಪಾಶ್ಚಾತ್ಯ ಪದ್ಧತಿಯ ಸೂಚೀಮುಖ ಸೇಚನ (Injection) ಕ್ರಮದಲ್ಲಿ ನಡೆಸಲ್ಪಟ್ಟು ಆಶುಕಾರಿಯಾದ ಗುಣಗಳನ್ನು ತೋರಿಸುತ್ತ ಜನಾಕರ್ಷಣೀಯವಾಗಿ ಪರಿಣಮಿಸಿದೆ. ಇಂತಹ ಅಮೋಘವಾದ ರಾಸಾಯನಿಕ ಔಷಧಿಗಳು ನಮ್ಮ ಪಿತ್ರಾರ್ಜಿತಸ್ವತ್ತಾಗಿರುವಾಗ ಅವುಗಳನ್ನು ಸರಿಯಾಗಿ ತಯಾರಿಸಿ, ಉಪಯೋಗಿಸಿ ಆಯುರ್ವೇದದ ಯಶಸ್ಸನ್ನೂ ನಮ್ಮ ಕೀರ್ತಿಯನ್ನೂ ಗಳಿಸಿಕೊಳ್ಳುವ ಕಡೆಗೆ ನಿರ್ಲಕ್ಷಿಸಿ ನಮ್ಮ ಅನೇಕ ವೈದ್ಯಬಾಂಧವರು ಕೇವಲ ಪಾಶ್ಚಾತ್ಯ ಇಂಜಕ್ಷನ್ನುಗಳ ಕಡೆಗೆ ಪುನಸ್ಸೋತು ತಮ್ಮಲ್ಲೂ ಆತ್ಮಪ್ರತ್ಯಯ ವಿಲ್ಲದೆ ಆಯುರ್ವೇದದ ಅವಹೇಳನಕ್ಕೆ ಕಾರಣರಾಗಿ "ಇತೋಭ್ರಷ್ಟ ಸ್ತತೋ ಭ್ರಷ್ಟಃ" ಎಂಬ ಸ್ಥಿತಿಗೆ ಬರುತ್ತಿರುವದು ಆತ್ಮಘಾತವೆಂದು ವಿಷಾದಿಸದೆ ವಿಧಿಯಿಲ್ಲ. ಇದು ಉಭಯ ವೈದ್ಯವಿದ್ಯಾಪರಿಣತರ ವಿಚಾರವಾಗಿ ಹೇಳಿರುವ ಮಾತಲ್ಲವೆಂದು ದಯವಿಟ್ಟು ತಿಳಿಯಬೇಕಾಗಿ ವಿನಂತಿ.

ಒಂದು ಆಕ್ಷೇಪಣೆ ಬರಬಹುದು. ನಮಗೆ ಔಷಧಿಗಳ ಅಭಾವ; ಯಾವ ಔಷಧಿಯಾದರೇನು ? ರೋಗಿಯ ಹಿತದೃಷ್ಟಿಯಿಂದ ನಮಗೆ ಸುಲಭವಾಗಿ ಒದಗುವ ಔಷಧಿ ಯಾವುದೋ ಅದನ್ನು ಉಪಯೋಗಿಸುತ್ತೇವೆ ಎಂದು. ಇದು ಸರ್ವಥಾ ಅಸಮಂಜಸವಾದುದೆಂದು ಎತ್ತಿ ಹೇಳಬೇಕಾಗಿದೆ. ವೈದ್ಯನು ತಾನು ಎಲ್ಲಿಯವರೆಗೆ ತಾನೇ ಸರ್ವಜ್ಞ ಮತ್ತು ತಾನು ಒಬ್ಬ ಅಧಿಕಾರಿಯೆಂದೂ ತಿಳಿದುಕೊಂಡು ತನ್ನ ವೃತ್ತಿಯನ್ನು ನಡೆಸಿಕೊಂಡು ಹೋಗುವನೋ ಅಲ್ಲಿಯವರಿವಿಗೂ ಔಷಧಿಗಳ ಅಭಾವವೇ. ತನ್ನ ಸಾಮರ್ಥ್ಯ, ಕುಶಲತೆಯಿಂದ ಉತ್ತಮವಾದ ಔಷಧಿಗಳನ್ನು ಅಲ್ಪ ದ್ರವ್ಯವೆಚ್ಚದಿಂದ ತಯಾರ್ಮಾಡಿಟ್ಟುಕೊಳ್ಳುವುದರಿಂದ ಅನೇಕ ಅಸಾಧ್ಯವಾದ ರೋಗಗಳನ್ನೂ ಗುಣಮಾಡಬಹುದು., ಆಗ ತನ್ನ ಜೀವನ ನಿರ್ವಾಹವೂ ನಡೆದು ತನ್ನ ಕುಶಲತೆಯೂ ಅಭಿವೃದ್ಧಿಹೊಂದಿ ತನ್ನ ಸರಳಜೀವನದಿಂದಲೂ ಕಾರ್ಯದಕ್ಷತೆ ಯಿಂದಲೂ ಜನಾನುರಾಗವನ್ನು ಸಂಪಾದಿಸಿಕೊಳ್ಳುವದರ ಮೂಲಕ ಪಾಶ್ಚಾತ್ಯ ಮೋಹಜಾಲದಿಂದ ಅನೇಕರನ್ನು ವಿಮುಖರನ್ನಾಗಿ ಮಾಡಬಹುದು. ಹಾಗೆ ಸಿದ್ಧೌಷಧಗಳನ್ನು ತಯಾರ್ಮಾಡಿಕೊಳ್ಳಲು ಅಸಮರ್ಥರಾದವರೂ ಮತ್ತು ಪರಿಶ್ರಮ ವಿಲ್ಲದವರೂ ಅನುಭವಿಗಳು ಮತ್ತು ಪರಿಶ್ರಮಿಗಳು ತಯಾರ್ಮಾಡಿಟ್ಟಿರುವ ಔಷಧಿಗಳನ್ನು ತೆಗೆದುಕೊಂಡು ಅವುಗಳನ್ನು ಉಪಯೋಗಿಸುವುದರ ಮೂಲಕ ತಮ್ಮ ವೈದ್ಯಬಾಂಧವರಿಗೆ ಉತ್ತೇಜನವನ್ನೂ ಕೊಡಬಹುದು. ಕೊಂಡು ಔಷಧಿಯನ್ನು ಉಪಯೋಗಿಸುವ ವೈದ್ಯನಿಗೆ ಪ್ರಭಾವಶಾಲಿಯಾದ ಯಾವ ಔಷಧಿಯಾದರೇನು ?

ಗುಣಕೊಡುವ ಯಾವ ಔಷಧಿಯನ್ನಾದರೂ ಉಪಯೋಗಿಸಬಹುದು. ಆದರೆ ಆಯುರ್ವೇದ ವೈದ್ಯನಾಗಿ ಆಯುರ್ವೇದಾಭಿಮಾನವನ್ನು ತೊರೆದು ನಮ್ಮ ಸ್ವಬಾಂಧವರ ಸ್ವತ್ತನ್ನು ಪರಕೀಯರ ಪಾಲುಮಾಡುವುದು ಯೋಗ್ಯವಾದುದಲ್ಲವೆಂದು ಹೇಳುತ್ತೇನೆ. ಅಲ್ಪಕಾರಣಗಳಿಗೆಲ್ಲಾ ಆಯುರ್ವೇದವನ್ನು ಹೀನಾಯಮಾಡಿ ನಾವೇ ಅಲ್ಲಗಳೆಯುತ್ತ ಬಂದರೆ ವೈದ್ಯರಲ್ಲದವರು ಆಯುರ್ವೇದವನ್ನು ತಿರಸ್ಕಾರ ಮಾಡುವುದು ಸಮಂಜಸವೇ ಅಲ್ಲವೇ ?

ರಸಾಯನಗಳಲ್ಲಿ ಸೇರುವ ಪಾರದವೊಂದೇ ತಾನು ಯಾವುದೇ ರೂಪದಲ್ಲಿದ್ದಾಗ್ಯೂ ಆ ಔಷಧಿಯು ಚಿರಕಾಲ ಕೆಡದಂತೆ ಇಡುವುದು ಇದು "ಅಜರಾಮರಂಕುರುತೇ" ಎಂಬ ಮಾತನ್ನು ಸ್ಪಷ್ಟಪಡಿಸುತ್ತದೆ. ರಸವು ಯಾವ ಪದಾರ್ಥದೊಡನೆ ಸಂಯೋಗವಾಗುತ್ತದೆಯೊ ಆ ಪದಾರ್ಥದ ಸರ್ವಾಂಶಗಳಲ್ಲಿಯೂ ಸೇರಿ ಹೋಗುತ್ತದೆ. ತನ್ನ ಯೋಗವಾಹಿ ಶಕ್ತಿಯಿಂದ ರಸಸಮ್ಮಿಶ್ರವಾದ ಯಾವುದೇ ರಸಾಯನವಾಗಲಿ ಬಾಕಿ ಎಲ್ಲಾ ಧಾತುವರ್ಗದ್ರವ್ಯಗಳಿಗಿಂತಲೂ ಮಿಗಿಲಾದ ಗುಣಕಾರಿಯೆಂದು ಹೇಳಬಹುದು. ಶತಮಾನಗಳು ಮಳೆ ಗಾಳಿಗೆ ಸಗ್ಗದಿರುವ ವೃಕ್ಷರಾಜನು ತನ್ನಲ್ಲಿ ಕೆಲವು ಗುಂಜಿಯತೂಕದ ಪಾರದವನ್ನು ಧರಿಸುವುದರ ಮೂಲಕ ತನ್ನ ಕ್ರಮವನ್ನೆ ನೀಗುವನು. ಅಂದರೆ ರಸವು ತನ್ನ ಯೋಗವಾಹಿ ಶಕ್ತಿಯಿಂದ ಎಂತಹ ದೊಡ್ಡ ವೃಕ್ಷವನ್ನಾದರೂ ಜಾಗ್ರತೆಯಾಗಿ ಒಣಗಿಸಿಬಿಡುವುದು. ಇದೊಂದೇ ಗುಣದಿಂದ ಪಾರದವು ಎಷ್ಟು ಚೆನ್ನಾಗಿ ಶರೀರಾದ್ಯಂತವೂ ವ್ಯಾಪಿಸಿ ಅಡಗಿರುವ ವ್ಯಾಧಿಯನ್ನು ನಿಗ್ರಹಿಸಬಲ್ಲುದೆಂದು ವ್ಯಕ್ತವಾಗುತ್ತದೆ. ರಸವನ್ನು ಅಶುದ್ಧರೀತಿಯಲ್ಲಿ ಸೇವನೆಮಾಡಿದರೆ ವೃಕ್ಷನಾಶಕ್ಕೆ ಕಾರಣವಾದಂತೆ ಮನುಷ್ಯನ ಮೃತ್ಯುವಿಗೆ ಕಾರಣವಾದ ವಿಷವಾಗಿ ಪರಿಣಮಿಸುತ್ತಿದೆ. ಅದೇ ವಿಷವಾದ ರಸವೇ ಶುದ್ಧಿಸಂಸ್ಕಾರಗಳಿಂದ ರಸಾಯನವಾಗಿ ಮಾಡಲ್ಪಟ್ಟರೆ "ಅಜರಾಮರಂಕುರುತೇ."

ರಸಾಯನತಂತ್ರದಲ್ಲಿ ಉಕ್ತವಾಗಿರುವ ದ್ರವ್ಯಗಳನ್ನು ಶೋಧನಮಾರಣ, ಅಮೃತೀಕರಣ ವಿಧಾನಗಳಿಂದ ರಸಾಯನಗಳನ್ನಾಗಿ ಸಿದ್ಧಮಾಡಿಕೊಳ್ಳಬಹುದು. ಸ್ವರ್ಣ, ರಜತ, ತಾಮ್ರ, ಲೋಹ, ಸೀಸ, ವಂಗ ಮತ್ತು ಮಿಶ್ರಲೋಹಗಳಾದ ಹಿತ್ತಾಳೆ, ಕಂಚು ಮೊದಲಾದ ಲೋಹಗಳೂ ಅಭ್ರಕ ವೈಕ್ರಾಂತ, ಮಾಕ್ಷಿಕ, ವಿಮಲ, ಶಿಲಾಜಿತು ಮೊದಲಾದ ಮಹಾರಸಗಳೂ, ಗಂಧಕ, ಕಾಸೀಸ, ತಾಲಕ ಮೊದಲಾದ ಉಪರಸಗಳೂ, ಪಾರದ ಮತ್ತು ಇತರ ಖನಿಜಗಳೂ, ಶಂಖಪಾಷಾಣ ಗೌರೀಪಾಷಾಣ, ಸೌವೀರ ಮೊದಲಾದ ಪಾಷಾಣಗಳೂ, ವತ್ಸನಾಭಿ, ಜಾಪಾಳ,

ಅಫೀಮು ಮುಂತಾದ ಸಸ್ಯಜನಿತಗಳೂ ಸರ್ಪವಿಷವೇ ಮೊದಲಾದ ಪ್ರಾಣಿಜ ಪದಾರ್ಥಗಳೂ ಉಪಯೋಗಕ್ಕೆ ಬರುವ ಮೊದಲು ಶುದ್ಧಿ ಸಂಸ್ಕಾರಗಳನ್ನೂ ಹೊಂದಿರಬೇಕು. ಹಾಗೆಯೇ ಉಪಯೋಗಿಸುವುದರಿಂದ ಆಯಾ ಪದಾರ್ಥಗಳಲ್ಲಿರುವ ದೋಷಗಳಿಂದ ವಿಷಗಳೇ ಆಗಿ ಪರಿಣಮಿಸಿ ರೋಗಕಾರಕಗಳೂ, ಪ್ರಾಣನಾಶಕಗಳೂ ಆಗುತ್ತಿವೆ. ಅವುಗಳನ್ನು ಶೋಧನೆಮಾಡುವ ಮೂಲಕ ಅವುಗಳಲ್ಲಿ ಅಡಗಿರುವ ದೋಷಗಳನ್ನು ಕಳೆದರೆ ಶರೀರಕ್ಕೆ ಉಪಯುಕ್ತವಾದ ರಸಾಯನದ್ರವ್ಯಗಳಾಗಿ ಮಾರ್ಪಡುತ್ತವೆ.

" ವಿಷಂ ಪ್ರಾಣಹರಂ ತಚ್ಚ ಯುಕ್ತಿಯುಕ್ತಂ ರಸಾಯನಂ "

ರಸ—ವಿಷಗಳು ಪ್ರಾಣಾಪಾಯಕರಗಳೇ ಆದಾಗ್ಯೂ ಪ್ರಾಣಾಪಾಯಕಾರಿಗಳಾದ ವ್ಯಾಧಿಗಳಲ್ಲಿ ಯುಕ್ತಿಯುಕ್ತವಾಗಿ ಉಪಯೋಗಿಸುವುದರಿಂದ ರಸಾಯನವಾಗಿ ಪರಿಣಮಿಸುತ್ತದೆ. ಇದೇ ಧ್ಯೇಯವನ್ನು ಮುಂದಿಟ್ಟುಕೊಂಡು ವಿಷಕ್ಕೆ ವಿಷವನ್ನೇ ಕೊಟ್ಟು ಚಿಕಿತ್ಸೆಮಾಡುವ ಪದ್ಧತಿಯೂ ಆಯುರ್ವೇದೀಯರಿಗೆ ಹೊಸದಲ್ಲ, ಇದೇ ಪದ್ಧತಿಯನ್ನು ಪಾಶ್ಚಾತ್ಯ ವೈದ್ಯರುಗಳೂ ಹೆಚ್ಚಾಗಿ ಉಪಯೋಗಿಸುತ್ತಿದ್ದಾರೆ. ೨೦೦ ವರ್ಷಗಳಿಂದೀಚಿಗೆ ಪಾಶ್ಚಾತ್ಯರ ಪ್ರಭಾವಕ್ಕೊಳಗಾದ ಭಾರತೀಯರೂ ಅವರ ಮೋಹಜಾಲಕ್ಕೆ ಬಲಿಯಾಗಿ ತಮ್ಮ ಪೂರ್ವಸಂಸ್ಕಾರವನ್ನು ಮರೆತು ಈಗ ಕಣ್ಣು ಬಿಡುವ ದುಃಸ್ಥಿತಿಯಾಗಿದೆ.

ತಾಮ್ರ ಪಾರದ ಮುಂತಾದ ಅನೇಕ ದ್ರವ್ಯಗಳನ್ನು ಹೆಚ್ಚಾದ ಸಂಸ್ಕಾರಗಳಿಗೊಳಗಾಗಿಸಬೇಕು. ತಾಮ್ರವನ್ನು ಸರಿಯಾಗಿ ಶುದ್ಧಿಮಾಡದೆ ಉಪಯೋಗಿಸಿದರೆ ವಾಂತಿ ಭ್ರಾಂತಿ ಮೊದಲಾದ ದೋಷಗಳುಂಟಾಗುತ್ತವೆ. ಪಾರದದಲ್ಲಿ ಸಪ್ತಕಂಚುಕ ದೋಷಗಳು ವಿಷ, ವಹ್ನಿ, ಮಲ, ನಾಗ ಮತ್ತು ವಂಗಗಳೆಂಬ ಐದು ನೈಸರ್ಗಿಕ ದೋಷಗಳು ಅಡಗಿರುತ್ತವೆ. ರಸ ಶುದ್ಧಿಕ್ರಮದಲ್ಲಿ ಅದರಲ್ಲಿ ಅಡಗಿರುವ ದೋಷಗಳೆಲ್ಲವನ್ನೂ ನಿವಾರಣೆಮಾಡದೆ ಉಪಯೋಗಿಸಿದರೆ ರೋಗನಿವಾರಣೆಗೆ ಬದಲು, ರಸಾಯನವಾಗುವುದರ ಬದಲು ದೇಹನಾಶಕ್ಕೆ ಕಾರಣವಾದ ವಿಷವೇ ಆಗಿ ಪರಿಣಮಿಸುತ್ತದೆ. ಆದುದರಿಂದ ರಸಶುದ್ಧಿಗಾಗಿಯೇ ಹೇಳಲ್ಪಟ್ಟಿರುವ ಅಷ್ಟಾದಶ ಸಂಸ್ಕಾರಗಳಾದ ' ಸ್ವೇದನ ' ಮರ್ದನ ಮೂರ್ಛನ ಉತ್ಥಾಪನ ಪಾತನ, ಶೋಧನ, ನಿಯಾಮನ, ದೀಪನ, ಗಗನಭಕ್ಷಣ,ಸಂಚಾರಣ, ಗರ್ಭಗತಿ, ದ್ರುತಿ ಬಾಹ್ಯದ್ರುತಿ ಸೂತಕ ಜಾರಣ ಗ್ರಾಸ, ಸಾರಣ, ಸಂಕ್ರಾಮಣ, ವೇಧನ ಎಂಬ ಸಂಸ್ಕಾರಗಳು ಮಾಡಲ್ಪಡಬೇಕು. ಈ ಸಂಸ್ಕಾರಗಳಿಂದ ಪಾರದದಲ್ಲಿಯ ಸಮಸ್ತ ದೋಷಗಳು

ನಿವಾರಣೆ ಮಾಡಲ್ಪಟ್ಟು ಅಮೃತಕ್ಕೆ ಸಮಾನವಾಗುತ್ತದೆ. ಇಷ್ಟು ಕರ್ಮಗಳನ್ನು ಮಾಡುವುದು ಸುಲಭಸಾಧ್ಯವಾದುದಲ್ಲ, ಆದಕ್ಕಾಗಿಯೇ ಅನ್ಯೋಕ್ತ ಶುದ್ಧಕ್ರಮ ಗಳು ಅನೇವಾಗಿವೆ.

ಪಾರದವನ್ನು ಕುಮಾರಿ ರಸದಲ್ಲಿ ಏಳುಸಾರಿ ಭಾವನೆ ಮಾಡುವುದರಿಂದ— ಅರೆದು ಅರೆದು ನೀರಿನಿಂದ ತೊಳೆವುದರಿಂದ ಮಲದೋಷವೂ, ಏಳುಸಾರಿ ತ್ರಿಫಲಾ ರಸದಲ್ಲಿ ಅರೆದು ಅರೆದು ನೀರಿನಿಂದ ತೊಳೆಯುವುದರಿಂದ ಶಿಖಿದೋಷವು ಚಿತ್ರಮೂಲ ಕಷಾಯದಲ್ಲಿ ಏಳುಸಾರಿ ಅರೆದು ಅರೆದು ನೀರಿನಿಂದ ತೊಳೆವುದರಿಂದ ವಿಷದೋಷ ಹರ ಮತ್ತು ರಸವನ್ನೂ—ಪಾರದವನ್ನೂ |ಸೂರಣಗೆಡ್ಡೆ, ಭೃಂಗರಾಜ, ಲಕ್ಕೀ ಸೊಪ್ಪು, ಎಕ್ಕದೆಲೆ, ಕಾಂಚಿಕ, ನೆಲ್ಲಿಕಾಯಿ, ಆಳಲೆಕಾಯಿ, ತಾರೆಕಾಯಿ, ಸುಣ್ಣದ ನೀರು, ಕಿರುಕಸಾಲೆಜೇರು, ಹುರುಳಿಕಟ್ಟು, ಮೊಸರು, ಕರೀಧೂಪ, ನಿಂಬೇಹಣ್ಣಿನರಸ, ಬಿಳಿಕೊಮ್ಮೆರಸ, ಅರಿಶಿಣ, ಪುಳ್ಳಂಪುರುಚಿ, ಮಯೂರಶಿಖಿ ಈ ದ್ರವ್ಯಗಳ ಸ್ವರಸ, ಕಷಾಯಗಳಲ್ಲಿ ಒಂದೊಂದು ಯಾಮ ಅರೆದರೆ ಉತ್ತಮ ಶುದ್ಧಿಯಾಗುತ್ತದೆ, ಹೀಗೆ ಮೇಲೆ ಹೇಳಿರುವ ಎರಡೂ ಪ್ರಕಾರದಲ್ಲಿ ೧೮ ಸಂಸ್ಕಾರ ಗಳನ್ನೂ ಶುದ್ಧಿಗಳನ್ನೂ ಹೊಂದಿದ ರಸವು ಶ್ರೇಷ್ಠ ರಸಾಯನವಾಗುವುದರಲ್ಲಿ ಸಂಶಯವಿಲ್ಲ.

ಮೇಲೆ ಹೇಳಿದ ಶುದ್ಧಿ ಕ್ರಮಗಳನ್ನು ಮಾಡಿಕೊಳ್ಳಲು ಸಾಧ್ಯವೇ ಇಲ್ಲ ದವರು ಹಿಂಗುಳೋತ್ಥ ರಸವನ್ನು ಉಪಯೋಗಿಸಬಹುದು. ಹಿಂಗುಲವೆಂಬ ರಸಾ ಯನ ದ್ರವ್ಯವು (Cinnabar) ನೈಜವಾಗಿ ದೊರೆಯತಕ್ಕ ರಸದ ರೂಪಾಂತರ ಗಳಲ್ಲಿ ಶ್ರೇಷ್ಠವಸ್ತುವಾಗಿರುವುದರಿಂದ ಹಿಂಗುಲವನ್ನು ಶುದ್ಧಿಮಾಡಿಕೊಂಡು ಸ್ತನ್ಯ ದಲ್ಲಿ ಭಾವನೆ ಮಾಡಿ ಒಣಗಿಸಿ ನಂತರ ಪುಡಿಮಾಡಿ ಕೆಳಗಿನ ರೀತಿಯಲ್ಲಿ ಶುದ್ಧ ವನ್ನು ಮಾಡಿಕೊಳ್ಳಬಹುದು.

(೧) ಹಿಂಗುಲದ ಪುಡಿಯನ್ನು ಚೆನ್ನಾಗಿ ಬಟ್ಟೆಯಲ್ಲಿ ಚಂಡಿನಂತೆ ಸುತ್ತಿ ಆ ಬಟ್ಟೆಗೆ ತುಪ್ಪವನ್ನು ಸವರಿ ಓಡಿನಲ್ಲಿಟ್ಟು ಉರಿಹಚ್ಚಿ ಚೆನ್ನಾಗಿ ಉರಿಯುತ್ತಿರುವಾಗ ಮೇಲೆ ಒಂದು ಮಡಕೆಯನ್ನು ಮುಚ್ಚಿ ನಿವಾತಸ್ಥಳದಲ್ಲಿ ಇಟ್ಟು ಚಂಡು ಪೂರ್ತಿ ಯಾಗಿ ಉರಿದ ಮೇಲೆ ಮಡಕೆಯಲ್ಲಿರುವ ಪತಂಗಿಸಿರುವ ರಸವನ್ನು ಶೇಖರಿಸಿ ಕೊಳ್ಳುವುದು.

(೨) ಹಿಂಗುಲದ ಪುಡಿಯಲ್ಲಿ ಜೇನುಮೇಣದೊಂದಿಗೆ ಸೇರಿದ ಒಂದು ಮೇಣದಬತ್ತಿಯ ಆಕಾರದಲ್ಲಿ ಒಂದು ಬತ್ತಿಯ ಸುತ್ತಲೂ ಹೊಸೆದು ಬತ್ತಿ ಉರಿಸಿ ದರೆ ರಸವು ಹೊರಹೊಮ್ಮುವುದು.

(೩) ಅರಿಶಿನದ ಪುಡಿ ಹಿಂಗುಲದ ಪುಡಿಯನ್ನು ಸೇರಿಸಿ ಬಟ್ಟೆಯಲ್ಲಿ ಬತ್ತಿಯಂತೆ ಮಾಡಿ ಹೊತ್ತಿಸಿ ಊರ್ಧ್ವಪಾತದ ರೀತಿಯಲ್ಲಿ ಮೇಲಿನ (೨) ನೇ ರೀತಿಯಲ್ಲಿ ಹೇಳಿರುವಂತೆ ರಸವನ್ನು ಶೇಖರಿಸಿಕೊಳ್ಳುವುದು. ಇತ್ಯಾದಿ ಸುಲಭೋಪಾಯಗಳಿಂದ ಪಾರದ—ಶುದ್ಧರಸವನ್ನು ಪಡೆದು ರಸಾಯನ ಕ್ರಿಯೆಗಳಲ್ಲಿ ಉಪಯೋಗಿಸಿಕೊಳ್ಳಬಹುದು.

ರಸ ಶೋಧನಾನಂತರ ಸುದಿನ, ಶುಭನಕ್ಷತ್ರದಲ್ಲಿ ಶಾಂತಿ, ಹೋಮ, ಸ್ವಸ್ತಿವಾಚನಗಳಿಂದ ಮಾನಸಿಕ ನೈರ್ಮಲ್ಯತೆಯನ್ನೂ ದೈವತಾನುಗ್ರಹವನ್ನೂ ಸಂಪಾದಿಸಿಕೊಂಡು ರಸಮಾರಣ ಮಾಡಿ ನಂತರ ಯೋಗ್ಯರೀತಿಯಲ್ಲಿ ಶೇಖರಿಸಿಟ್ಟುಕೊಂಡು, ಸಮಯವೊದಗಿದಾಗ ಉಪಯೋಗಿಸುವುದರಿಂದ ವೈದ್ಯನಿಗೆ ಕೀರ್ತಿಯು ಲಭಿಸುವುದು ಮಾತ್ರವೇ ಅಲ್ಲದೆ ಇಹಪರ ಸಾಧನಸಂಪತ್ತಿಯೂ ಉಂಟಾಗುತ್ತದೆ. ಹೀಗೆ ಯುಕ್ತರೀತಿಯಲ್ಲಿ ತಯಾರಾದ ಮಕರಧ್ವಜ, ಮಲ್ಲಸಿಂಧೂರ, ತಾಳಕಸಿಂಧೂರ, ರಸರಾಜವಂಗೇಶ್ವರ, ಸ್ವರ್ಣ ಸೂರ್ಯಪ್ರಭಾಕರ ಮೊದಲಾದ ರಸಾಯನಯೋಗಗಳು ಮತ್ತು ಈ ಸಿಂಧೂರ ಭಸ್ಮಾದಿಗಳ ಮಿಶ್ರಣದಿಂದಲೂ ಮತ್ತು ಇತರ ಸ್ವರ್ಣ, ರಜತ, ಲೋಹಾದಿ ಹೆಚ್ಚು ಅಗ್ನಿಸಹವಾದ ಲೋಹಗಳ ಭಸ್ಮಗಳು ಮುಕ್ತಾ, ಪ್ರವಾಳ, ಅಭ್ರಕ ಮುಂತಾದ ಭಸ್ಮಗಳು ಉತ್ತಮೋತ್ತಮ ರಸಾಯನಗಳ ಸಂಮಿಶ್ರದಿಂದ ರೂಪಗೊಂಡ ಕೂಪಿಕಾ ರಸಾಯನಗಳೂ ಸಿದ್ಧವಾದ ನಂತರ ಇವುಗಳನ್ನು ಶ್ರಮವಹಿಸಿ ಸಿದ್ಧಮಾಡಿದವರ ಉಪಯೋಗಕ್ಕೆ ಮಾತ್ರವೇ ಅಲ್ಲದೆ ಪುತ್ರಪೌತ್ರ ಪಾರಂಪರ್ಯವಾಗಿ ಹೆಚ್ಚೇನು ಪೀಳಿಗೆಗಳಿಗೂ ಉಪಯೋಗವಾಗುತ್ತದೆ. ಅಥರ್ವಣ ವೇದಾಂತರ್ಗತವಾದ ವೈದ್ಯಶಾಸ್ತ್ರಕ್ಕೆ ಸಹಾಯಕಕ್ಕಾಗಿ ಮಣಿಮಂತ್ರ ಮಹೌಷಧಿಗಳು ಸಿದ್ಧವಾಗಿವೆ. ಮಣಿಮಂತ್ರಗಳು ಸರ್ವರಿಗೂ ಲಭ್ಯವಾಗತಕ್ಕದ್ದಲ್ಲವಾದರೂ ಎಲ್ಲ ವೈದ್ಯರೂ ಸಿದ್ಧೌಷಧಿಗಳು—ಮಹೌಷಧಿಗಳನ್ನು ಹೊಂದುವುದು ಕಷ್ಟವಲ್ಲ. ಈ ಸಿದ್ಧೌಷಧಗಳು ಉಳ್ಳಂತಹ ವೈದ್ಯನು ಅನ್ಯರ ಆಶ್ರಯಕ್ಕಾಗಿ ಅಂಗಲಾಚಬೇಕಾಗಿಲ್ಲ.

ಉತ್ತಮೋತ್ತಮವಾದ ಸಿದ್ಧೌಷಧಿಗಳ ಅಭಾವದಿಂದ ಅನುಭವಿಗಳಾದ ವೈದ್ಯರು ಪಾಶ್ಚಾತ್ಯರ ಸಿದ್ಧೌಷಧಗಳಿಗೆ ಮನಸೋಲದಂತೆ ಆಯುರ್ವೇದಿಯರನ್ನು ಉದ್ಧರಿಸುವ ಸಲುವಾಗಿ ನಮ್ಮ ಕರ್ತವ್ಯವನ್ನು ನಾವು ಮಾಡಬೇಕು. ಇದಕ್ಕಾಗಿ ಈಗ ಇಲ್ಲಿ ಸೇರಿರುವ,

(೧) ನಮ್ಮ ನಿಖಿಲಕರ್ಣಾಟಕ ಆಯುರ್ವೇದ ಮಂಡಲ—ರಸಾಯನ ಸಂಭಾಷಾಪರಿಷತ್ತಿನವರು ಒಂದು ನಿಯಂತ್ರಣವನ್ನು ತಯಾರಿಸಿ ಅದರಲ್ಲಿ ಅನುಭವ

ಸ್ಥರಾದ ರಸಾಯನತಂತ್ರಜ್ಞರಿಂದ ಉತ್ತಮೋತ್ತಮವಾದ ರಸಾಯನಗಳನ್ನು ಮಾಡಿಸಿ ವೈದ್ಯರಿಗೆ ಒದಗಿಸುವುದು.

(೨) ಉತ್ತಮೋತ್ತಮ ಯೋಗಗಳಿಂದ ಕೂಡಿದ ರಸಾಯನ ತಂತ್ರ ಗ್ರಂಥಗಳನ್ನು ಕನ್ನಡದಲ್ಲಿ ಪ್ರಚುರಪಡಿಸುವುದು.

(೩) ಉತ್ತಮ ರಸವೈದ್ಯರನ್ನು ಕರೆಸಿ ಸಿದ್ಧ ರಸಾಯನಗಳ ಮತ್ತು ರಸಾಯನ ತಂತ್ರದ ಅನುಭವಗಳನ್ನು ಪರಿಷತ್ತಿನಲ್ಲಿ ಭಾಗವಹಿಸುವವರಿಗೆ ಒದಗಿಸಿ ಕೊಡುವುದು.

(೪) ಅನುಮಾನಗ್ರಸ್ತವಾದ ವಿಷಯಗಳನ್ನು ಚರ್ಚಿಸಲು ಒಂದು ಸಮಿತಿಯನ್ನು ಏರ್ಪಡಿಸುವುದು.

(೫) ಸಿದ್ಧ ರಸಾಯನಗಳ ಮಹತ್ವವನ್ನು ಪ್ರಚುರಪಡಿಸುವುದು, ಇತ್ಯಾದಿ.

ಮಹನೀಯರುಗಳೇ—ನನ್ನ ಭಾಷಣವನ್ನು ಸಾವಧಾನದಿಂದ ಕೇಳಿದ ತಮ್ಮೆಲ್ಲರಿಗೂ ನನ್ನ ಅನಂತ ಧನ್ಯವಾದಗಳು. ನನ್ನನ್ನು ಈ ಸ್ಥಾನಕ್ಕೇರಿಸಿ ಸನ್ಮಾನ ಮಾಡಿದ್ದಕ್ಕಾಗಿ ತಮ್ಮೆಲ್ಲರಿಗೂ ಮತ್ತು ಸ್ವಾಗತ ಸಮಿತಿಯವರಿಗೂ ಹೆಚ್ಚಾಗಿ ನನ್ನ ಬಾಲವಾಣಿಯನ್ನು ಕೇಳಿ ಆನಂದಿಸಬೇಕೆಂಬುದು ನನ್ನನ್ನು ಈ ಸ್ಥಾನದಲ್ಲಿ ಕೂಡಿಸಿರುವ ನನ್ನ ಅಧ್ಯಾಪಕ ವರ್ಗದವರಿಗೂ ಮೇಲಾಗಿ ನಮ್ಮನ್ನಾಳುವ ಮಹಾಸ್ವಾಮಿಯವರಿಗೂ ಅವರ ಪರಿವಾರಕ್ಕೂ ಭಗವಾನ್ ಶ್ರೀ ಧನ್ವಂತರಿಯು ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

॥ ಲೋಕಾಸ್ಸಮಸ್ತಾಸ್ಸುಖಿನೋಭವಂತು ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಯಲ್. ನರಸಿಂಹಮೂರ್ತಿ.

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941



ಶ್ರೀ॥ ಪಂ॥ ಎಂ. ವಿ. ಬುರ್ಲಿ,
ಮ್ಯಾ॥ ಡೈರೆಕ್ಟರ್
ಕರ್ಣಾಟಕಾಯುರ್ವೇದಿಕ್ ಫಾರ್ಮಸಿ, ಲಿ., ಬಾಗಲ್‌ಕೋಟೆ.
(ವಿಶ್ರಾಂತರಾದ ಉಪಾಧ್ಯಕ್ಷರು)



ಶ್ರೀ॥ ಆ॥ ವಿ॥ ಪಂ॥ ಎಗ್. ಎಸ್. ರಟ್ಟೀಹಳ್ಳೀ
L.A.M.S.
ಆಯುರ್ವೇದಿಕ್ ಪ್ರಾಕ್ಟಿಷನರ್, ಹುಬ್ಬಳ್ಳಿ.
(ನಿ. ಕ. ಆ. ಮಂಡಳದ ಸಹಾಯಕ ಸೆಕ್ರೆಟರಿ)




ಶ್ರೀ॥ ಪಂ॥ ಜೆ. ಜೆ. ಕುಲಕರ್ಣಿ,
ಆಯುರ್ವೇದಿಕ್ ಪ್ರಾಕ್ಟಿಷನರ್, ಹುಬ್ಬಳ್ಳಿ.
ಮತ್ತು
ಬೊಂಬಾಯಿ ಸ॥ ಇಂಡಿಯನ್ ಮೆ॥ಬೋ॥ ಸದಸ್ಯರು.

ನಿಖಿಲಕರ್ಣಾಟಕದ ೧೨ನೆಯ ಮತ್ತು ಮೈಸೂರು ಸಂಸ್ಥಾನದ ೧ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ, ಮೈಸೂರು.

# ರಸಾಯನಸಂಭಾಷಾಪರಿಷದಧ್ಯಕ್ಷರ ಭಾಷಣ.

(ಶ್ರೀಯುತ ವೈದ್ಯ ಬಿ. ಆರ್. ಹರಿದಾಸ್, ಮಂಗಳೂರ್‌ರವರಿಂದ)

---

ಪ್ರಿಯ ವ್ಯವಸಾಯ ಬಂಧುಗಳೇ,

ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಳನದ ನಿಮಿತ್ತ ನಾವೆಲ್ಲರೂ ಇಲ್ಲಿ ಬಂದು ಸೇರಿ ಅದರಲ್ಲಿ ಭಾಗವಹಿಸುತ್ತಾ ಈಗ ಅದರ ಒಂದು ಅಂಗವೇ ಆಗಿರುವ ರಸಾಯನಸಂಭಾಷಾಪರಿಷತ್ತಿನಲ್ಲಿ ಮಗುದೊಮ್ಮೆ ಸೇರಿದ್ದೇವೆ. ಈ ಪರಿಷತ್ತಿನ ಅಧ್ಯಕ್ಷಸ್ಥಾನಕ್ಕೆ ಅರ್ಹರಾದವರೂ, ನನಗಿಂತ ಯೋಗ್ಯತೆಯಲ್ಲಿ ಮತ್ತು ಜ್ಞಾನದಲ್ಲಿ ಎಷ್ಟೋ ಮಿಗಿಲಾದ ವಿದ್ವಾಂಸರು ಇಲ್ಲಿದ್ದರೂ, ವ್ಯವಸಾಯಕ್ಕೆ ತಕ್ಕಷ್ಟು ಮಾತ್ರ ಶಾಸ್ತ್ರಜ್ಞಾನವನ್ನುಳ್ಳ ನನ್ನನ್ನೇ ಈ ಸ್ಥಾನವನ್ನು ವಹಿಸಿಕೊಳ್ಳುವಂತೆ ಪೂರ್ವ ಸೂಚನೆ ಇಲ್ಲದೆ ಸಮ್ಮೇಳನದ ಕಾರ್ಯದರ್ಶಿಗಳು ವ್ಯಕ್ತಪಡಿಸಿದರು. ಅವರು ನನ್ನ ಮೇಲೆ ಹೊರಿಸಿದ ಭಾರವನ್ನು ನೋಡಿ ನನಗೆ ಕಳವಳವಾಗಿದೆ. ಆಯುರ್ವೇದದ ಪ್ರಕಾಂಡ ವಿದ್ವಾಂಸರಿಗೆ ಈ ಆಸನವು ಸುಖಾಸನವಾಗಿ ತೋರಿದರೂ ನನ್ನಂತಹ ಆಯುರ್ವೇದೋಪಜೀವಿಗಳಿಗೆ ಅದು ಕಂಟಕಾಸನವೇ ಸರಿ. ನಾನು ಆಯುರ್ವೇದದ ಹಾಗೂ ಆಯುರ್ವೇದಾಭಿಮಾನಿಗಳ ಕ್ಷುಲ್ಲಕ ಸೇವಕನಾಗಿರುವುದರಿಂದ ತಮ್ಮ ಆಜ್ಞೆಯನ್ನು ಶಿರಸಾವಹಿಸುವುದು ನನ್ನ ಕರ್ತವ್ಯವಾಗಿದೆ. ಆದುದರಿಂದ ಈ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಿದ್ದೇನೆ.

ನಾವಿಂದು ವಿಚಾರಮಾಡಬೇಕಾದ ವಿಷಯವು ರಸಾಯನಶಾಸ್ತ್ರದ್ದಾಗಿರುತ್ತದೆ. ಈ ರಸಾಯನಶಾಸ್ತ್ರವೆಂದರೆ—ಔದ್ಭಿದ, ಜಾಂಗಲಾದಿ ದ್ರವ್ಯಪ್ರಾಧಾನ್ಯವುಳ್ಳ ವೈದ್ಯಕದ ಭರದ್ವಾಜ (ಆತ್ರೇಯ), ಚರಕಾದಿ ಋಷಿಗಳು ಹೇಳಿದ ಅಷ್ಟಾಂಗ ಆಯುರ್ವೇದೀಯ ತಂತ್ರಗಳಲ್ಲೊಂದಾದ ರಸಾಯನ ತಂತ್ರವಲ್ಲ; ಏಕೆಂದರೆ ಆ ತಂತ್ರದಲ್ಲಿ ಕೇವಲ ಕಾಯಸಿದ್ಧಿಗೆನೇ ಪ್ರಾಧಾನ್ಯವಿರುತ್ತದೆ. ರಸಾಭ್ರಗಂಧಕಾದಿ ರಸ ಮಹಾರಸೋಪರಸ, ಸುವರ್ಣತಾಪ್ಯಾದಿಧಾತು; ಮಾಣಿಕ್ಯಮೌಕ್ತಿಕಾದಿಮಣಿ ಮುಂತಾದ ಪಾರ್ಥಿವ ದ್ರವ್ಯಕ್ಕೆ ಪ್ರಾಧಾನ್ಯ ಯಾವ ಶಾಸ್ತ್ರದಲ್ಲಿದೆಯೋ ಆ ಶಾಸ್ತ್ರಕ್ಕೆ ಸಂಬಂಧಪಟ್ಟದಾಗಿರುತ್ತದೆ; ಈ ಪದ್ಧತಿಯಲ್ಲಿ ಎಲ್ಲಾ ರೋಗಗಳ ಚಿಕಿತ್ಸೆಯಿದೆ.

ಆಯುಸ್ಸೆಂದರೆ ಪ್ರಾಣಿಗಳ ಜನನ ಕಾಲದಿಂದ ಅವಸಾನದ ವರೆಗಿನ ಕಾಲವೆಂತಲೂ, ಆ ಆಯುಸ್ಸನ್ನು ನಿರಾತಂಕವಾಗಿ ಸಾಗಿಸುವುದಕ್ಕೆ ಮಾಡುವ ಪ್ರಯತ್ನದ ಶಾಸ್ತ್ರಕ್ಕೆ ಆಯುರ್ವೇದವೆಂತಲೂ ಶಾಸ್ತ್ರದ ಪ್ರಣೀತರು ಹೇಳುವರು.

ನಿಸರ್ಗದಲ್ಲಿ ತೋರುವ ಯಾವ ವಸ್ತುಗಳೂ ಒಂದೇ ತೆರನಾಗಿ ಉಳಿದಿಲ್ಲ. ಅವುಗಳು ದೇಶ, ಕಾಲ, ಸ್ಥಿತಿಗನುಗುಣವಾಗಿ ವಿಶೇಷವಾದ ಪರಿಸ್ಥಿತಿಗಳಲ್ಲಿ ಮಾರ್ಪಡುತ್ತಾ ಬಂದಿರುವಂತೆ, ಆಯುರ್ವೇದದ ಒಂದು ಅಂಗವಾದ ವನಸ್ಪತ್ಯೋಪಚಾರ ಶಾಸ್ತ್ರವೂ ಕ್ರಮೇಣ ಮತ್ತೊಂದು ಅಂಗಕ್ಕೆ ತಲೆಬಾಗುತ್ತಾ ರಸಾಯನ ಶಾಸ್ತ್ರದ ವರೆಗೆ ಮಾರ್ಪಡುತ್ತಾ ಪ್ರಗತಿಹೊಂದಿರಬಹುದು ಎಂದು ಒಂದು ಪಂಥದವರ ಮತವಾಗಿದೆ. ಆಯುರ್ವೇದದ ಸರ್ವಾಂಗಗಳೂ ಒಂದೇ ಕಾಲದಲ್ಲಿ ಹುಟ್ಟುತ್ತಾ ಸಾವಕಾಶವಾಗಿ ತಮಗೆ ಬೇಕಾಗುವಂತಹ ಪರಿಸ್ಥಿತಿಯಲ್ಲಿ ಬೆಳೆಯುತ್ತಾ ಎಲ್ಲವೂ ಪರಸ್ಪರ ಆರಳಿರ ಬಾರದೇಕೆ? ಎಂದು ಪ್ರಶ್ನಿಸುವ ಪಂಥವೊಂದೂ ಇದೆ.

ಆಯುಷ್ಯದ ಆತಂಕನಿಗ್ರಹಕ್ಕಾಗಿ ಒಂದೇ ಸಮಯದಿಂದ ಬೇರೆ ಬೇರೆ ಪಂಥದವರು ಭಿನ್ನ ಭಿನ್ನ ಪದ್ಧತಿಯಿಂದ ಯತ್ನಿಸಿದರು ; ಉದಾಹರಣಾರ್ಥವಾಗಿ ಆತ್ರೇಯ, ಚರಕಾದಿಗಳು ಔದ್ಭಿದ ಮತ್ತು ಜಾಂಗಲಾದಿ ದ್ರವ್ಯಗಳಿಂದ ಆತಂಕ ಹರಣದ ಪ್ರಯತ್ನಗಳನ್ನು ಮಾಡುತ್ತಾ ಬಂದರು ; ಹಾಗೆಯೇ ಧನ್ವಂತರಿ, ಸುಶ್ರುತಾದಿಗಳು ಶಸ್ತ್ರಕರ್ಮಕ್ಕೇ ಪ್ರಾಧಾನ್ಯವನ್ನು ಕೊಟ್ಟು ಅದೇ ಧ್ಯೇಯವನ್ನು ನಡೆಸಿದರು. ಹಾಗೂ ರಸಸಿದ್ಧರು ರಸೋಪರಸಧಾತ್ವಾದಿಗಳಿಂದ ಆತಂಕಹರಣದ ಪ್ರಯತ್ನವನ್ನು ಕೈಕೊಂಡರು.

ಇದನ್ನೆಲ್ಲಾ ಬದಿಗಿಟ್ಟು ಸೃಷ್ಟಿನಿರೀಕ್ಷಣದ ಪದ್ಧತಿಯನ್ನು ನೋಡಲಿಕ್ಕೆ ಹೋದರೆ ಪತ್ರ, ಪುಷ್ಪ, ಫಲ, ತ್ವಕ್, ಸಾರ, ಮೂಲ ಯಾ ಕಂದಗಳು ಕ್ರಮದಿಂದ ಕಾಣಸಿಗುವವು. ಹಾಗೆಯೇ ವನಸ್ಪತಿ, ಕಂದಮೂಲ ನಿರೀಕ್ಷಣದ ನಂತರ ಭೂಗರ್ಭದಲ್ಲಿರುವ ರಸಧಾತ್ವಾದಿ ಖನಿಜ ಪದಾರ್ಥಗಳ ನಿರೀಕ್ಷಣ ಜ್ಞಾನವು ಪ್ರಾಣಿಗಳಿಗೆ ಆಗಿರಬಹುದೆಂದು ಭಾವಿಸಬಹುದಾದರೂ ಸೃಷ್ಟಿಯ ಉತ್ಪತ್ತಿಕ್ರಮವನ್ನು ನೋಡುತ್ತಾ ಹೋದಲ್ಲಿ ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ದ್ರವವೂ, ದ್ರವದಿಂದ ಪೃಥ್ವಿಯೂ, ಪೃಥ್ವಿಯಿಂದ ಔಷಧಿಗಳೂ (ವೃಕ್ಷಾದಿಗಳು) ಉತ್ಪನ್ನವಾದುವೆಂದು ಕಂಡುಬರುತ್ತದೆ. ಈ ಸೃಷ್ಟಿ ನಿಯಮವನ್ನು ನೋಡಿದಲ್ಲಿ ರಸೋಪರಸಾದಿ ಪಾರ್ಥಿವ (ನಿರಿಂದ್ರಿಯ–Inorganic) ದ್ರವ್ಯಗಳು ವನಸ್ಪತ್ಯಾದಿ ಔದ್ಭಿದ (ಇಂದ್ರಿಯ=Organic) ಪದಾರ್ಥಗಳಿಗಿಂತ ಪೂರ್ವದಲ್ಲೇ

ಉತ್ಪನ್ನವಾದುದರಿಂದ ಅವುಗಳ ಜ್ಞಾನವೇ ಪ್ರಥಮೋತ್ಪನ್ನವಾಯಿತೆಂಬ ಕೆಲವರ ಅಭಿಪ್ರಾಯವು ತಪ್ಪೆಂದು ಹೇಳಬರುವುದಿಲ್ಲ.

ಈಗ ನಾವು ಹೇಳುವ ರಸಾಯನಶಾಸ್ತ್ರವನ್ನು ಪ್ರಥಮದಲ್ಲಿ ಕಂಡುಹಿಡಿದ ವರು ಪೌರ್ವಾತ್ಯರೋ ಪಾಶ್ಚಾತ್ಯರೋ ಎಂಬ ವಾದಗಳು ಸಹ ಎಷ್ಟೋ ಇರ ಬಹುದು. ಇವೆಲ್ಲ ವಾದಗಳ ವಿಚಾರಮಾಡಹೋದಲ್ಲಿ ಬೀಜವೃಕ್ಷ ನ್ಯಾಯದಂತೆ ನಮ್ಮನ್ನು ನಿರುತ್ತರಗೊಳಿಸುವವು. ಈ ಎಲ್ಲಾ ವಾದಗಳನ್ನು ಬಿಟ್ಟು ನಮ್ಮ ಭಾರತ ದಲ್ಲಿ ಅಭಿವೃದ್ಧಿಹೊಂದಿದ ಯಾವ ರಸಾಯನ ಶಾಸ್ತ್ರವಿದೆಯೋ ಅದರ ವಿಷಯ ಆಲೋಚಿಸುವ.

ಭಾರತೀಯ ರಸಾಯನಶಾಸ್ತ್ರದ ಪ್ರವರ್ತಕರ ಪರಂಪರೆಯನ್ನು ನೋಡಿದರೆ ಆದಿಸಿದ್ಧಿ ಶಿವನಿಂದಲೇ ರಸಶಾಸ್ತ್ರವು ಪ್ರಚಾರಕ್ಕೆ ಬಂದಿತೆಂದು ತೋರುತ್ತದೆ. ಅನಂತರ ಕಾಪಾಲಿಕರಿಂದ ಗುಪ್ತಸ್ಥಿತಿಯಲ್ಲಿ ರಕ್ಷಿಸಲ್ಪಟ್ಟ ಈ ರಸಾಯನಶಾಸ್ತ್ರವನ್ನು ಸಿದ್ಧನಾಗಾರ್ಜುನಾದಿ ಬೌದ್ಧರು ಗ್ರಂಥನಿರ್ಮಾಣಾದಿಗಳಿಂದ ಲೋಕದಲ್ಲಿ ವೃದ್ಧಿ ಗೊಳಿಸಿದರು. (ರಸಶಾಸ್ತ್ರಗ್ರಂಥಗಳಲ್ಲಿ ಅಳಿದುಳಿದುವುಗಳ ಸಂಖ್ಯೆಯು ೧೫೦ಕ್ಕೆ ಮಿಕ್ಕಿರಬಹುದೆಂದು ಪುರಾತತ್ವಾನ್ವೇಷಕರ ಮತವಾಗಿದೆ).

ಸಾಮಾನ್ಯವಾಗಿ ರಸಾಯನಶಾಸ್ತ್ರವನ್ನು ಮೂರುವಿಭಾಗಗಳನ್ನಾಗಿ ಮಾಡ ಬರುವುದು. ಮೊದಲನೆಯದಾಗಿ—ಕೇವಲ ಖನಿಜಪದಾರ್ಥಗಳ ವಿಚಾರವಿರುವ ಭಾಗವು. ಎರಡನೆಯದಾಗಿ—ಧಾತುವಾದವು ಎಂದರೆ ರಸಮಹಾರಸೋಪರಸ ಧಾತೂಪಧಾತುಗಳಿಗೆ ವನಸ್ಪತಿಗಳನ್ನು ಯೋಜಿಸಿ ಅಲ್ಪಬೆಲೆಯುಳ್ಳ ಧಾತುಗಳಿಂದ ಬಹಳ ಮೌಲ್ಯದ ವಸ್ತುಗಳನ್ನು ತಯಾರಿಸುವ ವಾದವು. ಕಡೆಯ ಪ್ರಕರಣವೇ ರಸವೈದ್ಯಕವು. ಈ ಪ್ರಕರಣದಲ್ಲಿ ರಸಾಭ್ರಕಗಂಧಕ ಮಹಾರಸೋಪರಸ, ಸುವರ್ಣ ತಾಪ್ಯ, ಮಾಕ್ಷಿಕ, ಮೌಕ್ತಿಕ, ಧಾತು, ಮಣಿ ಮುಂತಾದುವನ್ನು ಜಾಂಗಲ ಹಾಗೂ ಔದ್ಭಿದದ್ರವ್ಯಗಳ ಸಂಯೋಗದಿಂದ ರೂಪಾಂತರಿಸಿ ಬಂದ ಕಲ್ಪವನ್ನು ಪ್ರಾಣಿಗಳ ದೇಹದ ಮೇಲೆ ಪ್ರಯೋಗಿಸಿ ಆತಂಕಹರಿಸುವ ವಿಷಯವು ಒಳಪಟ್ಟಿದೆ. ಈ ನಮ್ಮ ರಸವೈದ್ಯಕವು ಪಾಶ್ಚಾತ್ಯರಿಂದ ಭಾರತಕ್ಕೆ ಬಂತೆಂದಾಗಲೀ ಭಾರತದಲ್ಲೇ ಹುಟ್ಟಿ ಬೆಳೆದುದೆಂದಾಗಲೀ—ಹೇಗೂ ಈ ನಮ್ಮ ವೈದ್ಯಕರಸಾಯನಶಾಸ್ತ್ರದ ವೃದ್ಧಿಯ ಹಾಗೂ ಪರಿಣತೆಯ ದೃಷ್ಟಿಯಿಂದ ನೋಡಿದ ಪಕ್ಷಕ್ಕೆ ಭಾರತೀಯ ರಸಾಯನ ಶಾಸ್ತ್ರಕ್ಕೆ ಆಯುಷ್ಯದ ಆತಂಕನಿಗ್ರಹದ ದೃಷ್ಟಿಯಿಂದ ಹೆಚ್ಚು ಮಹತ್ವವನ್ನು ಕೊಡಬೇಕೆಂತ ಹೇಳಿದರೆ ಅದು ಅತಿಶಯೋಕ್ತಿಯಾಗಲಾರದು,

ಈಗ ರಸಾಯನಕಲ್ಪಗಳನ್ನೂ ನಾವು ಸ್ಥೂಲದೃಷ್ಟಿಯಿಂದ ನೋಡಿದರೆ ಅವುಗಳೂ ಮೂರುಗುಂಪುಗಳಿಗೆ ಸೇರುವವು. ಅವು ಯಾವುವೆಂದರೆ—

೧. ಕೂಪಿಸ್ಥ ಯಾ ಕೂಪೀಪಕ್ವರಸಾಯನ; ೨. ಪುಟಪಕ್ವ ರಸಾಯನ; ಮತ್ತು ೩. ಖಲ್ವೀ ರಸಾಯನ.

ಶೋಧಿಸಿಕೊಂಡ ಕೆಲವು ಧಾತುಗಳನ್ನೂ ಕ್ಷಾರಗಳನ್ನೂ ಒಟ್ಟು ಸೇರಿಸಿ ವಾನಸ್ಪತ್ಯಾದಿ ಇಂದ್ರಿಯ (Organic) ಪದಾರ್ಥಗಳ ಸಂಯೋಗಕೊಟ್ಟು ನಿರ್ದಿಷ್ಟ ಸಮಯದ ಪರ್ಯಂತ ಖಲ್ವಮಾಡಿ ಕುಪ್ಪಿ, ಮೂಷಾ ಇಲ್ಲವೆ ಸಂಪುಟಗಳಲ್ಲಿ ತುಂಬಿ ವಾಲುಕಾಯಂತ್ರ ಯಾ ಅದೇ ಮಾದರಿಯ ಬೇರಾವ ಭಟ್ಟಿಯಲ್ಲಾದರೂ ಇಟ್ಟು ನಿಯಮಿತಸಮಯದವರೆಗೆ ಕ್ರಮಾಗ್ನಿಕೊಟ್ಟು ತಯಾರಿಸಿದ ಕಲ್ಪಗಳಿಗೆ ಕೂಪೀಪಕ್ವರಸಾಯನವೆಂದಾಗಲೀ ಕೂಪಿಸ್ಥರಸಾಯನವೆಂದಾಗಲೀ ಹೇಳುವರು. ಈ ರಸಾಯನಗಳಲ್ಲಿ ರಸಗಂಧಕಗಳಿಗೆ ಪ್ರಾಧಾನ್ಯವಿದೆ. ರಸಸಿಂಧೂರ, ಪೂರ್ಣ ಚಂದ್ರೋದಯ, ಪಂಚಭೂತವ್ಯಾಧಿಹರಣ ಮುಂತಾದುವು ಕೂಪಿಸ್ಥಕಲ್ಪಗಳು. (ಈ ರೀತಿಯಿಂದ ಸಪ್ತಧಾತುಗಳನ್ನೂ ಭಸ್ಮೀಕರಿಸುವ ವಿಧಾನವೂ ಇದೆ.)

ಶುದ್ಧಗೊಳಿಸಿದ ಬೇರೆ ಬೇರೆ ಧಾತೂಪಧಾತುಗಳನ್ನು ಇಂದ್ರಿಯ (Organic)ಗಳಾಗಿರುವ ವನಸ್ಪತಿ ಯಾ ಪ್ರಾಣಿಜಪದಾರ್ಥಗಳೊಂದಿಗೆ ಖಲ್ವ ಗೊಳಿಸಿ ಶರಾವಸಂಪುಟದಲ್ಲಿಟ್ಟು ಕುಕ್ಕುಟ ಮೊದಲಾದ ಲಘುಪುಟದಿಂದ ಮಹಾ ಪುಟದವರೆಗೆ ಭಿನ್ನಭಿನ್ನಾಕೃತಿಯ ಗರ್ತಗಳನ್ನು ತೆಗೆದು ಅರಣ್ಯೋಪಲದಲ್ಲಿ ಅಗ್ನಿಯ ಪುಟಕೊಟ್ಟು ಸಿದ್ಧಗೊಳಿಸುವ ಕಲ್ಪಗಳು ಪುಟಪಕ್ವರಸಾಯನಗಳಾಗಿರುತ್ತವೆ. ಈ ಪದ್ಧತಿಯಲ್ಲಿ ಒಂದರಿಂದ ಸಾವಿರದವರೆಗೆ ಪುಟಕೊಟ್ಟು ತಯಾರಿಸುವ ಕ್ರಮ ವಿದೆ. ಉದಾ :—ಅಭ್ರಕ, ಸುವರ್ಣ, ತಾಮ್ರಾದಿಭಸ್ಮಗಳನ್ನು ತೆಗೆದುಕೊಳ್ಳ ಬಹುದು. ಈ ಕಲ್ಪಗಳಲ್ಲಿ ರಸಗಂಧಕಗಳಿಗೆ ಪ್ರಾಧಾನ್ಯವಿಲ್ಲ.

ಮೇಲಿನ ಕೂಪೀಪಕ್ವ ಇಲ್ಲವೆ ಪುಟಪಕ್ವಪದ್ಧತಿಯಿಂದ ತಯಾರುಗೊಳಿಸಿದ ಭಸ್ಮಗಳನ್ನೂ ಶೋಧಿಸಿದ ರಸಗಂಧಕಾದಿ ಮೂಲಪದಾರ್ಥಗಳನ್ನೂ, ವನಸ್ಪತಿಗಳನ್ನು ಮತ್ತು ಲವಣಗಳನ್ನೂ ಸಂಯುಕ್ತಗೊಳಿಸಿ ಸಸ್ಯಾದಿರಸಗಳ ವ ದುಗ್ಧ, ಪಿತ್ತ, ರುಧಿರಾದಿ ಪ್ರಾಣಿಜಪದಾರ್ಥಗಳೊಂದಿಗೆ ಕ್ಲಿಪ್ತಸಮಯದವರೆಗೆ ಮರ್ದಿಸಿ ಛಾಯ ಯಾ ಆತಪಯಾ ಕಿಂಚಿತ್ ಅಗ್ನಿತಾಪಕೊಟ್ಟು ಗುಟಿಕಾ ಮತ್ತು ಪರ್ಪಟಿಗಳ ರೂಪದಲ್ಲಿ ಸಿದ್ಧಗೊಳಿಸುವ ರಸಾಯನಗಳನ್ನು ಖಲ್ವೀರಸಾಯನವೆನ್ನುತ್ತೇವೆ. ರಸ, ತಾಮ್ರ, ಸುವರ್ಣ, ಪಂಚಾಮೃತಾದಿ ಪರ್ಪಟಿಗಳೂ, ಸುವರ್ಣಮಾಲಿನೀವಸಂತ,

ಸೂತಶೇಖರಾದಿಗಳೂ ಈ ವರ್ಗದಲ್ಲಿ ಸೇರುತ್ತವೆ. ಕೂಪಿಕಾಮಾತ್ರೆ (ಪೋಟಲೀ ರಸ)ಗಳು ಪರ್ಪಟಿಗಳ ಇನ್ನೊಂದು ರೂಪವಾಗಿವೆ. ಖಲ್ವೀಮಾತ್ರೆಗಳು ಪೋಟಲಿ ಗಳನ್ನು ಕಟ್ಟಿ ಗಂಧಕದಲ್ಲಿ ನಿರ್ದಿಷ್ಟಸಮಯದವರೆಗೆ ಬೇಯಿಸಿ ಮಾಡುವಂತಹ ರಸಾಯನಗಳವು. ಉದಾಹರಣಾರ್ಥ ಹೇಮಗರ್ಭವನ್ನು ತೆಗೆದುಕೊಳ್ಳಬಹುದು. ಕೂಪಿಕಾಮಾತ್ರೆಗಳೂ, ಪರ್ಪಟೀರಸಗಳೂ (ವ್ರುತಿ) ನಾಲ್ಕನೇಭಾಗವೆಂದು ಕೆಲವರು ಭಾವಿಸುವುದಾದರೂ ಅವನ್ನು ಖಲ್ವೀರಸಾಯನದ ಒಳಭೇದವಾಗಿ ಹಿಡಿಯಬಹುದು.

ಆರ್ಷ ಗ್ರಂಥಗಳನಂತರ ಪ್ರಚಾರಕ್ಕೆ ಬಂಧ ಭಾವಪ್ರಕಾಶ, ಯೋಗರತ್ನಾ ಕರ, ಭೈಷಜ್ಯರತ್ನಾವಳಿ ಮೊದಲಾದ ಸಂಗ್ರಹ ಗ್ರಂಥಕರ್ತರು ನಮ್ಮ ರಸಪದ್ಧತಿಗೆ ಪ್ರಾಧಾನ್ಯವನ್ನು ಕೊಟ್ಟು ಆತಂಕನಿಗ್ರಹದ ಒಂದು ಸಮ್ಮಿಶ್ರಪದ್ಧತಿಯನ್ನೇ ನಿರ್ಮಿ ಸಿದರೆಂದು ಹೇಳಬಹುದು. ಈ ರಸಪದ್ಧತಿಗೆ ಮಹತ್ವಬರುವರೆ ಹೆಚ್ಚಿನ ಕಾರಣ ಇವರ ಅಚ್ಚುಕಟ್ಟುತನ (Compact)ವೇ ಇರಬೇಕೆಂತ ನನ್ನ ಭಾವನೆ.

ರಸಾದಿಗಳು ವನಸ್ಪತಿಗಳಂತೆ ಯಾವ ಋತುಧರ್ಮವನ್ನವಲಂಬಿಸಿಲ್ಲದಿರು ವುದರಿಂದಲೂ, ಅವುಗಳು ಯಾವ ಕಾಲದಲ್ಲೂ ಸೌಲಭ್ಯವಾದುದರಿಂದಲೂ, ಹಾಗೆಯೇ ರಸೌಷಧಿಗಳು ಬಹುಕಾಲದವರೆಗೆ ಬಾಳುವುದರಿಂದಲೂ, ಅವುಗಳಲ್ಲಿರುವ ಗುಣಧರ್ಮಗಳಿಗೆ ಎಂದೂ ಧಕ್ಕೆ ಬರಲಾರದಿರುವುದರಿಂದಲೂ, ಸೂಕ್ಷ್ಮಪ್ರಮಾಣ ದಲ್ಲೇ ಕೊಡಬೇಕಾದ ಕಾರಣ ಅವುಗಳ ರಸಗಂಧಾದಿಗಳು ರಸನಾದಿಗಳಿಗೆ ತಟ್ಟ ದಿರುವುದರಿಂದಲೂ, ತಮ್ಮ ಯೋಗವಾಹಿಗುಣದಿಂದ ಆಸವಾರಿಷ್ಟ ಚೂರ್ಣಾದಿ ಗಳನ್ನು ಚಿರಕಾಲ ಬಾಳುವಂತೆ ಮಾಡಿ ಅವುಗಳ ಗುಣಧರ್ಮಗಳನ್ನು ವೃದ್ಧಿಪಡಿಸು ವುದರಿಂದಲೂ, ವೈದ್ಯನಿಗೂ, ರೋಗಿಗೂ, ಪರಿಚಾರಕನಿಗೂ ರಸೌಷಧಿಗಳು ಅತ್ಯಂತ ಉಪಕಾರಿಗಳಾಗಿವೆ.

ಈ ನಮ್ಮ ಪದ್ಧತಿಯ ಔಷಧೀಗುಣಧರ್ಮಗಳ ವಿಷಯ ಆಲೋಚಿಸುವ ಮೊದಲೇ ಅದರ ಸಾತ್ಮ್ಯಾಸಾತ್ಮ್ಯವಿಚಾರಮಾಡುವುದು ಅಗತ್ಯ. ಸಾತ್ಮ್ಯಪದಾರ್ಥ ಗಳೆಂದರೆ ಪಚನಕ್ಕೆ ಸಂಬಂಧಿಸಿದ ಅಂತರಿಂದ್ರಿಯಗಳಿಗೆ ಹೆಚ್ಚು ಕಷ್ಟಕೊಡದೆ ದೇಹದಲ್ಲಿ ತದ್ರೂಪವಾಗಿ ಸೇರಿಕೊಳ್ಳುವ ಪದಾರ್ಥಗಳು. ಅಸಾತ್ಮ್ಯವೆಂದರೆ ತದ್ವಿರುದ್ಧ. ನಮ್ಮ ದೇಹದಲ್ಲಿ ಖನಿಜಪದಾರ್ಥದ ಮೂಲತತ್ವಗಳು ಸೇರಿಕೊಂಡಿ ದ್ದರೂ ಅವು ಪ್ರಾಣಿಜರೂಪವನ್ನು ಹೊಂದಿರುವವು. ಆದುದರಿಂದ ನಮ್ಮ ದೇಹರಕ್ಷಣ ಮತ್ತು ಪೋಷಣದಲ್ಲಿ ಬರುವಂತಹ ತೊಂದರೆಗಳನ್ನು ನಿವಾರಿಸಲಿಕ್ಕೆ ನಮ್ಮ ದೇಹದ ಸಜಾತೀಯ (ಇಂದ್ರಿಯ-Organic) ಎಂದರೆ ಸಾತ್ಮ್ಯ ಪದಾರ್ಥಗಳು ಅಗತ್ಯ.

ಖನಿಜಪದಾರ್ಥಗಳು (ನಿರಿಂದ್ರಿಯ-Inorganic) ನಮ್ಮ ದೇಹಕ್ಕೆ ವಿಜಾತೀಯ ವಾದುದರಿಂದ ಅಸಾತ್ಮ್ಯವಾಗಿರುವುವು. ಈ ದೃಷ್ಟಿಯಿಂದ ನೋಡಿದರೆ ಪ್ರಾಣಿಜ ಪದಾರ್ಥಗಳು ವಿಶೇಷ ಸಜಾತೀಯವಾಗಿರುವುದರಿಂದ ಅವುಗಳಿಗೆ ಪ್ರಥಮಸ್ಥಾನ ವನ್ನು ಕೊಡಬೇಕಾಗುತ್ತದೆ: ಔದ್ಭಿದ (ವನಸ್ಪತಿ) ಪದಾರ್ಥಗಳು ಎರಡನೆಯ ಸ್ಥಾನವನ್ನು ಪಡೆಯುತ್ತವೆ. ಖನಿಜ (ಪಾರ್ಥಿವ) ಪದಾರ್ಥಗಳು (ನಮ್ಮ ರಸಾಯನಶಾಸ್ತ್ರದಲ್ಲಿರುವ ಮೂಲಪದಾರ್ಥಗಳು) ಮೂರನೆ ಜಾತಿಗೆ ಸೇರಿದವುಗಳು. ಆದರೆ ಖನಿಜಪದಾರ್ಥಗಳಲ್ಲಿರುವ ಹೆಚ್ಚಿನ ಭಾಗವು ನಮ್ಮ ದೇಹದಲ್ಲಿರುವುದಾದರೂ ಅದು ರೂಪಾಂತರಿತ ಸ್ಥಿತಿಯಲ್ಲಿರುವುದರಿಂದ ಅವುಗಳನ್ನು (ಖನಿಜಪದಾರ್ಥಗಳನ್ನು) ಮೂಲಸ್ಥಿತಿಯಲ್ಲೇ ಉಪಯೋಗಿಸಿದರೆ ದೇಹಕ್ಕೆ ಬೇಗನೇ ಸೇರಲಾರವು—ಆ ಪದಾರ್ಥಗಳನ್ನು ದೇಹದಿಂದ ವಿಂಗಡಿಸುವರೆ ಅಂತರಿಂದ್ರಿಯಗಳಿಗೆ ಹೆಚ್ಚಿನ ಕೆಲಸ ಬಿದ್ದು ಅವುಗಳು ಸೋತುಹೋಗುವ ಸಂಭವವಿರುವುದರಿಂದ ಮೂಲಸ್ಥಿತಿಯಲ್ಲೇ ಕೊಟ್ಟರೆ ಅಪಾಯಕರವು. ನಮ್ಮ ಆಯುರ್ವೇದ ಪದ್ಧತಿಯ ಔಷಧ ಮತ್ತು ಅನ್ನಗಳು ಈ ತತ್ವದಿಂದಲೇ ರೋಗಾರೋಗ್ಯಕ್ಕೆ ಕಾರಣಗಳಾಗಿರುವವೆಂದು ಪ್ರಾಜ್ಞರ ಅಭಿಪ್ರಾಯವು.

ಇತ್ತೀಚೆಗೆ ಪಾಶ್ಚಾತ್ಯ ವೈದ್ಯಪದ್ಧತಿಯವರೂ ಈ ವಿಚಾರದಲ್ಲಿ ನಮ್ಮ ತತ್ವವನ್ನೇ ಅನುಕರಿಸುತ್ತಿರುವರೆಂದು ಹೇಳಬಹುದು. ಉದಾ :—ಮೊದಲಿನ ಪದ್ಧತಿಪ್ರಕಾರ ಖನಿಜಲೋಹ (Iron sulphate ವಗೈರೆ)ವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದ ಪಾಶ್ಚಾತ್ಯರು ಈಗ ಸಾತ್ಮ್ಯವಾಗಿರುವ Haemoglobin ಮೊದಲಾದ ಪ್ರಾಣಿಜಲೋಹಗಳನ್ನೇ ಹೆಚ್ಚಿನ ಪರಿಣಾಮಕಾರಿಯೆಂದು ಉಪಯೋಗಿಸುತ್ತಾರೆ. ಅಲ್ಲದೆ ಎಷ್ಟೋ ಖನಿಜಪದಾರ್ಥಗಳಿಗೆ Urea ಮುಂತಾದ ಪ್ರಾಣಿಜ ಪದಾರ್ಥಗಳನ್ನು ಸೇರಿಸಿ ಮುಖ ಯಾ ಸೂಚಿಕಾಭರಣದ್ವಾರಾ (Orally or by injections) ಉಪಯೋಗಿಸುವರು.

ರಸವೈದ್ಯರ ಮುಖ್ಯೋದ್ದೇಶವು—ಖನಿಜ (Inorganic) ಪದಾರ್ಥಗಳನ್ನು ವಾನಸ್ಪತಿಜ ಯಾ ಪ್ರಾಣಿಜ (Organic) ಪದಾರ್ಥಗಳಲ್ಲಿ ರೂಪಾಂತರಿಸುವುದೆಂದು ನಮ್ಮ ರಸಕಲ್ಪಗಳನ್ನು ಪರ್ಯಾಲೋಚಿಸಿದ್ದಲ್ಲಿ ತಾನಾಗಿಯೇ ತಿಳಿಯುವುದು. ಪ್ರಥಮತಃ ಪುಟಪಕ್ವರಸಾಯನ (ಭಸ್ಮ) ಗಳನ್ನೇ ತೆಗೆದುಕೊಳ್ಳುವ. ನಮ್ಮ ಲೋಹಭಸ್ಮವನ್ನು ಆಧುನಿಕ ಪದ್ಧತಿಯಿಂದ ವಿಶ್ಲೇಷಣಮಾಡಿದರೆ ಅದರಲ್ಲಿ (Iron Oxide) ಮುಖ್ಯಭಾಗವಾಗಿ ತೋರಿಬರುವುದು. ಪಾಶ್ಚಾತ್ಯ ಪದ್ಧತಿಯಿಂದ

(Iron Oxide)ಯನ್ನು ತಯಾರಿಸುವರೆ ನಮ್ಮ ಕ್ರಮದಲ್ಲಿರುವಷ್ಟು ಭಾವನಾ ಪುಟಗಳ ಪರಿಶ್ರಮವಿಲ್ಲ.*

ಆದರೆ ನಮ್ಮ ಲೋಹಭಸ್ಮದ ಗುಣವನ್ನು ಎಂದಿಗೂ ಆ Iron Oxide ಕೊಡಲಾರದು. ಲೋಹವನ್ನು ನಮ್ಮ ರಕ್ತಕ್ಕೆ ಸೇರುವಂತೆ ಸೂಕ್ಷ್ಮಾತಿ ಸೂಕ್ಷ್ಮ ಕಣಗಳನ್ನು ವನಸ್ಪತಿದ್ವಾರಾ ರೂಪಾಂತರಿಸಿದಲ್ಲಿ ಸಿಗುವ ವಾನಸ್ಪತಿಕಲೋಹ (Vegetable Iron) ವೇ ಲೋಹಭಸ್ಮವು. (ವಾನಸ್ಪತಿಕ ಪದಾರ್ಥವು ಸಾತ್ಮ್ಯವೆಂದು ಈ ಮೊದಲೇ ಪ್ರತಿಪಾದಿಸಿದೆಯಷ್ಟೆ!) ಎಲ್ಲಾ ಭಸ್ಮಗಳೂ ಇದೇ ರೀತಿಯಿಂದ ತಯಾರಿಸಲ್ಪಡುವವು. ಪಾಶ್ಚಾತ್ಯಪದ್ಧತಿಯವರು ಲೋಹ ಕಾಂತಲೋಹಾದಿಗಳನ್ನು ಅತಿ ಸೂಕ್ಷ್ಮಕಣಗಳ ಪಾಯಸರೂಪ (Colloidal manganese) ದಲ್ಲಿ ಹೆಚ್ಚಿನ ಪರಿಣಾಮಕಾರಿಯೆಂದು ಉಪಯೋಗಿಸುವರು. ಅದಕ್ಕಿಂತ ಎಷ್ಟೋ ಪಾಲು ನಮ್ಮ ವಾನಸ್ಪತಿಕ ಲೋಹ (Vegetable Iron)ವು ಪರಿಣಾಮಕಾರಿಯಾಗಿರುವುದು. ಎಲ್ಲಾ ಪುಟಪಕ್ವಭಸ್ಮಗಳೂ ಇದೇ ತತ್ವವನ್ನು ಅವಲಂಬಿಸಿರುವವು. ಖಲ್ವೀರಸಾಯನದ ವಿಷಯದಲ್ಲಿ ಬೇರೇನೂ ಹೇಳಬೇಕಾದ ಆವಶ್ಯಕತೆಯೇ ಇಲ್ಲ. ಕಾರಣ, ಇವೆಲ್ಲ ಭಸ್ಮಗಳೊಡನೆ ಇನ್ನಷ್ಟು ವನಸ್ಪತಿಯ ಚೂರ್ಣಾದಿಗಳನ್ನು ಸೇರಿಸಿ ಹಾಲು, ಜೇನ್ನು, ಕಸ್ತೂರಿ ವಗೈರಿ ಪ್ರಾಣಿಜ ಪದಾರ್ಥಗಳೊಂದಿಗೆ ಹಾಗೂ ಹಲವು ವನಸ್ಪತಿಗಳ ರಸವನ್ನು ಸೇರಿಸಿ, ಕೆಲವು ದಿವಸಗಳ ವರೆಗೆ ಮರ್ದಿಸಿ ಮಾಡಿದಂತಹ ಖಲ್ವೀ ರಸಾಯನಗಳು ಅಮೃತಕ್ಕೆ ಸರಿಹೋಲಲಾರವೇ? ನಮ್ಮ ಕೂಪಿಸ್ಥರಸಾಯನಗಳು ಪಾಶ್ಚಾತ್ಯಪದ್ಧತಿಯ ರಸಾಯನಗಳಿಗೆ ಸರಿಸಮಾನವಿದ್ದರೂ ಅದರಲ್ಲಿ ಸಹ ವೈಚಿತ್ರ್ಯವಿದೆ. ಪಾಶ್ಚಾತ್ಯ ಪದ್ಧತಿಯಿಂದ ಮಾಡಿದ Mercuric sulphideಗೂ ನಮ್ಮ ಮಕರಧ್ವಜಕ್ಕೂ ವಿಶ್ಲೇಷಣದಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲವೆಂದು ವೈಜ್ಞಾನಿಕರ ಮತ. ಆದರೆ ಗುಣಧರ್ಮದೃಷ್ಟಿಯಿಂದ ನೋಡಿದರೆ ಇವೆರಡಕ್ಕೂ ಅಜಗಜಾಂತರವಿದೆ. ನಮ್ಮ ಮಕರಧ್ವಜದಲ್ಲಿ ಸುವರ್ಣವಿರಲಿ, ಇಲ್ಲದಿರಲಿ, ಅದನ್ನು ತಯಾರಿಸುವಾಗ ಸುವರ್ಣವನ್ನು ಸೇರಿಸುವುದರಿಂದ ಅದು ಸುವರ್ಣದ ಗುಣವನ್ನು ಕೊಟ್ಟೇ ಕೊಡುವುದೆಂದು ಆಧುನಿಕ ವೈಜ್ಞಾನಿಕರು ಒಪ್ಪಿಕೊಂಡಿರು

---

* **ಟಿಪ್ಪಣಿ**—Iron sulphate (ಅನ್ನಭೇದಿ) ಯನ್ನು ವಿವಕ್ಷಿತ ಪ್ರಮಾಣದಲ್ಲಿ ನೀರಿನಲ್ಲಿ ಕರಗಿಸುವುದು. ಹಾಗೆಯೇ ಸರ್ಜಕ್ಷಾರ (Soda) ವನ್ನು (ಬೇರೊಂದು ಪಾತ್ರೆಯಲ್ಲಿ) ಕರಗಿಸುವುದು. ಎರಡನ್ನೂ ಸೇರಿಸಿ ಸ್ವಲ್ಪ ಸಮಯ ಅಲುಗಾಡಿಸುವುದು. ನಂತರ ಅದನ್ನು ಗಾಳಿಸಿ ಬಂದ ಹುಡಿಯನ್ನು ತುಂಬಾ ಸರ್ತಿ ತೊಳೆದು ಒಣಗಿಸಿದರೆ Iron Oxide ಉಂಟಾಗುವುದು.

ವರು. (ಮಕರಧ್ವಜದಲ್ಲಿ ಸುವರ್ಣ ಸೇರಿರುವುದು ಸಹ ಇದೆ.) ಒಂದುವೇ ಸುವರ್ಣ ಸೇರದೆ ಇದ್ದರೂ Mercuric Sulphide ಆಗುವಾಗ ಸುವರ್ಣವು ಮಧ್ಯಸ್ಥ (Catalytic Agent) ವಾಗಿ ಪ್ರಯೋಜನಕೊಡುವುದು. ಈ ದೃಷ್ಟಿ ಯಿಂದ ನಮ್ಮ ರಸಪದ್ಧತಿಯ ಕಲ್ಪಗಳ ನಿರೀಕ್ಷಣದ ಆಗತ್ಯವಿದೆ.

ನಮ್ಮ ಪದ್ಧತಿಯ ಕಲ್ಪಗಳು ದೇಹದ ಬೇರೆ ಬೇರೆ ಭಾಗಗಳಮೇಲೆ ಮಾಡುವ ಕ್ರಿಯೆಗಳ ವಿಷಯದಲ್ಲಿ ಎರಡು ಶಬ್ದಗಳನ್ನು ಹೇಳುತ್ತೇನೆ. ಮಕರಧ್ವಜ, ರಸ ಸಿಂಧೂರಾದಿ ಕಲ್ಪಗಳು ಹೃದಯದ್ವಾರಾ ರಕ್ತಾಭಿಸರಣದಮೇಲೂ, ಸುವರ್ಣರಾಜ ಮೃಗಾಂಕಾದಿ ರಸಗಳು ಜನನ-ಮೂತ್ರೇಂದ್ರಿಯ ಸಂಸ್ಥೆಯಮೇಲೂ, ಪರ್ಪಟ್ಯಾದಿ ರಸಗಂಧಕಕಜ್ಜಲಿಯುಕ್ತ ಕಲ್ಪಗಳು ಆಂತ್ರಗಳಮೇಲೂ, ಹೇಮಗರ್ಭಾದಿ ಪೋಟ ಲೀರಸಗಳು ವಾತವಾಹಿನ್ಯಗ್ರಗಳಮೇಲೂ, ಸುವರ್ಣಮಾಲಿನೀವಸಂತ, ವಸಂತ ಕುಸುಮಾಕರಾದಿ ಅಮೃತತುಲ್ಯ ಖಲ್ವೀರಸಾಯನಗಳು ಪಚನವ್ಯೂಹದ್ವಾರಾ ಎಲ್ಲಾ ಇಂದ್ರಿಯಗಳಮೇಲೂ ವಿಶೇಷ ಕ್ರಿಯೆ ಮಾಡುವವು ಎಂದು ಶಾಸ್ತ್ರಜ್ಞರ ಅಭಿಪ್ರಾಯವಿದೆ.

ಮೇಲಿನ ಪ್ರತಿಪಾದನದಿಂದ ಈ ನಮ್ಮ ಪದ್ಧತಿ ಎಷ್ಟರಮಟ್ಟಿಗೆ ಅನಪಾಯಿ ಮತ್ತು ಉಪಯೋಗಿ ಎಂದು ಹೇಳಿದುದು ಈಗ ಎಲ್ಲರಿಗೆ ವಿದಿತವಾಗಿರಬೇಕು.

ಈಗ ಕೆಲವು ಜನರಿಗೆ ಈ ರಸಪದ್ಧತಿಯಮೇಲೆ ಇರುವಂತಹ ದುರಭಿಪ್ರಾ ಯದ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಿ ಈ ಚಿಕ್ಕ ಭಾಷಣವನ್ನು ಮುಗಿಸುವೆನು. ಹೇಗೆ ಜನರಿಗೆ ರಸೌಷಧಿಯಿಂದ ಗುಣಪಡೆದು ಈ ಪದ್ಧತಿಯಲ್ಲಿ ಸದಭಿಪ್ರಾಯವಿದೆಯೋ ಹಾಗೆಯೇ ದುರಭಿಪ್ರಾಯಕ್ಕೆ ಆನೇಕ ಕಾರಣಗಳಿರಬಹು ದಾದರೂ ರಸೌಷಧಿಗಳ ಪ್ರಮಾಣ (ಮಾತ್ರೆ-Dose) ಗೊತ್ತಿಲ್ಲದ ಕೆಲವು ಅವೈದ್ಯ ರಿಂದ ಗುಪ್ತೌಷಧಿಗಳನ್ನು (Secret Remedies) ಪಡೆದು ಕೆಲವು ಮಟ್ಟಿಗೆ ಅಪಾಯವನ್ನು ಹೊಂದಿದ್ದೂ ಒಂದು ಮುಖ್ಯ ಕಾರಣವಾಗಿದೆಯೆಂದು ಹೇಳದು ಪಾಯವಿಲ್ಲ.* ಅಂಥಾ ಆ ದುರಭಿಪ್ರಾಯವನ್ನು ಬೆಳೆಸುವರೆ ನಮ್ಮ ಪಾಶ್ಚಾತ್ಯಪದ್ಧ ತಿಯ ವೈದ್ಯರೂ ಕೂಡಾ ಪ್ರೋತ್ಸಾಹಿಸಿದ್ದಾರೆಂದು ಹೇಳುವರೆ ತುಂಬಾ ವಿಷಾದ ವಾಗುತ್ತದೆ. ರಸೌಷಧಿಗಳನ್ನು ಪೌರ್ವಾತ್ಯ ವೈದ್ಯರಂತೆಯೇ ಪಾಶ್ಚಾತ್ಯವೈದ್ಯರೂ ಕೂಡಾ ಉಪಯೋಗಿಸುವರು. ನಾವು ಉಪಯೋಗಿಸುವ ರಸಗಂಧಕಯುತ ನಿರುಪ ದ್ರವಿರಸಕಲ್ಪಗಳನ್ನು ಅವರು ಹೆಚ್ಚಾಗಿ ಉಪಯೋಗಿಸದಿದ್ದರೂ ಸೌವೀರಪಾಷಾಣ, ರಸಕರ್ಪೂರ ವೆಗೈರೆ ಕಲ್ಪದ ಜಾತಿಯ ಕಲ್ಪಗಳನ್ನು ತುಂಬಾ ಉಪಯೋಗಿಸುತ್ತಿ

ರುವರು. ನಾವು ಯಾವುದನ್ನು ಸನ್ನೀರ ಪಾಷಾಣವೆನ್ನುವೆವೋ ಅದನ್ನೇ ಪಾಶ್ಚಾತ್ಯರು Perchloride of Mercury ಎಂದೆನ್ನುವರು. ನಮ್ಮ ರಸಕರ್ಪೂರಕ್ಕೆ ಅವರು Subchloride of Mercury ಅಥವಾ Calomel ಎಂದು ಹೇಳುವರು. (ಬಜಾರದಲ್ಲಿ ದೊರಕುವ ನಮ್ಮ ರಸಕರ್ಪೂರದಲ್ಲಿ ೯ ಪಾಲು Hydrarg-Subchloride ಮತ್ತು ೧ ಪಾಲು Hydrarg-Perchlogide ಸೇರಿರುವುವು) ಪಾಶ್ಚಾತ್ಯ ವೈದ್ಯರು ಹೆಚ್ಚಾಗಿ ಯಾವ ಕಾಹಿಲೆಯಲ್ಲೂ ನಾಲಿಗೆಯಲ್ಲಿ ಅಗ್ರಬಂಡೊಡನೆ ಯಕೃತ್‌ವಿಕೃತಿಯೆಂದು Calomelನ್ನು ಕೊಡದಿರಲಾರರು. ಅದರಂತೆ ಎಳೆ ಕೂಸುಗಳಿಗೆ ಸಹ Grey Powder (Hydrarg-Cumcreata)ನ್ನು ಕೊಡದೆ ಇರುವುದು ಕಡಿಮೆ. ನಾವು ಹೇಗೆ ರಸ ಮತ್ತು ಗಂಧಕವನ್ನು ಮರ್ದಿಸಿ ಕಜ್ಜಲಿರಸವನ್ನು ಮಾಡುವೆವೋ ಹಾಗೆಯೇ ಅವರು ಸೀಮೆಸುಣ್ಣ (Chalk)ವನ್ನು ಹಸಿ ರಸ (Mercury) ದೊಡನೆ ಮರ್ದಿಸಿ ಮಾಡುವ ಬೂದುಬಣ್ಣದ ಕಜ್ಜಲಿಗೆ Grey Powder ಎಂದು ಹೇಳುತ್ತಾರೆ. ಆದುದರಿಂದ ಪಾಶ್ಚಾತ್ಯ ವೈದ್ಯರು ನಮ್ಮ ರಸ ಪದ್ಧತಿಯನ್ನು ದೂಷಿಸುವುದಾದರೆ ಅದು ಅವರ ಮನೋದೇವತೆಯ ಹತ್ತಿರ ವಂಚಿಸುವುದೆಂದು ಹೇಳಿದರೆ ತಪ್ಪಾಗದು.

ಹೆಚ್ಚಾಗಿ ಫಿರಂಗೋಪದಂಶ (Syphilis) ರೋಗಕ್ಕೆ ಪೌರ್ವಾತ್ಯರಂತೆಯೇ ಪಾಶ್ಚಾತ್ಯ ವೈದ್ಯರೂ ಕೂಡ ರಸೌಷಧಿಗಳಿಂದಲೇ ಉಪಚರಿಸುವರು. ಪೌರ್ವಾತ್ಯ ವೈದ್ಯರೂ ರಸಕರ್ಪೂರ ಮುಂತಾದ ರಸಕಲ್ಪಗಳನ್ನು ಮುಖ ಯಾ ಧೂಮ ದ್ವಾರಾ ಕೊಡುವ ಕ್ರಮವಿದೆ. ಹಾಗೆಯೇ ಪಾಶ್ಚಾತ್ಯ ವೈದ್ಯರು ಮುಖ್ಯತಃ ಮುಖ, ಚರ್ಮ, ಮರ್ದನ, ಧೂಮ ಮತ್ತು ಸೂಚಿಕಾಭರಣದ್ವಾರಾ ರಸಕಲ್ಪಗಳನ್ನು ಕೊಡುವರು. ಇಪ್ಪತ್ತನೆಯ ಶತಮಾನದಲ್ಲಿ (Salvarsan, Neosalvarsn) ಮುಂತಾದ

---

*ರಸಕಲ್ಪಗಳು ಹೊಟ್ಟೆಗೆಹೋದ ೨ ಗಂಟೆಯೊಳಗೆ ಅಶ್ರು, ಮೊಲೆಹಾಲು, ಬೆವರು, ಮಲಮೂತ್ರಾದಿ ಮಾರ್ಗದಿಂದ ಹೊರಬೀಳಲಾರಂಭವಾಗುವುವು ಈ ಎಲ್ಲಾ ಮಾರ್ಗಗಳಿಂದ ೨೪ ಗಂಟೆಗಳಲ್ಲಿ ಸುಮಾರು ೧/೧೬ನೇ ಗ್ರೈನು ಪ್ರಮಾಣದಷ್ಟು ದೇಹದಿಂದ ಹೊರಗೆ ಬೀಳುವುದೆಂದು ತುಂಬಾ ಪ್ರಯೋಗಗಳಿಂದ ಡಾ|| ಬಾಲ್ಜುರ್ ಮತ್ತು ಕ್ಲೂಮ್‌ಕ್ಲೇ ಎಂಬುವರು ಸಿದ್ಧ ಮಾಡಿರುವರು. ರಸೌಷಧಿಯ ಪ್ರಮಾಣವು ದೇಹದೊಳಗೆ ಹೆಚ್ಚು ಸೇರಿದರೆ ರಸೋಪದ್ರವವು ತುಂಬಾ ದಿವಸಗಳವರೆಗೆ ಉಳಿಯುವುವು. ಆದುದರಿಂದ ರಸೌಷಧಿಯನ್ನು ೨೪ ಗಂಟೆಯ ಅವಧಿಯಲ್ಲಿ ೧/೧೬ ನೇ ಗ್ರೇನಿಗೆಮೀರಿ ಕೊಡುವುದು ಅಪಾಯಕರವೆಂತ ಹೇಳಿರುವರು. ಫಿರಂಗೋಪದಂಶದಲ್ಲಿ ರೋಗಶಮನಕ್ಕೆ ರಸಕಲ್ಪಗಳು ದಿವ್ಯೌಷಧಿಗಳಾದರೂ ಅದಷ್ಟು ಕಡಿಮೆ ಪ್ರಮಾಣದಲ್ಲಿ ಹೆಚ್ಚು ದಿವಸಗಳವರೆಗೆ ಕೊಡುವುದು ತುಂಬಾ ಹಿತಕರವೆಂದು ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ.

ಪಾಷಾಣಕಲ್ಪ (Arsenic preparation) ಗಳೂ ಹಾಗೂ ಚಪಲ ಕಲ್ಪಗಳೂ (Bismuth preparation) ವೈದ್ಯಶಾಸ್ತ್ರದಲ್ಲಿ ದೊಡ್ಡ ಕ್ರಾಂತಿಯನ್ನೆಬ್ಬಿಸಿದರೂ ರಸಕಲ್ಪಗಳ ಮಹತ್ವವು ಇಂದಿಗೂ ಕಡಿಮೆಯಾಗಿಲ್ಲ. ಯಾವ ಸುಧಾರಣೆ ಹೊಂದಿದ ಕಲ್ಪಗಳನ್ನು ಉಪಯೋಗಿಸಿದರೂ ರಸಕಲ್ಪಗಳನ್ನು ಉಪಯೋಗಿಸದೆ ರಕ್ತದಿಂದ ಉಪದಂಶ ರಾಕ್ಷಸವು ಹೋಗುವುದಿಲ್ಲವೆಂದು ಹೆಚ್ಚಿನ ವಿಜ್ಞರ ಮತ. ಯಾವ ಜರ್ಮನ್ ದೇಶದಲ್ಲಿ Salvarsan, 606 ಜನ್ಮ ಹೊಂದಿದೆಯೋ ಅದೇ ಆ ಜರ್ಮನರ ಪ್ರುಸ್ಸಿಯಾ ಪ್ರಾಂತದಲ್ಲಿ ಫಿರಂಗೋಪದಂಶಕ್ಕೆ ರಸೋಪಚಾರದಲ್ಲಿ ಹೆಸರು ಪಡೆದ Aix La Chapella ಎಂಬೊಂದು ಬಿಸಿನೀರಿನ ಊಟೆಗಳ ಊರಿದೆ. ಈಹೊತ್ತಿನವರೆಗೆ ಸುಧಾರಣೆ ಹೊಂದಿದ ತರತರದ ಉಪಚಾರಗಳಿಂದಲೂ ನಿವೃತ್ತಿ ಹೊಂದದೆ, ಅಸಾಧ್ಯವೆಂದೆನಿಸಿಕೊಂಡ ಫಿರಂಗೋಪದಂಶ ರೋಗಿಗಳು ಜಗತ್ತಿನ ಎಲ್ಲ ಭಾಗಗಳಿಂದ ಇಲ್ಲಿಗೆ ಬಂದು ಇಂದಿಗೂ ರೋಗಮುಕ್ತರಾಗಿ ತೆರಳುತ್ತಿರುವರು. ಅಲ್ಲಿ ಉಪಚಾರ ಕ್ರಮವು ಸಾಮಾನ್ಯವಾಗಿ ಹೀಗಿದೆ :— ಅಲ್ಲಿರುವ ಹೋಟೆಲುಗಳೇ ಉಪಚಾರ ಗೃಹಗಳೆಂದು ಹೇಳಬಹುದು. ಆ ಊಟೆನೀರಿನ ಸ್ನಾನಪಾನದೊಡನೆ ರಸಸ್ನೇಹಕಲ್ಪ (Unguentum Hydrag) ದ ಮರ್ದನವೇ ಮುಖ್ಯ ಉಪಚಾರವಾಗಿರುವುದು. ಈ ಕ್ರಮವನ್ನು ಸುಮಾರು ೬ ವಾರಗಳವರೆಗೆ ನಡೆಸುವರು. ದಿನಕ್ಕೆ ಕ್ರಮವಾಗಿ ೫ gramsನಿಂದ ಆರಂಭಿಸಿ ೧೬ gramsನ ತನಕ ರಸಸ್ನೇಹಕಲ್ಪದ ಮರ್ದನೆಯು ನಡೆಯುವುದು. ಹಾಗೆಯೇ ಮರ್ದನದ ಸರ್ತಿಯನ್ನು ಏರಿಸುವುದು. ಈ ಅವಧಿಯಲ್ಲಿ ಸಾಧಾರಣ ೭೫ ಮರ್ದನಗಳು ನಡೆಯುವವು. ಈ ಮರ್ದನಗಳಿಂದ ಸುಮಾರು ೪೫೦ grams (ಎಂದರೆ ೧ ರಾತಲಿಗೆ ಮೀರಿರುವುದು. ಅದರಲ್ಲಿ ರಸವೂ ವಸ (ಕೊಬ್ಬು)ವೂ ಸಮಾಂಶವಾಗಿರುವುದು) ರಸಸ್ನೇಹಕಲ್ಪವು ಮೈಯಲ್ಲಿ ಜೀರ್ಣವಾಗುವುದು. ಅಷ್ಟು ದೊಡ್ಡ ಪ್ರಮಾಣದಲ್ಲಿ ಉಪಯೋಗಿಸಿದರೂ ರಸೋಪದ್ರವ (Mercurism)*ವು ಉಂಟಾ

---

*ರಸೋಪದ್ರವದ ಲಕ್ಷಣಗಳು :—ಪ್ರಥಮತಃ ಮುಖಪಾಕವಾಗಿ ಲಾಲಾ ಸ್ರಾವವು ಏರಿ ವಸಡುಗಳು ಬಾತುಕೊಂಡು ಅವುಗಳ ಮೇಲೆ ತುಂಬಾ ವ್ರಣಗಳು ಬೀಳುವುವು. ಹಲ್ಲುಗಳೆಡೆಯಲ್ಲಿ ಕೀವಾಗಿ ಅವುಗಳು ಅಲ್ಲಾಡುವುವು. ಅವುಗಳು ಬಿದ್ದುಹೋಗುವ ಸಂಭವವೂ ಇದೆ. ಗಂಟಲು ಮತ್ತು ನಾಲಿಗೆ ಬಾತುಕೊಂಡು ಅನ್ನ ನೀರು ನುಂಗುವದೆ ಕಷ್ಟವಾಗುವುದು. ನಾಲಿಗೆಯಲ್ಲಿ ಅಗ್ರ ತೋರುವುದು. ವಾಂತಿ ಮತ್ತು ಬಿಕ್ಕಿ ಬಿಕ್ಕಿ ಭೇದಿ ಶುರುವಾಗುವುದು. ಮಲದಲ್ಲಿ ರಕ್ತ ಬೀಳುವುದು. ಹೊಟ್ಟೆನೋವು, ಜ್ವರ, ಶ್ವಾಸ, ಕೈಕಾಲುಗಳ ಸೆಳೆದಾಟ ಮತ್ತು ಬಡಿದಾಟ ಶುರುವಾಗಿ ಅವುಗಳಲ್ಲಿಯೇ ಅಂತ್ಯವಾಗುವ ಸಂಭವವಿದೆ.

ಗುವುದಿಲ್ಲ. (ವ್ಯವಹಾರದಲ್ಲಿ ಸಾಮಾನ್ಯವಾಗಿ ಕೆಲವು grams ಗಳ ಒಂದೆರಡು ಮರ್ದನದಿಂದಲೇ ರಸೋಪದ್ರವವು ತೋರುವುದು; ಅದಕ್ಕೆ ಇದು ಅಪವಾದವು) ಆದರಕಾರಣ ಅವರು ಸ್ನಾನಪಾನಕ್ಕೆ ಉಪಯೋಗಿಸುವ ನೀರಿನಲ್ಲಿ ಇರುವ ಗಂಧ ಕವೇ ಸೈಯೆಂದು ಶಾಸ್ತ್ರಜ್ಞರು ನಿರ್ಣಯಿಸಿರುವರು. ಸ್ವಲ್ಪ ಪ್ರಮಾಣದಲ್ಲಿ ನೀರಿ ನಲ್ಲಿ ಇರುವ ಗಂಧಕದಿಂದ ಯಾವಾಗ ರಸೋಪದ್ರವಗಳು ಉಂಟಾಗುವುದಿಲ್ಲವೋ, ಆಗ ನಮ್ಮ ಗಂಧಕಜಾರಿತ ರಸಕಲ್ಪಗಳು ಹೇಗೆ ಅಪಾಯ ಮಾಡಿಯಾವು ?

ಆದರೆ ರಸೌಷಧಿಯ ರಸಕರ್ಪೂರ, ಸೌವೀರಪಾಷಾಣ ಮುಂತಾದ ಕಲ್ಪ ಗಳು ಇತರ ಕಲ್ಪಗಳಿಗಿಂತ ಹೆಚ್ಚಿನ ವಿಷಗುಣವುಳ್ಳದ್ದಾಗಿರುವವು. ಆದುದರಿಂದ ಅವುಗಳ ಔಷಧಿಯ ಪ್ರಮಾಣ ಬಹಳ ಸೂಕ್ಷ್ಮವಾಗಿರುವುದು. ಆದರ ಮಾತ್ರೆ (dose) ಹೆಚ್ಚು ಪ್ರಮಾಣದಲ್ಲಿ ಹೊಟ್ಟೆಗೆ ಹೋದರೆ ಯಾ ರಕ್ತಕ್ಕೆ ಸೇರಿದರೆ ರಸೋಪದ್ರವವು ಉಂಟಾಗುವುದು.

ಪಾಶ್ಚಾತ್ಯ ವೈದ್ಯರು ತಮ್ಮ ಪದ್ಧತಿಯ ಔಷಧಿಗಳಿಂದ ಹೆಚ್ಚಿನ ಗುಣ ಬಾರ ದಿದ್ದರೆ ಮೇಲಿನ ರಸೌಷಧಿಗಳನ್ನು ಉಪಯೋಗಿಸುವರು.

ಗಂಧಕಜಾರಿತ ರಸವು ಎಷ್ಟರಮಟ್ಟಿಗೆ ಅನಪಾಯಕರ ಎಂತ ಹೇಳಿದ್ದಕ್ಕೆ ಮತ್ತೊಂದು ಉದಾಹರಣವೆಂದರೆ ಕ್ಷಯರೋಗಕ್ಕೆ (Tubercular Diseases) ಸಂಬಂಧಪಟ್ಟ ಕಾಹಿಲೆಗಳಲ್ಲಿ ಮತ್ತೆ ಮೂತ್ರಪಿಂಡದ ಕಾಹಿಲೆಗಳಲ್ಲಿ ನಾವು ಉಪ ಯೋಗಿಸುವ ರಸಕಲ್ಪಗಳು ಉದಾಹರಣೆವಾಗಿರುವುವು. ಕೆಲವು ಪಾಶ್ಚಾತ್ಯ ವೈದ್ಯರ ವಿಶೇಷಜ್ಞರು (Specialist) ಮೇಲೆ ಹೇಳಿದ ಎರಡೂ ಕಾಹಿಲೆಗಳಲ್ಲಿ ರಸಕಲ್ಪಗ ಳನ್ನು ಮುಖ ಯಾ ಸೂಚಿಕಾಭರಣ ದ್ವಾರಾ ಕೊಡುವುದು ಹಿತಕರವಲ್ಲವೆಂತ ಹೇಳುವರು. ಆದರೆ ನಮ್ಮ ಪೌರ್ವಾತ್ಯ ವೈದ್ಯರು ಕ್ಷಯರೋಗದಲ್ಲಿ ರಾಜಮೃ ಗಾಂಕ, ಮಕರಧ್ವಜ, ಸುವರ್ಣಮಾಲಿನೀವಸಂತ ಮುಂತಾದ ರಸಗಂಧಕಯುತ ಸುವರ್ಣಕಲ್ಪಗಳನ್ನು ಹಾಗೂ ಕಫೋದರ ಎಂದರೆ ಮೂತ್ರಪಿಂಡ ವಿಕೃತಿಯಿಂದ ಬಂದ ಶೋಥ (Nephritis) ದಲ್ಲಿ ಕೂಡಾ ದುಗ್ಧವಟಿ ಇತ್ಯಾದಿ ರಸಗಂಧಯುತ ಕಲ್ಪವನ್ನು ಉಪಯೋಗಿಸಿ ಗುಣಪಡಿಸುವರು. ಬಂಗಾಲ ಮತ್ತಿನ್ನಿತರ ಕಡೆಯಲ್ಲಿ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಉಭಯ ವೈದ್ಯಕ ಪಾರಂಗತರು ಮೇಲೆ ಕಾಣಿಸಿದ ಎರಡೂ ಕಾಹಿಲೆಗಳಲ್ಲಿ ನಾನು ಹೇಳಿದ ಕಲ್ಪಗಳನ್ನು ಉಪಯೋಗಿಸಿ ಗುಣಕಾರಿ ಯೆಂತ ಸಿದ್ಧಮಾಡಿರುವರು.

ನನ್ನ ಭಾಷಣವು—ನಾನು ಪ್ರಸ್ತಾವನೆಯಲ್ಲಿ ಹೇಳಿದಂತೆ ಕೇವಲ ವ್ಯಾವಸಾಯಿಕ ವೈದ್ಯನಾಗಿರುವುದರಿಂದ ತಮ್ಮಂಥಾ ಪ್ರಶಾಂತ ವಿದ್ವಾಂಸರಿಗೆ ಮುಖೋದ್ಗತ-ಇರುವಂತ ಉದ್ದುದ್ದ ಶ್ಲೋಕಗಳ ಆಧಾರಕೊಡದೆ ನನ್ನ ಮಟ್ಟಿಗೆ ಗೊತ್ತಿದ್ದ ಒಂದೆರಡು ವ್ಯಾವಹಾರಿಕ ಮಾತುಗಳನ್ನು ಮಾತ್ರ ಹೇಳಿರುವೆನು. ಆಸನಾಪನ್ನನಾದ ನಂತರವೇ ನಾನು ಅಧ್ಯಕ್ಷನೆಂದು ಗೊತ್ತಾದುದರಿಂದ ನನ್ನ ಭಾಷಣವನ್ನು ತಮ್ಮೆಲ್ಲರ ಮುಂದೆ ನಿರುಪಾಯವಾಗಿ ವರದಿಯ ಸಂಗಡ ಇಡಬೇಕಾಗಿದೆ. ನಾನು ಕರ್ಣಾಟಕ ಪ್ರಾಂತ್ಯದಲ್ಲಿ ಹುಟ್ಟಿ ವ್ಯವಸಾಯಮಾಡುತ್ತಿದ್ದರೂ ಕೂಡ ನನ್ನ ಮಾತೃಭಾಷೆ ಮತ್ತು ನನ್ನ ಶಿಕ್ಷಣ ಸಹ ಮಹಾರಾಷ್ಟ್ರ ಭಾಷೆಯಲ್ಲಿ ಆಗಿರುವುದರಿಂದ ಕನ್ನಡಭಾಷಾ ಜ್ಞಾನವು ಅತ್ಯಲ್ಪವಾಗಿರುವ ಕಾರಣ ಈ ಭಾಷಣದಲ್ಲಿದ್ದ ಭಾಷಾದಿ ದೋಷಗಳನ್ನು ಮನಸ್ಸಿಗೆ ತೆಗೆದುಕೊಳ್ಳದೆ ಅದರಲ್ಲೇನಾದರೂ ಉಪಯೋಗದ ಅಂಶವಿದ್ದರೆ ಹಂಸಕ್ಷೀರನ್ಯಾಯದಿಂದ ಅದನ್ನು ಮಾತ್ರ ತೆಗೆದುಕೊಳ್ಳಬೇಕೆಂದು ವಿನಂತಿಸುತ್ತೇನೆ. ಇತಿಶಂ||

ಮೈಸೂರು
29-12-1941

B. R. Haridas

ಮೈಸೂರಲ್ಲಿ ನಡೆದ 12ನೇ ನಿಖಿಲ ಕರ್ನಾಟಕ ಮತ್ತು 1ನೇ ಮೈಸೂರು ಆಯುರ್ವೇದ ಸಮ್ಮೇಳನಗಳಲ್ಲಿ ನಡೆದ

# ರಸಾಯನ ಸಂಭಾಷಾ ಪರಿಷತ್ತಿನಲ್ಲಿ ನಡೆದ ಭಾಷಣ.

(ಆಯುರ್ವೇದ ವಿದ್ವಾನ್, ಎಚ್. ಟಿ. ರಾಮಚಂದ್ರಾಚಾರ್ಯ, ಹೆಜಮಾಡಿ ಇವರಿಂದ)

ಶೀತಾಯೋರ್ಮಂಡಲಸ್ಥ ಸ್ತ್ರಿಭುವನಮಪಿ ಸಂಜೀವಯನ್ನಾತ್ಮಶಕ್ತ್ಯಾ
ದೇವಸ್ಸಂಸ್ತೂಯಮಾನಸ್ಸತತಮನಿಮಿಷೈರ್ಭಕ್ತಿ ಭಾರಾವನಮ್ರೈಃ
ಜ್ಞಾನಂಪೀಯೂಷಕುಂಭಂ ಚ ರುಚಿರಕರಯೋಸ್ಸಂದಧಾನಃ ಪರೇಣಃ
ಭದ್ರಂಧನ್ವಂತರಿರ್ನಃ ಪ್ರದಿಶತುಸತತಂ ವೈದ್ಯರಾಜಃ ಪ್ರಸನ್ನಃ

ಈಗಿನ ವಾತಾವರಣದಲ್ಲಿ ಕಾಲವಿಳಂಬವನ್ನು ಸಹಿಸುವದು ಹೆಚ್ಚುಮಂದಿಗೆ ಇಷ್ಟವಿಲ್ಲ. ಎಲ್ಲವೂ ಆದಷ್ಟು ಬೇಗನೆ ಕೈಗೂಡಬೇಕೆಂಬುದೇ ಅಪೇಕ್ಷೆ. ಅದರಲ್ಲಿಯೂ ದೇಹಕ್ಕೆ ದಣಿವಿಲ್ಲದೆ ಕಾರ್ಯಸಿದ್ಧಿಯಾದರೆ ಇನ್ನಷ್ಟು ಒಳ್ಳೇದು. ಹೀಗಿರುವಾಗ ಆಯುರ್ವೇದೀಯ ಔಷಧಗಳನ್ನು ತಯಾರಿಸಿಕೊಳ್ಳುವುದೊಂದು ಕಷ್ಟ. ಅವುಗಳನ್ನು ಹೆಚ್ಚಿನ ಪರಿಮಾಣದಿಂದ ಸೇವಿಸುವ ಕಷ್ಟ ಬೇರೆ. ಪಥ್ಯ ಕ್ರಮವನ್ನನುಸರಿಸುವ ಪೀಡೆ ಬೇರೆ. ಮನಸ್ಸಿಗೆ ಒಪ್ಪದಿರುವ ಅನಿರ್ವಚನೀಯವಾದ ಆ ರುಚಿಯನ್ನು ಅನುಭವಿಸುವ ಕ್ಲೇಶವೊಂದು ಬೇರೆ. ಹೀಗೆ ಹಲವು ಕಷ್ಟಪರಂಪರೆಗಳನ್ನು ಅನುಭವಿಸುವುದಕ್ಕಿಂತ ವಿದೇಶೀಯ ವೈದ್ಯರ ಬಳಿಗೆ ಹೋದರೆ ಸರಿ. ಅವರು ನಿಮಿಷಮಾತ್ರದಲ್ಲಿ ಗುಣಪಡಿಸುವರು. ಹಣವೆಷ್ಟು ಖರ್ಚಾದರೂ ವ್ಯಸನವಿಲ್ಲ. ದೇಹಕ್ಕೆ ದಣಿವಿಲ್ಲ. ಪಥ್ಯದ ನಿರ್ಬಂಧವಿಲ್ಲ. ಇಂತಹ ಭಾವನೆಯು ಹಲವರ ಮನಸ್ಸಿಗೆ ಅಂಟಿಕೊಂಡಿದೆ. ಏನು ಮಾಡಬಹುದು? ಇದು ನಮ್ಮ ಆಯುರ್ವೇದದ ದೌರ್ಭಾಗ್ಯ ಅಥವಾ ಭಾರತೀಯರ ದೌರ್ಭಾಗ್ಯವೆಂದರೂ ಸರಿಯೆ. ಇಲ್ಲವಾದರೆ ನೈಜವಾದ ಉತ್ಸಾಹವುಳ್ಳವನಿಗೆ ಆಲಸ್ಯದೇಹಶ್ರಮವೆಂಬಿವುಗಳ ಅರಿವು ಇದ್ದೀತೆ? ಅಕೃತ್ರಿಮವಾದ ಅಭಿಮಾನವುಳ್ಳವನು ಸ್ವಕೀಯವಾದುದನ್ನುಪೇಕ್ಷಿಸುವನೇ? ಎಂದೂ ಇಲ್ಲ. ಆಯುರ್ವೇದದ ಸಂಪೂರ್ಣ ಮರ್ಮವನ್ನು ತಿಳಿಯದ, ಹಾಗೂ ವಿದೇಶಿಯ ಔಷಧಗಳಿಂದಾಗುವ ಸಾಧಕ-ಬಾಧಕ, ಅನುಕೂಲ-ಪ್ರತಿಕೂಲ ಮತ್ತು ಆಯ-ವ್ಯಯಗಳನ್ನು ಚೆನ್ನಾಗಿ ವಿಮರ್ಶಿಸದಿರುವ, ಸ್ವಾಭಿಮಾನವಿಲ್ಲದ ಸಾಮಾನ್ಯ ಜನರೇನೋ ಮೇಲೆ ಹೇಳಿದಂತೆ ತಿಳಿದುಕೊಳ್ಳಬಹುದು. ಪರಂತು ವಿವೇಕಿಯಾದವನಲ್ಲಿ ಅಂತಹ ಭ್ರಾಂತಿಯೆಂದೂ

ಉದಿಸಲಾರದು. ನಮ್ಮದಾದ ಆಯುರ್ವೇದದಲ್ಲಿ ಏನು ತಾನೆ ಇದ್ದಿಲ್ಲ? ಒಂದು ಕಾಲದಲ್ಲಿ ವಿದೇಶೀಯರ ಹಾವಳಿಗೆ ಆಸ್ಪದವಾಗಿ ಕೆಲವು ಭಾಗಗಳನ್ನು ಕಳೆದುಕೊಂಡಿದ್ದರೂ ರತ್ನಾಕರದಂತಿರುವ ಆಯುರ್ವೇದದಲ್ಲಿ ಹಲವು ಪ್ರಮೇಯಗಳು ಈಗಲೂ ಉಜ್ವಲಿಸುತ್ತಿವೆ. ಅವುಗಳ ಪ್ರಭಾವವನ್ನೂ ಮಹತ್ವವನ್ನೂ ತಿಳಿಯದೆ, ಕೇವಲ ಔದಾಸೀನ್ಯತೆಯಿಂದಲುಪೇಕ್ಷಿಸುತ್ತಿರುವುದೆಂಬುದು ನಮ್ಮ ದೋಷವಾಗಿರಬೇಕಲ್ಲದೆ ಆಯುರ್ವೇದವನ್ನು ದೂರಿ ಪ್ರಯೋಜನವಿಲ್ಲ ಇರಲಿ;

ಪ್ರಕೃತ—ನವನಾಗರಿಕತೆಯಿಂದ ಮೆರೆಯುತ್ತಿರುವ ಈ ದೇಶಕಾಲಗಳಿಗೆ, ಅನುಕೂಲವಾದ ಔಷಧಿಗಳು ನಮ್ಮಲ್ಲಿ ಇಲ್ಲವೆಂದಿಲ್ಲ. ಹೆಚ್ಚಿನ ಪರಿಮಾಣದಿಂದ ಸೇವಿಸಬೇಕಾಗಿಯೂ ಇಲ್ಲ. ಬಾಯಿಯ ರುಚಿಯನ್ನು ಕೆಡಿಸುವಂತೆಯೂ ಇಲ್ಲ. ಬೇಗನೆ ಆರೋಗ್ಯವನ್ನು ಒದಗಿಸಿಕೊಡುವುದಿಲ್ಲವೆಂತಲೂ ಇಲ್ಲ. ಅಂತಹ ಅಮೂಲ್ಯ ಔಷಧವೇ "ರಸೌಷಧ" ಎಂಬುದು. ಆದುದರಿಂದಲೇ—"ಅಲ್ಪಮಾತ್ರೋಪಯೋಗಿತ್ವಾದರುಚೇರಪ್ರಸಂಗತಃ। ಕ್ಷಿಪ್ರಮಾರೋಗ್ಯದಾಯಿತ್ವಾದೌಷಧೇಭ್ಯೋಽಧಿಕೋ ರಸಃ" ಎಂಬುದಾಗಿ ಉಳಿದವುಗಳಿಗಿಂತ ಅದು ಶ್ರೇಷ್ಠವೆನಿಸಿಕೊಂಡಿದೆ. ಆದರೆ ಅದನ್ನು ಸಿದ್ಧಪಡಿಸಿಕೊಳ್ಳಬೇಕಾದರೆ ಬಹುಕಷ್ಟವಿದೆ. ಅದರಲ್ಲಿ ಸಿದ್ಧಿಯನ್ನು ಪಡೆದವರ ಹೆಸರುಗಳನ್ನು ಮಾತ್ರವೇ ಕೇಳುತ್ತೇವೆ. ಶ್ರೀಶಂಕರ ಮೊದಲುಗೊಂಡು, ಅಗಸ್ತ್ಯ, ಭಾಲುಕಿ, ವ್ಯಾಡಿ, ರಾವಣ, ಮೈಥಿಲಿ, ಗೋರಕ್ಷನಾಥ, ಸಿದ್ಧನಾಥ, ಆದಿನಾಥ, ಸೋಮನಾಥ ಮೊದಲಾದ ಇನ್ನೂ ಹಲವು ಪುಣ್ಯಶ್ಲೋಕರು ಚಿರಸ್ಮರಣೀಯರಾಗಿದ್ದಾರೆ. ಪರಂತು ಅವರಿಂದ ರಚಿಸಲ್ಪಟ್ಟ ಗ್ರಂಥಗಳು ಯಾರ ಕಣ್ಣಿಗೂ ಗೋಚರವಾದ ಹಾಗೆ ತಿಳಿದು ಬರುವುದಿಲ್ಲ. ಅಥವಾ ಇದ್ದರೂ ಅವು ಬೆರಳಿಂದ ಎಣಿಸಬಹುದಾದಷ್ಟು ಅಲ್ಪವಾಗಿವೆ. ಈಗ ಪ್ರಚಾರದಲ್ಲಿರುವ ಗ್ರಂಥಗಳು ಇತರ ಮಹಾನುಭಾವರಿಂದ ಸಂಗ್ರಹಿಸಲ್ಪಟ್ಟವುಗಳಾಗಿವೆಯಲ್ಲದೆ ಅವೇ ಮೂಲ ಗ್ರಂಥಗಳಲ್ಲ. ಹಾಗಿದ್ದರೂ ಅವುಗಳಲ್ಲಿರುವ ಪ್ರಯೋಗಗಳಿಂದ ಆಶಾತೀತವಾದ ಪ್ರಯೋಜನವನ್ನು ಹೊಂದಬಹುದಾಗಿದೆ. ಹೀಗಿದ್ದಮೇಲೆ ಮೂಲ ಗ್ರಂಥಗಳೇ ದೊರೆತು ಅವುಗಳಿಂದ ಪ್ರತಿಪಾದಿಸಲ್ಪಡುವ ರಸಾದಿಗಳ ಸಿದ್ಧಿ ಆಗಿದ್ದರೆ ಅದೊಂದು ಕಲ್ಪವೃಕ್ಷವಾಗಿ ಪರಿಣಮಿಸಬಹುದಿತ್ತು. ಆದುದರಿಂದಲೇ ಪ್ರಾಚೀನರು—"ಉತ್ತಮೋರಸವೈದ್ಯಸ್ತು—" ಎಂಬುದಾಗಿ ರಸ ಚಿಕಿತ್ಸಕನನ್ನು ಪ್ರಶಂಶಿಸಿರುವರು.

ಈವಾಗ ರಸಶಾಸ್ತ್ರವೆಂದರೇನು? ರಸಾದಿಗಳನ್ನು ಕಾರ್ಯಕಾರಿಯಾಗುವಂತೆ ಮಾಡುವ ಬಗೆ ಹೇಗೆ? ಚರಕಾದಿ ಪ್ರಸಿದ್ಧಗ್ರಂಥಗಳಲ್ಲಿ ಅವುಗಳಲ್ಲಿ ಪ್ರಯೋ

ಗವನ್ನುಲ್ಲೇಖಿಸಿದೆಯೇ ? ಅವುಗಳಿಂದ ದೇಹಕ್ಕೆ ಬಾಧಕವೇನಾದರೂ ಇರಬಹುದೇ ? ದೇಶಕಾಲಾನುಗುಣವಾಗಿ ಏನಾದರೂ ಸುಧಾರಣೆ ಮಾಡಬೇಕಾದ ಅವಶ್ಯಕತೆಯಿದೆಯೇ ? ಕೊನೆಯದಾಗಿ ರಸಶಾಸ್ತ್ರವನ್ನು ಯಾವ ರೀತಿಯಿಂದ ಉದ್ಧರಿಸಬಹುದು ? ಎಂದು ಮೊದಲಾಗಿ ಯಥಾಮತಿ ವಿವೇಚಿಸಿ ಸಂಕ್ಷೆಪತಃ ನಿರೂಪಿಸುವೆನು.

ಅಭ್ರಕಾದಿ ರಸಗಳನ್ನು ಅಥವಾ ಧಾತುಗಳನ್ನು ತಾನು ಆಸ್ವಾದಿಸುವದರಿಂದ ಅಂದರೆ ತಿಂದುಬಿಡುವದರಿಂದ "ರಸ" ಎಂಬ ಶಬ್ದವು ನಿಷ್ಪನ್ನವಾಗಿದೆ. "ರಸ್ಯತೇ ಇತಿರಸಃ" ಎಂಬ ವ್ಯುತ್ಪತ್ತಿಯನ್ನನುಸರಿಸಿ "ಜರಾ-ರೋಗ-ಮರಣಗಳಿಂದ ದೇಹವನ್ನು ವಿರಹಿತಪಡಿಸುವ ಸಲುವಾಗಿ ಇದು ಆಸ್ವಾದಿಸಲ್ಪಡುತ್ತದೆ" ಎಂಬ ಅರ್ಥವೂ ಕೂಡ ತೋರಿಬರುತ್ತದೆ. ಆದರೆ ಆ ರಸ ಎಂಬ ಶಬ್ದವು ಪಾರದಲ್ಲಿ ರೂಢವಾಗಿದೆ. ದೇಹಕ್ಕೆ ರಸಾಯನವಾಗಿ ಪರಿಣಮಿಸುತ್ತದೆ ಎಂಬ ಕಾರಣದಿಂದ ಈ ಶಬ್ದವು— ಅಭ್ರವೈಕ್ರಾಂತಾದಿಗಳನ್ನೂ ಸಹ ಪ್ರತಿಪಾದಿಸುತ್ತದೆ. ರಸವನ್ನು ಅನೇಕ ಸಂಸ್ಕಾರಗಳಿಂದ ಶುದ್ಧಿಗೊಳಿಸಿ ಅದನ್ನು ರಸಾಯನರೂಪವಾಗಿ ಪ್ರಯೋಗಿಸಿ ಕಾಯಸಿದ್ಧಿಯನ್ನು (ಜರಾ-ರೋಗ-ಮರಣಗಳ ರಾಹಿತ್ಯವನ್ನು) ಪಡೆಯಬಹುದು. ಹಾಗೆಯೇ ಹೀನಲೋಹಗಳಮೇಲೆ ಪ್ರಯೋಗಿಸಿ ಉತ್ತಮವಾದ ಸುವರ್ಣಾದಿಲೋಹವನ್ನು ಸಿದ್ಧಪಡಿಸಬಹುದು. ಈ ಎರಡು ಮಾದರಿಯ ರಹಸ್ಯವನ್ನು ಬಲ್ಲವರಿಗೆ ರಸಸಿದ್ಧರು ಎಂಬ ಶಬ್ದವು ಸಲ್ಲುವುದು. ಈ ಎರಡು ವಿಧದ ಪರಿಣಾಮಕ್ಕೆ ಮೂಲವಾದ ರಸದ ಸಿದ್ಧಿಗೆ ಇತರ ಅಭ್ರಕಾದಿರಸ ದ್ರವ್ಯಗಳೂ, ಗಂಧಕಾದಿಉಪರಸಗಳೂ, ಚಪಲಗೌರೀ ಪಾಷಾಣಾದಿ ಸಾಧಾರಣ ರಸಗಳೂ, ಲೋಹಾದಿ ಧಾತುಗಳೂ, ವಿಷೋಪವಿಷಗಳೂ ಕ್ಷಾರಮೊದಲಾದುವುಗಳೂ ಅವಶ್ಯ ಬೀಳುವ ಕಾರಣ ಇವೆಲ್ಲವುಗಳ ವಿವರಣೆಯೊಂದಿಗೆ ಯಾವದೊಂದು ಅಮೂಲ್ಯವಾದ ತಂತ್ರವು ಹೊರಟಿದೆಯೋ ಅದೇ ರಸತಂತ್ರ ಅಥವಾ ರಸಾಯನಶಾಸ್ತ್ರ ಎಂಬ ಹೆಸರದಿಂದ ಪ್ರಸಿದ್ಧವಾಗಿದೆ.

ಯದ್ಯಪಿ—ಆಯುರ್ವೇದ ಶಾಸ್ತ್ರಗಳಲ್ಲಿ ಏಕದೇಶವಾಗಿದ್ದು ಎಂತಹ ಗಂಡಾಂತರಗಳಲ್ಲಿಯೂ ಅಚ್ಚಳಿಯದೆ ಉಳಿದಿರುವ ದ್ರವ್ಯಗುಣ ಶಾಸ್ತ್ರದಮಧ್ಯೇ ಖನಿಜ ವರ್ಗದಲ್ಲಿ ಇದು ನಾಮ ಮಾತ್ರನಿರ್ದಿಷ್ಟವಾಗಿದೆಯೆಂಬುದೇ ನಿಜವೇ ? ಆದರೆ ಅದರಲ್ಲಿ ಗುಣಪಾಠವು ಮಾತ್ರವೇ ಮುಖ್ಯತ್ವೇನ ವರ್ಣಿಸಲ್ಪಟ್ಟಿರುವುದಲ್ಲದೆ ಶುದ್ಧಿ ಮಾರಣ ಮೊದಲಾದ ವಿಶೇಷಕ್ರಮಗಳ ಪ್ರಸ್ತಾಪವೇ ಅದರಲ್ಲಿಲ್ಲ. ಹೀಗಾಗಿ ಅವೆಲ್ಲಾ ಮಾರ್ಗಗಳನ್ನು ಕುರುಪಾಂಡವ ನ್ಯಾಯದಂತೆ ಪ್ರತ್ಯೇಕವಾಗಿ ವರ್ಣಿಸಲ್ಪಟ್ಟಿರುವ

ರಸತಂತ್ರದಿಂದಲೇ ತಿಳಿದುಕೊಳ್ಳಬೇಕಲ್ಲದೆ ಅನ್ಯಥಾ ಉಪಾಯವಿಲ್ಲ. ಈ ರಸತಂತ್ರದಲ್ಲಿ ಪಾರದವೇ ಸರ್ವಾತ್ಮನಾ ಪ್ರತಿಪಾದಿಸಲ್ಪಡುತ್ತದೆ ಎಂಬುದೇನೂ ಹೊಸತಾದ ಮಾತಲ್ಲ. ರಸ ಉಪರಸಗಳಿಗೆ ಅರಸನಂತಿರುವ ಕಾರಣ ಇದು—" ರಸೇಂದ್ರ ಅಥವಾ ರಸರಾಜ " ಎಂದೂ, ದೇಹ ಮತ್ತು ಲೋಹಗಳ ವಿಷಯದಲ್ಲಿ ಸಿದ್ಧಿಯನ್ನು (ಉದ್ದಿಷ್ಟಾರ್ಥಸಿದ್ಧಿಯನ್ನು) ಹುಟ್ಟಿಸುವುದರಿಂದ " ಸೂತ " ಎಂದೂ, ರೋಗವೆಂಬ ಕೆಸರಿನಿಂದ ತುಂಬಿದ ಸಮುದ್ರದಲ್ಲಿ ಮುಳುಗುತ್ತಿರುವವರನ್ನು ದಡವನ್ನು ಹೊಂದಿಸಿ ಕೊಡುವ ಕಾರಣ " ಪಾರದ " ಎಂದೂ, ಸಮಸ್ತ ಧಾತುಗಳಲ್ಲಿರುವ ತೇಜಸ್ಸೂ ಸಹ ಅದರಲ್ಲಿಯೇ ಬೆರಿಸಿಕೊಂಡಿರುವ ಕಾರಣ " ಮಿಶ್ರಕ " ಎಂದೂ ವ್ಯವಹರಿಸಲ್ಪಡುತ್ತದೆ. ಈ ರೀತಿಯ ಅನ್ವರ್ಥನಾಮಗಳಿಂದ ಅದರ ಮಹತ್ವವು ತನಗೆ ತಾನೇ ಉಕ್ತವಾಗುತ್ತದೆ.

ಗಣಿಯಿಂದ ದೊರೆಯುವಾಗ ಪಾದರಸದಲ್ಲಿ ವಂಗಾದಿ ನೈಸರ್ಗಿಕ ದೋಷಗಳೂ ಇದ್ದೇ ಇವೆ. ದೋಷಯುಕ್ತವಾದ ರಸವು ಕಾಲಕೂಟ ವಿಷವಾಗಿಯೂ, ದೋಷರಹಿತವಾದ ರಸವು ಅಮೃತವಾಗಿಯೂ ಪರಿಣಮಿಸಲ್ಪಡುವುದರಿಂದ ಅದನ್ನು ಶುದ್ಧಿಮಾಡದೆ ಉಪಯೋಗಿಸಲೇ ಬಾರದು. ಶಾಸ್ತ್ರದಲ್ಲಿ ಹಲವು ಬಗೆಯ ಶೋಧನ ಕ್ರಮಗಳು ಹೇಳಲ್ಪಟ್ಟಿವೆ. ಆ ಮಧ್ಯೆ ಸುಲಭವಾಗಿಯೂ ಅನುಭೂತವಾಗಿಯೂ ನಿರೂಪಿಸಲ್ಪಟ್ಟಿರುವ ಒಂದು ಕ್ರಮವನ್ನೀಗ ಹೇಳುವೆನು. ರಸದೊಂದಿಗೆ ಅಷ್ಟೇ ಪರಿಮಾಣ ಸುಣ್ಣದ ಪುಡಿಯನ್ನು ಸೇರಿಸಿ ೩ ದಿನಗಳ ವರೆಗೆ ಮರ್ದಿಸಬೇಕು. ನಂತರ ಎರಡು ಪದರವಾಗಿ ಮಡಿಸಿರುವ ಬಟ್ಟೆಯಿಂದ ಆ ರಸವನ್ನು ಗಾಳಿಸಿ ಖಲ್ವದ ಮಧ್ಯೇ ಇರಿಸಬೇಕು. ರಸದ ಪರಿಮಾಣದಷ್ಟೇ ಸಿಪ್ಪೆ ತೆಗೆದ ಬೆಳ್ಳುಳ್ಳಿಯನ್ನೂ, ಬೆಳ್ಳುಳ್ಳಿಯ ½ ಅಂಶ ಸೈಂಧವಲವಣವನ್ನೂ ಸೇರಿಸಿ ಮೂರನ್ನೂ ಚೆನ್ನಾಗಿ ಮರ್ದಿಸಬೇಕು. ಆಗ ಆ ಕಲ್ಕವು ಕರ್‍ರಗಾಗುವುದು. ನಂತರ ಬಹು ಜಾಗ್ರತೆಯಿಂದ ತೊಳೆದು ಆ ರಸವನ್ನು ಸಂಗ್ರಹಿಸಿಕೊಳ್ಳಬೇಕು. ಹೀಗೆ ಒಂದೇ ಸಲ ಮಾಡಿದ್ದರಿಂದ ರಸ ಶುದ್ಧಿಯಾಗುವುದೆಂಬುದಾಗಿ ರಸತರಂಗಿಣೀಕಾರನು ವಿಶದಪಡಿಸಿರುವನು. ರಸ ಶುದ್ಧಿಯಾದ ನಂತರ ಅದಕ್ಕೆ ಸಂಸ್ಕಾರಮಾಡಬೇಕು. ಹದಿನೆಂಟು ಬಗೆಯ ಸಂಸ್ಕಾರಗಳು ಹೇಳಲ್ಪಟ್ಟಿದ್ದರೂ ಎಂಟೇ ಬಗೆಯ ಸಂಸ್ಕಾರಗಳು ಸಾಕಾಗುವವುವೆಂದು ಶಾಸ್ತ್ರದಲ್ಲಿ ತೋರಿಬರುತ್ತದೆ. ಲೇಖನವಿಸ್ತಾರ ಭಯದಿಂದ ಅವುಗಳನ್ನೆಲ್ಲಾ ವಿವರಿಸಲು ಮುಂದರಿಯುವುದಿಲ್ಲ. ಹಿಂಗಲದಿಂದಲೂ ಊರ್ಧ್ವಪಾತನ ಯಂತ್ರದ ಮೂಲಕ ಸಂಗ್ರಹಿಸಲ್ಪಟ್ಟ ರಸವು ಶುದ್ಧವಾಗಿ

ದುವ ಕಾರಣ ಅದಕ್ಕೆ ಅಷ್ಟು ಸಂಸ್ಕಾರಗಳನ್ನು ಮಾಡಬೇಕಾದ ಅವಶ್ಯವಿಲ್ಲವೆಂದು ರಸೇಂದ್ರ ಸಾರಸಂಗ್ರಹದಲ್ಲಿ ಕಂಡುಬರುತ್ತದೆ. ರಸವನ್ನು ಭಸ್ಮೀಕರಿಸುವವಿಧಾನಗಳೂ ಬಹು ಪ್ರಕಾರವಾಗಿವೆ. ಅವೆಲ್ಲವೂ ರಸತರಂಗಿಣಿಯಲ್ಲಿ ವಿಶದವಾಗಿ ನಿರೂಪಿಸಲ್ಪಟ್ಟವೆ. ಅದರಲ್ಲಿಯೇ ವರ್ಣಿಸಲ್ಪಟ್ಟ ಒಂದು ಕ್ರಮವನ್ನೀಗ ಹೇಳುವೆನು. ಹಿಂಗುಲಾಕೃಷ್ಟ ರಸ ೧ ಪಲಕ್ಕೆ ಅಷ್ಟೇ ಶುದ್ಧ ಗಂಧಕವನ್ನು ಸೇರಿಸಿ ಕಜ್ಜಲಿ ಮಾಡಿ ವಟಕ್ಷೀರದಿಂದ ಚೆನ್ನಾಗಿ ಮರ್ದಿಸಿ ಬಳಿಕ ಮಣ್ಣಿನ ಪಾತ್ರೆಯಲ್ಲಿರಿಸಿ ಮೃದುವಾದ ಅಗ್ನಿಯಿಂದ ಎಡೆಬಿಡದೆ ಒಂದು ದಿನ ಸಂಪೂರ್ಣ ಪಾಕಮಾಡಬೇಕು. ಪಾಕ ಮಾಡುವಾಗ ವಟವೃಕ್ಷದ ಹಸಿಯಾದ ಶಾಖೆ (ರೆಂಬೆ)ಯಿಂದ ಕೆದರುತ್ತಾ ಇರಬೇಕು. ಈ ವಿಧಾನದಿಂದ ರಸವು ನಿಜವಾಗಿಯೂ ಮೃತವಾಗುವುದು.

“ ನಿರ್ಧೂಮಸ್ತ್ವೇ ಜಸಾಹೀನೋ ಗೌರವೇಣ ಸಮನ್ವಿತಃ |
ಅಂಗಾರಸ್ಥಾಪಿತೋಯಶ್ಚ ನ ಪ್ರಯಾತಿ ವಿರೂಪತಾಂ |
ನಚಲಾಘವಮಾಯಾತಿ ಚಾಪಲ್ಯಂ ವಿಜಹಾತಿಚ |
ಆಧಿ ವ್ಯಾಧಿ ಹರೋಯಶ್ಚ ಮೃತಃ ಸೂತಃ ಸಉಚ್ಯತೇ ” ||

(ರ. ಕ. ಪುಟ ೬೨)

ಎಂಬ ಪ್ರಮಾಣಾನುಸಾರವಾಗಿ ಕೆಂಡದ ಮೇಲೆ ಇರಿಸಿದರೆ ಅದರಿಂದ ಹೊಗೆ ಹೊರಡದೆ ಇದ್ದು ಭಾರದಲ್ಲಿ ಕಡಿಮೆಯಾಗದೆ, ವಿಕಾರಹೊಂದದೆ, ಚಾಪಲ್ಯವಿಲ್ಲದೆ ಇದ್ದರೆ ರಸವು ಮೃತವಾಯಿತೆಂದು ತಿಳಿಯಬೇಕು. ರಸಮಾರಣವು ಬಾಯಿಯಲ್ಲಿ ಹೇಳುವಷ್ಟು ಸುಲಭ ಕೆಲಸವಲ್ಲ. ಬಹು ಕಷ್ಟಸಾಧ್ಯವಾದ ಕೆಲಸ. ಅಂತು ಪ್ರಯತ್ನಪೂರ್ವಕವಾಗಿ ರಸಭಸ್ಮವೊಂದನ್ನು ಮಾಡಿಕೊಂಡರೆ ಆತನಿಗೆ ಸಮಸ್ತವೂ ಸಿದ್ಧಿಯಾದ ಹಾಗೆಯೇ ಸರಿ.

ಇದು ಮುಖ್ಯವಾದ ಪಾದರಸದ ವಿಚಾರವಾಯಿತು. ಆದರೆ “ ರಸ ” ಎಂಬ ಶಬ್ದದಿಂದ ನಿರ್ದೇಶಿಸಲ್ಪಟ್ಟಿರುವ ಅಭ್ರಕಾದಿ ಮಹಾರಸಗಳೂ, ಗಂಧಕಾದಿ ಉಪರಸಗಳೂ, ಚಪಲ ಮತ್ತು ಗೌರೀ ಪಾಷಾಣಾದಿ ಸಾಧಾರಣ ರಸಗಳೂ ಬೇರೆಯೇ ಇರುವುವು ಎಂಬುದನ್ನು ಈ ಮೊದಲೇ ಸೂಚಿಸಲಾಗಿದೆಯಷ್ಟೆ; ಇವುಗಳ ಶೋಧನ ಮತ್ತು ಮಾರಣಾದಿಗಳು ಶಾಸ್ತ್ರಗಳಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟವೆ. ಇವುಗಳ ಭಸ್ಮಗಳು ಎಂತೆಂತಹ ಘನರೋಗಗಳನ್ನೂ ನಿವೃತ್ತಿಪಡಿಸಬಲ್ಲುವು. ಅವುಗಳ ಪೈಕಿ ಕೆಲವು ಭಸ್ಮಗಳು ರಸಸಿದ್ಧಿಗೆ ಸಹಕಾರಿಗಳೂ ಆಗುವುವು. ಇನ್ನು—ರಸ-ಶಾಸ್ತ್ರದಲ್ಲಿ

ಅಂತರ್ಗತಗಳಾದ ಲೋಹಾದಿಗಳ ವಿಚಾರ. ರಸಸಿದ್ಧಿಯೊಂದು ಆಗಿದ್ದರೆ ಅದರ ಬಲದಿಂದ ಎಂತಹ ಹೀನ ಲೋಹವನ್ನಾದರೂ ಸುವರ್ಣಾದಿ ಉತ್ತಮ ಲೋಹ ವನ್ನಾಗಿ ಮಾಡಬಹುದೆಂದು ಈ ಮೊದಲೇ ಹೇಳಿತ್ತಷ್ಟೆ; ಲೋಹಾದಿಗಳನ್ನು ಪುಟ ಪಾಕ ವಿಧಿಯಿಂದ ಭಸ್ಮೀಕರಿಸಿದ್ದಾದರೆ ಅಂತಹ ಭಸ್ಮಗಳು ರೋಗನಿವೃತ್ತಿ ಕಾರ್ಯ ದಲ್ಲಿ ರಸಭಸ್ಮಕ್ಕಿಂತಲೂ ಮಿಗಿಲಾಗುವುವು. ಈ ಅಭಿಪ್ರಾಯವು ರಸತರಂಗಿಣಿಯ ಲ್ಲಿಯೂ ರಸರತ್ನಸಮುಚ್ಚಯದಲ್ಲಿಯೂ ಸ್ಪಷ್ಟೀಕರಿಸಲ್ಪಟ್ಟಿದೆ. ಲೋಹಾದಿಗಳನ್ನು ಭಸ್ಮೀಕರಿಸುವ ವಿಧಾನಗಳು ತುಂಬಾ ಹೇಳಲ್ಪಟ್ಟಿರುವುವು. ಆದರೆ—'' ಲೋಹಾ ನಾಂಮಾರಣಂ ಶ್ರೇಷ್ಠಂ ಸರ್ವೇಷಾಂ ರಸಭಸ್ಮನಾ । ಮೂಲೀಭಿರ್ಮಧ್ಯಮಂ ಪ್ರಾಹುಃ ಕನಿಷ್ಠಂ ಗಂಧಕಾದಿಭಿಃ । ಅರಿಲೋಹೇನ ಲೋಹಸ್ಯ ಮಾರಣಂ ದುರ್ಗು ಣಪ್ರದಂ " ಎಂಬಂತೆ ರಸಭಸ್ಮದ ಸಹಕಾರದಿಂದ ಲೋಹಾದಿಗಳನ್ನು ಭಸ್ಮೀಕರಿಸು ವುದೇ ಅತ್ಯುತ್ತಮ. ಉಳಿದವುಗಳಿಂದ ಭಸ್ಮಮಾಡಿದ್ದಾದರೆ ಆ ಮೃತಲೋಹದ ಗುಣಗಳಲ್ಲಿ ಒಂದಲ್ಲ ಒಂದು ನ್ಯೂನತೆ ಇದ್ದೇ ಇದೆ. ಮೃತರಸಾದಿಗಳನ್ನು ಸಾಕ್ಷಾ ತ್ತಾಗಿಯೇ ಉಪಯೋಗಿಸುವುದಕ್ಕಿಂತಲೂ ಹಲವು ಔಷಧಿಗಳಿಂದ ಕೂಡಿದ ಯೋಗ ರೂಪವಾಗಿ (ಮಾತ್ರೆ ಮೊದಲಾದ ರೂಪದಿಂದ) ಉಪಯೋಗಿಸಿದ್ದಾದರೆ ಹೆಚ್ಚಿನ ಫಲಕಾರಿಯಾಗುವುದು. ರಸ ಮತ್ತು ಗಂಧಕ ಇವೆರಡೂ ಸೇರಬೇಕಾಗಿದ್ದ ಯೋಗ ಗಳಲ್ಲಿ ಕಜ್ಜಲಿಯನ್ನೇ ಉಪಯೋಗಿಸಬೇಕು. ಕೇವಲ ರಸವೇ ಸೇರಬೇಕಾಗಿದ್ದ ಯೋಗಗಳಲ್ಲಿ ರಸದ ಬದಲಿಗೆ ರಸಸಿಂಧೂರವನ್ನುಪಯೋಗಿಸಬೇಕು. ಈ ವಿಷಯ ವನ್ನು ರಸತರಂಗಿಣಿಯು ಪ್ರತಿಪಾದಿಸುತ್ತದೆ. ಇವೆಲ್ಲವುಗಳೂ ಅನುಪಾನಬಲದಿಂದ ಅತ್ಯಾಶ್ಚರ್ಯ ಫಲಗಳನ್ನು ಕೊಡುವುವು. ಇರಲಿ :

ಇನ್ನು ಚರಕಾದಿ ಸುಪ್ರಸಿದ್ಧ ಗ್ರಂಥಗಳಲ್ಲಿ ಇವುಗಳ ಪ್ರಯೋಗವನ್ನುಲ್ಲೇ ಖಿಸಿದೆಯೇ ? ಎಂಬುದೊಂದು ಪ್ರಶ್ನೆ ಇದಿರು ಬರುವುದು. ಇಲ್ಲವೆನ್ನಲಾಗುವುದಿಲ್ಲ: ಆದರೆ ಪ್ರತಿಯೊಂದು ರೋಗಚಿಕಿತ್ಸಾ ಪ್ರಕರಣದಲ್ಲಿ ಇವುಗಳನ್ನುಲ್ಲೇಖಿಸಿದ್ದೂ ಇಲ್ಲ. ಚರಕ ಕುಷ್ಠ ಚಿಕಿತ್ಸೆಯನ್ನವಲೋಕಿಸಿದರೆ—ಪಾದರಸಭಸ್ಮ, ಮಾಕ್ಷಿಕ ಧಾತು, ಗಂಧಕ, ಶಿಲಾಜಿತು, ಲೋಹ, ಹರಿತಾಳ, ವಂಗ, ನಾಗ ಮೊದಲಾದು ದರ ಪ್ರಯೋಗವು ಗೋಚರವಾಗುತ್ತದೆ. ರಸಾಯನ ಪ್ರಕರಣದಲ್ಲಿ ಶಿಲಾಜಿತು ವನ್ನೂ, ಪಾಂಡುರೋಗ ಚಿಕಿತ್ಸೆಯಲ್ಲಿ ಲೋಹ ಮತ್ತು ಮಂಡೂರವನ್ನೂ ಅಂಗೀ ಕರಿಸಿದ್ದಾರೆ. ವಾಗ್ಭಟಾಚಾರ್ಯರೂ ಸಹ ಇದನ್ನು ಅನುಮೋದಿಸಿದ್ದಾರೆ. ಅವರು ರಸಾಯನ ಪ್ರಕರಣದಲ್ಲಿ—ಸುವರ್ಣ, ಲೋಹ, ಪಾದರಸ, ಸ್ವರ್ಣಮಾಕ್ಷಿಕ

ಶಿಲಾಜಿತುಗಳನ್ನು ಪರಿಗ್ರಹಿಸಿದ ಹಾಗೆ ಕಂಡುಬರುತ್ತದೆ. ಪ್ರಮೇಹದಲ್ಲಿಯೂ ಲೋಹವನ್ನು ಸ್ವೀಕರಿಸಿದ್ದಾರೆ. ಅಧ್ಯಂತವಾಗಿ ವಿಮರ್ಶಿಸತೊಡಗಿದರೆ ಇನ್ನೂ ಇಂತಹ ಪ್ರಯೋಗಗಳು ದೃಗ್ಗೋಚರಗಳಾಗಬಹುದು. ಅದು ವಿನಹ ರಸರತ್ನ ಸಮುಚ್ಚಯ ಗ್ರಂಥ ಪ್ರಣೇತೃಗಳೇ ವಾಗ್ಭಟಾಚಾರ್ಯರು. ಅಷ್ಟಾಂಗ ಹೃದಯ ಕಾರರೂ ಇವರೂ ಒಬ್ಬರೇ ಅಥವಾ ಬೇರೆ ಬೇರೆಯೇ? ಎಂಬುದೊಂದು ಮಾತ್ರ ವಿಮರ್ಶನೀಯ ವಿಚಾರ. ಇರಲಿ;

ರಸಪ್ರಯೋಗಗಳಿಂದ ಅಚಿಂತನೀಯ ಪ್ರಯೋಜನವೇನೋ ಇದೆ. ಆದರೆ ಬಾಧಕವೇನಾದರೂ ಇದೆಯೇ? ಎಂಬುದಿನ್ನೊಂದು ಪ್ರಶ್ನೆಯುದಿಸುವುದು. ಸರಿ. ಯಾವುದು ತೀವ್ರ ಕಾರ್ಯಕಾರಿಯಾಗಿದೆಯೋ ಅದನ್ನು ಅಪಾಯವು ಹಿಂಬಾಲಿ ಸುತ್ತಲೇ ಇದೆ. ಅದರಂತೆಯೇ ಕ್ಷಿಪ್ರಗಾಮಿಯಾದ ಈ ರಸಪ್ರಯೋಗದಲ್ಲಿ ಅಪಾ ಯವಿಲ್ಲವೆನ್ನಲಾಗುವುದಿಲ್ಲ. ಬಹು ಜಾಗರೂಕತೆಯಿಂದಲೂ ಪ್ರಾಮಾಣಿಕತೆಯಿಂ ದಲೂ ಪ್ರವರ್ತಿಸುತ್ತಿದ್ದರೆ ಬಾಧಕವು ಬರಲಾರದು. ಅಜಾಗರೂಕತೆಯಿಂದ ಯದ್ವಾ ತದ್ವಾ ಪ್ರವರ್ತಿಸಿದರೆ ಯಾವ ಕೃತ್ಯದಲ್ಲಿ ತಾನೆ ಅಪಾಯವಿಲ್ಲ. ಪ್ರತಿಯೊಂದರ ಲ್ಲಿಯೂ ಇದೆ. ಈಗ ಸರ್ವತೋಮುಖವಾಗಿ ಪ್ರಚಾರಕ್ಕೆ ಬಂದಿರುವ ಇಂಜೆಕ್ಷನ್ನಿ ನಿಂದ ಅಪಾಯವಿಲ್ಲವೆನ್ನಬಹುದೇ? ಅದರ ಪರಿಮಾಣ (dose) ಹೆಚ್ಚುಕಡಿಮೆ ಯಾದರೂ ಅದರ ಗುರಿ ತಪ್ಪಿಹೋಗಿ ಒಂದೆಡೆಗೆ ಬದಲಾಗಿ ಇನ್ನೊಂದು ಕಡೆಗೆ ಪ್ರಯೋಗಿಸಲ್ಪಟ್ಟರೂ ಪ್ರಯೋಗಿಸಲ್ಪಡುವ ಔಷಧಿಯು ಮಾರಿಹೋಗಿದ್ದರೂ ಒಮ್ಮೆ ಪ್ರಯೋಗಿಸಲ್ಪಟ್ಟ ಔಷಧಿಯ ವಿರುದ್ಧವಾಗಿ ಬೇರೊಂದು ಔಷಧಿಯು ಪ್ರಯೋಗಿಸಲ್ಪಟ್ಟರೂ ಅಪಾಯವು ಇದ್ದೇ ಇದೆ. ಇವೆಲ್ಲ ತತ್ವವನ್ನು ಭಾವಿಸಿಕೊಂ ಡಿದ್ದುದರಿಂದಲೇ ಪಾಶ್ಚಾತ್ಯ ಚಿಕಿತ್ಸಕರೂ ಸಹ ಇಂಜೆಕ್ಷನ್ನಿನಿಂದ ಅಪಾಯವಿಲ್ಲ ವೆಂದು ಮೊದಲಾಗಿ ಸಾಧಿಸುವುದಿಲ್ಲ. ಡಾಕ್ಟರ್ ಅರ್ನಾಲ್ಡ್ ಉಷ್ಟನ್ ಎಂಬ ವರು—“ಇಂಜೆಕ್ಷನ್ನಿನಿಂದ ಅಪಾಯವಾಗುವುದಿಲ್ಲವೆಂದು ಸಿದ್ಧಮಾಡಿ ತೋರಿಸಿ ದರೆ ಒಂದು ನೂರು ಪೌಂಡು ಭಕ್ಷೀಸು (ಇನಾಮು) ಕೊಡುವೆವು” ಎಂದು ಆಹ್ವಾನ ಮಾಡಿದ್ದಾರಂತೆ. “ತ್ವಕ್ಕನ್ನು ಚುಚ್ಚಿ ಒಳಕ್ಕೆ ಔಷಧವನ್ನು ಸೇರಿಸುವ ಈ ಪದ್ಧತಿಯಿಂದ ಅನೇಕ ದುಷ್ಪರಿಣಾಮಗಳು ಕಣ್ಣಿಗೆ ಗೋಚರಿಸುವುದಾಗಿ” ಬ್ರಿಟಿಷ್ ಯೂನಿಯನ್ ಅಧ್ಯಕ್ಷರಾದ ಡಾಕ್ಟರ್ ಹಡ್ಸೇನ್‌ರವರು ಜನತೆಗೂ ಡಾಕ್ಟರರಿಗೂ ಆಗಾಗ ಹೇಳುತ್ತಲೇ ಇದ್ದರು. ಹೇಗೋ ಇರಲಿ; ಅಂತು ಜಾಗರೂಕನಾಗಿದ್ದವ ನಿಗೆ ರಸಪ್ರಯೋಗದಿಂದಾಗಿ ಅಪಾಯವು ಬರಲಾರದು. ನಿಶ್ಚಯ. ನಮ್ಮಲ್ಲಿರುವ

ಪರ್ಪಟೀ, ರಸಮಾಣಿಕ್ಯ ಮೊದಲಾದುವರಿಂದ ಆಗುವ ಕಾರ್ಯವು ಪಾಶ್ಚಾತ್ಯ ಔಷಧಗಳಿಂದ ತೃಪ್ತಿಕರನಾಗಿ ಸಾಗುವುದಿಲ್ಲ. ಅದಂತಿರಲಿ.

ಈವಾಗ ದೇಶಕಾಲಾನುಗುಣವಾಗಿ ಇದರಲ್ಲಿ ಏನಾದರೂ ಸುಧಾರಣೆ ಮಾಡಬಹುದೇ ? ಎಂಬ ಇನ್ನೊಂದು ಪ್ರಶ್ನೆಯು ತಲೆದೋರುವುದು. ಒಬ್ಬ ಮನುಷ್ಯನು ಹೊಸದಾದ ಬೇರೊಂದು ಉಡುಪನ್ನು ಧರಿಸಿಕೊಂಡು ಬಂದ ಮಾತ್ರದಿಂದ ಅತನು ಕುರೂಪಿಯಾಗಲಾರನು ಅಥವಾ ಬೇರೊಬ್ಬ ಮನುಷ್ಯನಾಗಿ ಆಗಲಾರನು. ಆದರೆ, ಕಾಲುಗಳನ್ನು ಕತ್ತರಿಸಿ ಮರದ ಅಥವಾ ರಬ್ಬರಿನ ಕಾಲುಗಳನ್ನಿಟ್ಟುಕೊಂಡು ಬದುಕುತಿದ್ದರೆ ಮಾತ್ರ ಅಂಗಹೀನನೆನಿಸುವನು. ಅಂತೆಯೇ ಅಲ್ಪಸ್ವಲ್ಪ ಸುಧಾರಿಸಿಕೊಂಡರೂ ರಸಶಾಸ್ತ್ರದ ಮೂಲತತ್ವಗಳಿಗೆ ಹಾನಿ ಸಂಭವಿಸದಂತೆ ನೋಡಿಕೊಳ್ಳಬೇಕು. ಆಧುನಿಕ ಯಂತ್ರೋಪಕರಣಗಳಿಂದಲೂ ವಿದ್ಯುಚ್ಛಕ್ತಿಯ ಬಲದಿಂದಲೂ ಅಲ್ಪಕಾಲದಲ್ಲಿ ಸರ್ವವನ್ನು ಯಥೇಷ್ಟವಾಗಿ ಸಿದ್ಧಪಡಿಸಿಕೊಂಡು ಈವಾಗ ರಸಶಾಸ್ತ್ರವು ಮೆರೆಯುತ್ತಿದೆಯೆನ್ನುವುದಾದರೆ ನಮ್ಮ ಶಾಸ್ತ್ರೀಯ ತತ್ವಗಳ ಗತಿಯೇನು ? ನೋಡಿ ! ತಾರೆಮರ (ಶಾಂತಿಮರ) ದ ಸೌದೆಗಳಿಂದ ತಯಾರಿಸಿದ ಇದ್ದಲುಗಳಿಂದ ತುಂಬಿ ಆ ಕುಲುಮೆಯಲ್ಲಿ ಮಂಡೂರವನ್ನು ಹಾಕಿ ಕಾಯಿಸಬೇಕೆಂದಿರುವರು. ತಾರೆಮರದ ಇದ್ದಲಿನ ಕೆಂಡಗಳಲ್ಲಿ ಒಂದು ವಿಶೇಷ ಗುಣವಿದೆ ಹಾಗೆ ಪ್ರತ್ಯೇಕವಾಗಿ ನಿರ್ದೇಶಿಸಲಿಕ್ಕಿಲ್ಲವಷ್ಟೆ ; ಮಣ್ಣಿನಲ್ಲಿ ಗುಣವೈಶಿಷ್ಟವಿಲ್ಲದೆ ಇದ್ದರೆ—ಮೂಷೆಗಳನ್ನು ತಯಾರಿಸಬೇಕಾದರೆ ಇಂತಿಂತಹ ಜಾತಿಯ ಮಣ್ಣನ್ನೇ ಉಪಯೋಗಿಸಬೇಕೆಂದು ಹೇಳುತ್ತಿದ್ದಿಲ್ಲ. ಮೂಷಾ ನಿರ್ಮಾಣಕ್ಕೆ ಮಣ್ಣನ್ನು ಮಾತ್ರವಲ್ಲದೆ, ಸಗಣಿ, ಇದ್ದಲು, ಹೊಟ್ಟಿನ ಕರಿ, ಮಂಡೂರ, ಕುದುರೆ ಲದ್ದಿ ಮೊದಲಾದುವನ್ನುಪಯೋಗಿಸಬೇಕೆಂದಿರುವರು, ಅದು ವಿನಹ ಮೂಷೆಗಳಲ್ಲಿ ಬಗೆಬಗೆಯ ರೂಪಗಳನ್ನು ನಿರ್ಮಿಸುವ ಆವಶ್ಯಕತೆಯನ್ನೂ ಕುಲುಮೆಗಳ ಪ್ರಕಾರಗಳನ್ನೂ ತೋರಿಸಿರುವರು. ಇವೆಲ್ಲವೂ ಒಂದು ತತ್ವವನ್ನುದ್ದೇಶಿಸಿಯೇ ಹೊರಟಿರಬೇಕಲ್ಲದೆ ಬೇರ ಅಲ್ಲ. " ರಸಾದಿ ದ್ರವ್ಯ ಪಾಕಾನಾಂ ಪ್ರಮಾಣ ಜ್ಞಾಪನಂ ಪುಟಂ । ನೇಷ್ಟೋ ನ್ಯೂನಾಧಿಕಃ ಪಾಕಃ ಸು ಪಾಕಂ ಹಿತಮೌಷಧಂ " (ರ. ರ. ಸ. ೧೦ ಶ್ಲೋ. ೫೦) ಎಂಬಂತೆ ಪುಟವೆಂಬುದು—ರಸಾದಿ ದ್ರವ್ಯಗಳ ಪಾಕದ ಪರಿಮಾಣವನ್ನು ತಿಳಿಸುವಂಥಾದ್ದಾಗಿದೆ. ಎಳೆದಾದ ಪಾಕವಾಗಲೀ ಮೀರಿದ ಪಾಕವಾಗಲೀ ಪ್ರಯೋಜನಕಾರಿಯಾಗಲಾರದು. ಈ ಸೂತ್ರವನ್ನನುಸರಿಸಿಕೊಂಡೇ ಕೆಲವು ಲೋಹಗಳಿಗೆ ೧೫೦೦ ಬೆರಣಿಗಳಿಂದ ಸಾಧ್ಯವಾದ ಮಹಾಪುಟವೇ ಆಗತ್ಯವೆಂದಿರುವರು. ಇನ್ನು ಕೆಲವಕ್ಕೆ ೬೫೦

ಬೆರಣಿಗಳಿಂದ ಸಾಧ್ಯವಾದ ಗಜಪುಟವು ಅಪೇಕ್ಷಿಸಲ್ಪಟ್ಟಿದೆ. ಇನ್ನು ಕೆಲವಕ್ಕೆ ಬರೇ ಎಂಟು ಬೆರಣಿಗಳಿಂದಾಗುವ ಕಪೋತಪುಟವೇ ಸಾಕೆಂದು ಇರುವುದು. ಮನಶ್ಶಿಲೆಯಿಂದ ಸತ್ವವನ್ನು ಕೇವಲ ಎರಡು ಬೆರಣಿಗಳಿಂದ ತೆಗೆಯಬಹುದೆಂದಿರುವುದು. ಹಟ್ಟಿಯಲ್ಲಿ ಹಸುಗಳ ಗೊರಸುಗಳಿಂದ ಪುಡಿಪುಡಿಯಾದ, ಒಣಗಿದ ಸಗಣಿಯ ಚೂರ್ಣದಿಂದಲೂ, ಭತ್ತದ ತುಷ (ಸಿಪ್ಪೆ)ಗಳಿಂದಲೂ ಕೊಡುವ ಗೋರ್ಬರ ಪುಟವು ರಸಭಸ್ಮದ ತಯಾರಿಗೆ ಶ್ರೇಷ್ಠವೆಂದಿರುವುದು. ಹೀಗೆಯೇ ವಾಲುಕಾ ಪುಟ, ಲವಣ ಪುಟ, ಭೂಧರ ಪುಟ ಮೊದಲಾದುವನ್ನು ಬೇರೆ ಬೇರೆಯಾಗಿ ನಿರೂಪಿಸಿರುವರು. ಒಂದೊಂದು ವಿಧದ ಪುಟದಿಂದ ಒಂದೊಂದು ಗುಣವು ಇದ್ದೇ ಇರುವುದು. ಅಗ್ನಿಯುರಿಸುವುದರಲ್ಲಿಯೂ ದೀಪಾಗ್ನಿ, ಕಮಲಾಗ್ನಿ ಮಂದಾಗ್ನಿ, ಗಾಢಾಗ್ನಿ ಎಂದು ಮೊದಲಾದ ಭೇದಗಳನ್ನು ಕಲ್ಪಿಸಿರುವರು. ಬೆರಣಿ ಮೊದಲಾದುವುಗಳ ಪರಿಮಾಣವನ್ನು ಮಾತ್ರ ಅನುಭವಸ್ಥ ಗುರುವಿನ ಮುಖಾಂತರವೇ ತಿಳಿಯಬೇಕಲ್ಲದೆ ಉಪಾಯಾಂತರವಿಲ್ಲ. ಏವಂಚ ಮಣ್ಣಿನ ಪಾತ್ರೆಯಲ್ಲಿ ಔಷಧವನ್ನು ಹಾಕಿ ನೀರು ಸುರಿದು ಮಂದಾಗ್ನಿಯಿಂದ ಅಷ್ಟಮಾಂಶಾವಶೇಷವಾಗಿ ಸಿದ್ಧವಾದ ಕಷಾಯದ ಗುಣವೇ ಬೇರೆ. ಸ್ಟವ್ವಿನ ಮೇಲೆ ಇಟ್ಟು ಐದೇ ನಿಮಿಷಗಳಲ್ಲಿ ತಯಾರಿಸಿದ ಕಷಾಯದ ಗುಣವೇ ಬೇರೆ. ಹೀಗೆ ಕೆಲವು ಮಟ್ಟಿಗೆ ಆಧುನಿಕ ಉಪಕರಣಗಳಿಂದ ಶಾಸ್ತ್ರೋಕ್ತವಾದ ಸಂಪೂರ್ಣ ಗುಣವು ದೊರೆಯುವುದೆನ್ನಲಾಗುವುದಿಲ್ಲ. ಈ ಮಧ್ಯೆ ಒಂದು ವಿಚಾರ ಹೇಳಿಬಿಡುವೆನು. ಇಂತಹ ಗ್ರಾಮ್ಯ ಸಾಧನಗಳನ್ನು ಕಟ್ಟಿಕೊಂಡು ಆಗಬೇಕಾದುದೇನು? ಅವುಗಳಿಂದ ದೊರೆಯುವ ಗುಣವು ಅಷ್ಟರಲ್ಲಿಯೇ ಇದೆಯೆನ್ನಬಹುದು ಕೆಲವರು. ಸಹಜ. ಪಾಶ್ಚಾತ್ಯರು ಇನ್ನೂ ಶೋಧಿಸುತ್ತಲೇ ಇರುವರು. ಶೋಧಿಸುತ್ತಾ ಶೋಧಿಸುತ್ತಾ ಮುಂದುವರಿದಂತೆ ಮೊಟ್ಟಮೊದಲು ಉತ್ತಮರೂಪವಾಗಿ ಎಣಿಸಲ್ಪಟ್ಟಿದ್ದ ಕೆಲವು ವಿಷಯಗಳು ಕೊನೆಕೊನೆಗೆ ನಿಕೃಷ್ಟಗಳಾಗಿ ಮಾರ್ಪಡುವುವು. ಅಪ್ರಯೋಜಿಕವೆಂದು ಪ್ರಥಮತಃ ತ್ಯಜಿಸಲ್ಪಟ್ಟ ವಿಷಯವು ಕಾಲಾನಂತರ ಉಪಯೋಗಕರವಾಗಿ ಪರಿಣಮಿಸುವುದೂ ಇದೆ. ಆದುದರಿಂದ ಗ್ರಾಮ್ಯಸಾಧನಗಳೆಂದು ತುಚ್ಛೀಕರಿಸದೆ ಅವಗಳನ್ನು ತಮ್ಮಷ್ಟಕ್ಕೆ ಇರಗೊಡಿಸುವ; ಅವುಗಳಿಗೂ ಇದಿರುಬರುವ ಕಾಲಬಂದೀತು. ಆವಾಗ ನೋಡಿಕೊಳ್ಳಬಹುದು. ಇನ್ನು—ಯಂತ್ರಗಳ ಮಧ್ಯೆ ಢೇಕೀಯಂತ್ರ, ತಿರ್ಯಕ್ಪಾತನಯಂತ್ರ, ವಲಭೀಯಂತ್ರ ಮೊದಲಾದುವುಗಳ ಸಲುವಾಗಿ ಅವೇ ಮಾದರಿಯ ಆಧುನಿಕಯಂತ್ರಗಳನ್ನು ಉಪಯೋಗಿಸುವುದರಿಂದ ದೋಷವಿರದು. ಆಧು

ನಿಕ ರಸಾಯನ ಶಾಸ್ತ್ರದಲ್ಲಿ ತೋರುವ ನಿಂಬೂಕಾಮ್ಲ (Acetic acid) ಗಂಧಕಾಮ್ಲ (Sulphuric acid) ಮೊದಲಾದುದನ್ನು ನಮ್ಮ ಶಾಸ್ತ್ರರೀತ್ಯಾ ತಯಾರಿಸುವ ಕ್ರಮವು ರಸತರಂಗಿಣಿಯಲ್ಲಿ ವಿಶದವಾಗಿ ವರ್ಣಿಸಲ್ಪಟ್ಟಿದೆ. ನಮ್ಮ ಮೂಲತತ್ವಗಳಿಗೆ ಯಾವುದೊಂದು ವಿಧದ ಹಾನಿಯೂ ಇಲ್ಲದಿರುವುದರಿಂದ ಅವುಗಳನ್ನು ಅಥವಾ ಅದರಂತೆ ಸಿದ್ಧವಾದ ಬೇರೆ ದ್ರವ್ಯಗಳನ್ನು ಉಪಯೋಗಿಸಿಕೊಳ್ಳಬಹುದು. ಆದರೆ ತತ್ವಚ್ಯುತಿಯಾಗದಂತೆ ಮಾತ್ರ ಜಾಗರೂಕರಾಗಿರಬೇಕು.

ಇನ್ನು—ನಮ್ಮಾ ರಸಶಾಸ್ತ್ರವನ್ನು ಉದ್ಧರಿಸುವ ಬಗೆ ಹೇಗೆ? ಎಂಬುದೊಂದೇ ಕೊನೆಯ ಪ್ರಶ್ನೆ ಉಳಿದಿದೆ. ಭಾರತೀಯರಾದ ನಾವು ಮನಸ್ಸುಮಾಡಿದರೆ ಇದೊಂದು ದೊಡ್ಡ ಕಾರ್ಯವಲ್ಲ. ರಸಸಿದ್ಧರಿಂದ ಪ್ರಣೀತಗಳಾದ ಎಷ್ಟೋ ಗ್ರಂಥಗಳು ಮಾಯವಾಗಿ ಹೋಗಿವೆ. ಒಂದುವೇಳೆ ಎಲ್ಲಿಯಾದರೂ ಇದ್ದಿದ್ದರೆ ಅದನ್ನು ಸೂರ್ಯಕಿರಣಗಳಿಗೆ ಸಹ ಸ್ಪರ್ಶವಾಗಗೊಡಿಸುವುದಿಲ್ಲ. ಪೂರ್ವದಿಂದ ಆರಂಭಿಸಿ ವಂಶಾನುಕ್ರಮವಾಗಿ ಅದರ ರಹಸ್ಯವನ್ನು ಬಲ್ಲವರು ಅದನ್ನು ಹೊರಗಡಿಸುವುದಿಲ್ಲ. ಒಂದುವೇಳೆ ಅಂಥವರಿಗೆ ಆಕಸ್ಮಿಕ ದುರ್ಮರಣ ಒದಗಿದರೆ ಆ ರಹಸ್ಯವು ಅವರ ಜೊತೆಗೇ ಅಳಿದುಹೋಗುವುದು. ಎಷ್ಟು ಶಾಸ್ತ್ರವನ್ನು ಅಭ್ಯಾಸ ಮಾಡಿದರೂ ಸರಿಯೇ. ಗುರುವಿನ ಅನುಭವಾಮೃತವನ್ನು ಪಡೆಯದೆ ಸಿದ್ಧಿಯಾಗಲಾರದು. “ಬೋದ್ಧಾರೋಮತ್ಸರಗ್ರಸ್ತಾ.............” ಎಂಬಂತೆ ತಿಳಿದವರು ಪ್ರಾಯಶಃ ಮಾತ್ಸರ್ಯದಿಂದ ಕಲುಷಿತರಾಗಿರುವರು. ಬೇರೆಯವರಿಗೆ ಹೇಳುವುದೆಂದರೆ ಪ್ರಾಣಗಳೇ ಉತ್ಕ್ರಮಿಸಿದಂತಾಗುವುದು. ಇನ್ನೂ ಒಂದು ವಿಷಯ. ವಿದ್ಯಾವಂತನಲ್ಲಿ ಹಣವಿಲ್ಲ. ಧನಿಕನಲ್ಲಿ ವಿದ್ಯೆ ಶೂನ್ಯ. ಇವೆರಡೂ ಇದ್ದಿದ್ದರೆ ಆತನಿಗೆ ಉತ್ಸಾಹವೇ ಇಲ್ಲ. ಅಂದಮೇಲೆ ಉದ್ಧಾರವಾಗುವ ಬಗೆ ಹೇಗೆ? ಹೀಗಿದೆ ನಮ್ಮ ಅವಸ್ಥೆ. ಇರಲಿ; ಈಗ ದೊರೆಯುವ ರಸಗ್ರಂಥಗಳಲ್ಲಿ ಹೆಚ್ಚಿನವುಗಳು ಉತ್ತರದೇಶೀಯರಿಂದ ಪ್ರಸಿದ್ಧಿಸಲ್ಪಟ್ಟವು. ಕೆಲಕೆಲವು ವಿಷಯಗಳನ್ನು ಉತ್ತರ ದೇಶದವರೇ ಸಂಗ್ರಹಿಸಿದವರು. ಕೆಲವನ್ನು ಆ ಕಡೆಯವರೆ ಭಾಷಾಂತರಿಸಿಯೂ ಇರುವರು. ನಮ್ಮಾ ದಕ್ಷಿಣ ಹಿಂದುಸ್ಥಾನದಲ್ಲಿ ಆಗಸ್ತ್ಯಮಹರ್ಷಿಯ ಉಪದೇಶಾಮೃತವನ್ನು ಪರಂಪರಾನುಗತವಾಗಿ ಹೊಂದಿ ಬಸವರಾಜ ಮೊದಲಾದವರು ಆಂಧ್ರದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ಅಂತಹ “ಬಸವರಾಜೀಯ” ಎಂಬ ರಸಗ್ರಂಥವೊಂದರ ವಿನಹ ಉಳಿದ ಯಾವುದೊಂದು ಉತ್ತಮ ಗ್ರಂಥವೂ ಈವಾಗ ಕಾಣಬರುವುದಿಲ್ಲ. ಕನ್ನಡನಾಡಿನಲ್ಲಿ ಹೆಸರಿಗೆ ತಕ್ಕಷ್ಟು ಒಂದು ಗ್ರಂಥವಾದರೂ

ಇಲ್ಲವೆನ್ನಲು ನಾಚಿಕೆಯಾಗುತ್ತದೆ. ಆದುದರಿಂದ ಆಯುರ್ವೇದಾಭಿಮಾನಿಗಳಾದ ರಾಜರು, ಮಠಾಧಿಪತಿಗಳು, ಧನಿಕರು, ವರ್ತಕರು, ಜಮೀನುದಾರರು ಉದಾರ ಬುದ್ಧಿಯಿಂದ ಧನಸಹಾಯ ಮಾಡಿ ಮೂಲೆಪಾಲಾಗಿರುವ ರಸಗ್ರಂಥಗಳನ್ನು ಹುಡುಕಿಸಿ ಅಚ್ಚುಹಾಕಿಸಬೇಕು. ಅಂತಹ ಅಮೂಲ್ಯ ಗ್ರಂಥಗಳು ಕಡುಲೋಭಿಗಳಾದವರ ಪೆಟ್ಟಿಗೆಯನ್ನು ಬಿಡುವಂತಿಲ್ಲವಾಗಿದ್ದರೆ ಅವರಿಗೆ ಹಣವನ್ನು ತೆತ್ತು ಅವುಗಳನ್ನು ಹೊರಪಡಿಸಬೇಕು. ರಸಶಾಸ್ತ್ರಾಭಿಜ್ಞರು ಅವುಗಳನ್ನು ಪರಿಶೋಧಿಸಿ ತಮ್ಮ ಸ್ವಾನುಭವವನ್ನು ಅವುಗಳಲ್ಲಿ ಸೂಚಿಸಬೇಕು. ಶಾಸ್ತ್ರಗಳನ್ನು ಭಾಷಾಂತರಿಸುವ ಅಥವಾ ಸ್ವಾನುಭವಸಿದ್ಧ ವಿಷಯಗಳನ್ನು ಬರೆಯುವ ವಿದ್ಯಾವಂತ ಉತ್ಸಾಹಿ ಜನರಿಗೆ ಸಾಕಷ್ಟು ಪ್ರೋತ್ಸಾಹ ಕೊಡಬೇಕು. ಅವರು ಅಚ್ಚು ಹಾಕಿಸುವಂತಿದ್ದರೆ ಯಥಾಶಕ್ತಿ ಹಣಸಹಾಯ ಮಾಡುವುದರಿಂದಾಗಲೀ ಹಾಗಿಲ್ಲವಾಗಿದ್ದರೆ ಹಣಕೊಟ್ಟು ಅವರಿಂದ ಅದರ ಹಕ್ಕನ್ನು ಪಡೆದುಕೊಳ್ಳುವುದರಿಂದಾಗಲೀ ಪ್ರೋತ್ಸಾಹಿಸಬೇಕು. ವಿದ್ವಾಂಸರು ಮಾತ್ಸರ್ಯವನ್ನು ಕಿತ್ತೊಗೆದು ತಮ್ಮಲ್ಲಿರುವ ತತ್ವವನ್ನು ಪರರ ಕಿವಿಗಳಿಗೆ ಹಾಕಬೇಕು. ಇಂತಹ ಸಭೆ ಸಮ್ಮೇಲನಾದಿಗಳಲ್ಲಿ ಸಂದಿಗ್ಧವಿಷಯಗಳನ್ನು ಚರ್ಚಿಸಬೇಕು. ವಿಶೇಷ ಪ್ರಯೋಗಗಳನ್ನು ಪ್ರತ್ಯಕ್ಷತಃ ಮಾಡಿತೋರಿಸಬೇಕು. ಸಾಧ್ಯವಾದರೆ ತತ್ವಾನ್ವೇಷಣಶಾಲೆ (research institute) ಯೊಂದನ್ನು ಏರ್ಪಡಿಸಬೇಕು. ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯಬೇಕು. ಲೋಕದ ಜನರಿಗೆ ಅಭಿರುಚಿ ಹುಟ್ಟುವಂತೆ ಆಯುರ್ವೇದ ತತ್ವಗಳನ್ನು ಬೋಧಿಸಬೇಕು. ದೇಶೀಯ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಮಾಸಪತ್ರಿಕೆ ಮೊದಲಾದುದನ್ನು ಉತ್ತೇಜಿಸಬೇಕು. ಆಯುರ್ವೇದದಲ್ಲಿ ಪವಿತ್ರಬುದ್ಧಿಯುಳ್ಳ ಮಹನೀಯರಿಗೆ ಸಮ್ಮೇಲನಾದಿಗಳಲ್ಲಿ ಪ್ರವೇಶಗೊಡಿಸಬೇಕು. ವೈದ್ಯರು ಶಾಸ್ತ್ರೀಯ ಕ್ರಮಗಳಿಗೆ ವಿರೋಧಿಗಳಾಗಿ ಸ್ವೇಚ್ಛಾಪ್ರವೃತ್ತಿಗಳಾಗದಂತೆ ನಿರ್ಬಂಧವಿರಬೇಕು. ಇವೇ ಮೊದಲಾದ ಉದ್ದೇಶಗಳಿಗಾಗಿ ನಾವೇ ಒಮ್ಮನಸ್ಸಿನಿಂದ ಮುಂದೆ ಬಂದು ಕೆಲಸ ಮಾಡಬೇಕಲ್ಲದೆ ಚಾತಕಪಕ್ಷಿಯು ವೃಷ್ಟಿಯನ್ನು ಕಾದಿರುವಂತೆ ಸರಕಾರದ ಸಹಾಯವನ್ನೇ ನಿರೀಕ್ಷಿಸಿ ಉಪಯೋಗವಿಲ್ಲ. ನಾವು ಮುಂದಾಗಿ ಯಥಾಶಕ್ತಿ ದ್ರವ್ಯವನ್ನು ಹಾಕಿ ಇಂತಿಂತಹ ಕಾರ್ಯಕಲಾಪವನ್ನು ಮಾಡುವಂತಿದ್ದೇವೆ ಅಥವಾ ಮಾಡುತ್ತಿದ್ದೇವೆ ಸರಕಾರದವರು ಪ್ರೋತ್ಸಾಹಿಸಬೇಕು ಎಂದು ಕೇಳಿಕೊಂಡರೆ ಅವರು ಸಹಾಯಮಾಡದೆ ಇರಲಾರರು.

ಈ ರೀತಿಯ ಹಲವು ಸಾಹಸಗಳಿಂದ ರಸಶಾಸ್ತ್ರವನ್ನು ಅಭಿವೃದ್ಧಿಗೆ ತಂದರೆ ಜನತೆಯ ರೋಗಗಳು ಸ್ವಲ್ಪ ಪರಿಮಾಣದ ಔಷಧಿಗೂ ತಲೆಬಾಗಿ ವಿಳಂಬವಿಲ್ಲ

ದೇನೇ ಅಳಿದು ಹೋಗುವುವು. ಅಸಾಧ್ಯವೆಂಬ ಹೇತುವಿನಿಂದ ತಿರಸ್ಕರಿಸಲ್ಪಟ್ಟ ಎಂತೆಂತಹ ಘನರೋಗಗಳೂ ಸಹ ತೊಲಗಿ ಹೋಗುವುವು. ಏತಾದೃಶ ಅಮೂಲ್ಯ ಗುಣಗಳ ಪ್ರಸಾರದಿಂದಾಗಿ ಸರ್ವರ ಮನಸ್ಸೂ ಸಹ ಎಂದು ಆಕರ್ಷಿಸಲ್ಪಡುವಂತಾಗುವುದೋ ಅಂದು ರಸಶಾಸ್ತ್ರಕ್ಕೆ ಉದ್ಧಾರವಾಗುವ ಕಾಲಬಂದಿತೆಂದು ಊಹಿಸಬಹುದು. ಅಂತಹ ದಿವ್ಯಸಂದರ್ಭವನ್ನು ಕರುಣಿಸುವಂತೆ ಆ ಶ್ರೀಧನ್ವಂತರಿ ಪರಮಾತ್ಮನನ್ನು ಪ್ರಾರ್ಥಿಸಿಕೊಳ್ಳುವೆನು.

ಈ ದೃಶ್ಯ ಅಮೂಲ್ಯ ಸನ್ನಿವೇಶದಲ್ಲಿ ನನ್ನೀ ಅಲ್ಪ ಲೇಖನವನ್ನು ಓದಲು ಸಮಯವನ್ನು ಒದಗಿಸಿಕೊಟ್ಟ ಸ್ವಾಗತಸಮಿತಿಯವರಿಗೂ ಇದನ್ನೇ ಕೇಳುತ್ತಾ ಬೆಲೆಬಾಳುವ ತಮ್ಮ ಸಮಯವನ್ನು ಕಳೆದುಕೊಂಡ ಸಭಾಸದರಿಗೂ ನನ್ನ ಅನಂತ ವಂದನೆಗಳು.

ಇತಿ

ತಾ|| 29-12-1941. ಹೆಚ್. ಟಿ. ರಾಮಚಂದ್ರಾಚಾರ್ಯ.

---

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

## ೧೨ ನೆ ನಿಖಿಲಕರ್ಣಾಟಕಾಯುರ್ವೇದ ಸಮ್ಮೇಳನಾಂಗವಾದ ರಸಾಯನಸಂಭಾಷಾಪರಿಷತ್ತಿನಲ್ಲಿನ ಪ್ರಬಂಧ

### ಹರಿಹರದ ಶ್ರೀ ವೈದ್ಯರತ್ನ ಪಿ. ಯಂ. ಸಿದ್ದಪ್ಪಯ್ಯನವರಿಂದ

---

ಸಾರಾಸಾರ ವಿಚಾರದಕ್ಷರಾದ ಅಧ್ಯಕ್ಷಮಹಶಯರೇ ಸುಹೃದಯ ಭಿಷಜ್ಮಣಿಗಳೇ, ಮಾನ್ಯಸಭಿಕರೇ ಈಗ ತಮ್ಮಗಳ ಪ್ರೇಮಪೂರಿತಮಾದ ಸಲಹೆಯೆಂಬ ಭದ್ರವಾದ ತಳಹದಿಯಮೇಲೆ ನಿಂತು ಮಹತ್ತರವಾದ ಕೆಲವು ಸಿಂಧೂರಗಳ ತಯಾರಿಕೆಯ ವಿಚಾರವಾಗಿ ಮಾತನಾಡಲುಜ್ಜುಗಿಸಿರುವೆನು. ಏನಾದರೂ ಕುಂದುಗಳು ಕಂಡುಬಂದಲ್ಲಿ ಮರಾಳಕ್ಷೀರನ್ಯಾಯದಂತೆ ಗುಣಗ್ರಹಣಮಾಡಿ ಪ್ರೋತ್ಸಾಹಿಸಬೇಕಾಗಿ ಕೋರುತ್ತೇನೆ—

ಮಾನ್ಯಮಹಾಶಯರೇ, ಕೆಲವು ಸಿಂಧೂರಗಳನ್ನು ವಾಲುಕಾಯಂತ್ರದಲ್ಲಿ ಇಂಥಿಂಥವುಗಳನ್ನು ಇಷ್ಟಿಷ್ಟು ಜಾಮ, ಯಿಂತಿಷ್ಟು ದಿವ್ಸ ಉರಿಸಬೇಕೆಂದು ಗ್ರಂಥಾಧಾರಗಳಿದ್ದರೂ ಕೆಲವು ವೇಳೆ ಅಗ್ನಿಕೊಡುವುದರ ತಾರತಮ್ಯ ವ್ಯತ್ಯಾಸಗಳಿಂದ ಪಕ್ವಕ್ಕೆ ಬದಲಾಗಿ ಅಪಕ್ವ-ಅತಿಪಕ್ವಗಳಾದರೂ ಆಗಬಹುದು. ಮೊದಲೇ ಇದನ್ನರಿಯದವರಾದ ನಾವು ಹೀಗಾಗಿದೆ ಎಂಬಂಶವನ್ನರಿಯದೆ ಗ್ರಂಥದಲ್ಲಿ ಹೇಳಿರುವಂತೆ ಮಾಡಿದ್ದೇವೆಂದಮೇಲೆ ಮತ್ತೇನಿದೆ. ಸಿಂಧೂರವು ತಯಾರಿಯೇ ಆಯಿತೆಂಬ ಸಮಜಾಯಿಷಿಯಿಂದಲೂ ಗ್ರಂಥದಲ್ಲಿ ಹೇಳಿದೆ ಎಂಬ ನಂಬಿಕೆಯಿಂದಲೂ ಆಯಾ ಪ್ರಮಾಣ, ಆಯಾ ಅನುಪಾನಗಳಂತೆ ಕೊಡಲು ಮೊದಲುಮಾಡುತ್ತೇವೆ. ಅಂತೆಯೇ ಇದರಲ್ಲಿ ವಿಚಾರಮಾಡತಕ್ಕದ್ದೆಂದರೆ ನಮ್ಮ ಪೂರ್ವಜರ ದೇಹಧಾರ್ಢ್ಯಕ್ಕು ಈಗಿನವರಾದ ನಮ್ಮಗಳ ದೇಹಧಾರ್ಢ್ಯಕ್ಕೂ ಅಜಗಜನ್ಯಾಯದಂತಿರುವಲ್ಲಿ ಆಗಿನವರ ಪ್ರಮಾಣದಂತೆ ಈಗಿನವರಿಗೆ ಕೊಡುವುದೆಂದರೇನು ? ಆ ಸಿಂಧೂರವು ಪಕ್ವವಾಗಿರುವುದಾದರೂ ಕೊಡುವುದರ ಈ ವ್ಯತ್ಯಾಸಗಳಿಂದ ಅದರಿಂದದಾಗಬಹುದಾದ ಅಮೌಲ್ಯ ಗುಣಗಳಿಗಿಂತಲೂ ಶತಾಧಿಕ್ಯ ಅವಗುಣಗಳಾಗಿ ಅಪಾರವಾದ ಹಾನಿಗಳಿಗೀಡಾಗುತ್ತದೆ. ಅಪಕ್ವ ಅತಿಪಕ್ವಗಳಾಗಿರುವವುಗಳಿಂದಿನ್ನೆಷ್ಟು ಹಾನಿಗಳಾಗುತ್ತವೆಂಬುದನ್ನು ತಾವೇ ಯೋಚಿಸಬೇಕಾಗಿದೆ. ಕಾರಣ ಯಾತರಹ ಮಹದ್ವಿಪತ್ತುಗಳಿಂದ ಪಾರಾಗಿ ಔಷಧ ತೆಗೆದುಕೊಳ್ಳುವವರಿಗೆ ಸುಖವೂ ಕೊಡುವವರಿಗೆ ಕೀರ್ತಿಯೂ ನಮ್ಮಾ ಆಯುರ್ವೇದಕ್ಕೆ ಕಳೆಯೂ ಉಂಟಾಗಬೇಕಾದರೆ ನೂತನ

ಅಭ್ಯಾಸಗಳೇನೋ ಸರಿಯೇ. ಓದಿಬಂದ ವಿದ್ಯಾಪಾರಂಗತರಾದರೂ ಕೂಡ ಶಾಸ್ತ್ರದಲ್ಲಿ ಬಲ್ಲಿದರಾದರೂ ಅನುಭವಿಗಳಲ್ಲಿ ಒಡನಾಡಿ ಗುರುಕುಲದಿಂದ ಸೂಕ್ಷ್ಮವಾಗಿರುವ ಮರ್ಮವನ್ನರಿತು ನಡೆಯುವುದರಿಂದ ಹರಳಿಗೆ ಕುಂದಣವಿಟ್ಟಂತಾಗಿ ಇವರು ಕಲಿತ ಶಾಸ್ತ್ರಕ್ಕೆ ಕಳೆಯೇರಿ ಪ್ರಭಾ ಮೂರ್ತಿಗಳಾಗಿ ಬೆಳಗಲು ಅಭ್ಯಂತರವಿಲ್ಲವು, ಹೀಗೆ ಆಚರಿಸುವುದು ಸರ್ವಸಮ್ಮತವಾಗಿ ನಡೆದು ಬಂದಿರುವುದಾದರೂ ಹಲಕೆಲವರು ಹೀಗೆ ವರ್ತಿಸದಿರೋಣದರಿಂದಲೇ ನಮ್ಮ ಶಾಸ್ತ್ರಕ್ಕೆ ಪೂರ್ವಕ್ಕಿಂತಲೂ ಈಗ ಕಳೆ ಕಡಿಮೆಯಾದಂತೆ ಕೆಲವರಿಗನಿಸಿದೆಯಲ್ಲದೆ ನಿಜವಾಗಿಯೂ ಶಾಸ್ತ್ರಕ್ಕೆ ಕಳೆ ಕಡಿಮೆಯಾಗಿಲ್ಲವು. ಈ ಸಂಬಂಧದಲ್ಲಿ ಅರಿತು ನುರಿತವರನೇಕರು ಮುಂದುವರಿದು ಅನೇಕ ದೊಡ್ಡ ದೊಡ್ಡ ಸಂಸ್ಥೆಗಳನ್ನು ಸ್ಥಾಪಿಸಿ ನಿಜಾಂಶಗಳನ್ನು ಮುಂದುವರಿಸುತ್ತಾ ಬಂದುದರಿಂದ ಈಗೀಗ ಆಯುರ್ವೇದಕ್ಕೆ ಎಷ್ಟೋ ಕಳೆಯುಂಟಾಗಿದೆ. ಆಗುತ್ತಲೂ ಇದೆ. ಇಂತಹ ಉದಯಕಾಲದಲ್ಲಿ ನಾವುಗಳೆಲ್ಲರೂ ಸುಮ್ಮನೆ ಕೂಡ್ರದೆ ನಮ್ಮನಮ್ಮಗಳ ಅನುಭವಗಳನ್ನು ಮನಬಿಚ್ಚಿ ಹೊರಚೆಲ್ಲಿ ಕಾರ್ಯಭಾಗ ನಡೆಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಇದರಿಂದ ಪರಸ್ಪರ ಸೌಹಾರ್ದ್ರವೂ ಹೆಚ್ಚಿ ಸರ್ವರಿಗೂ ಶ್ರೇಯೋಭಿವೃದ್ಧಿಯೂ ಉಂಟಾಗಿ ನಮ್ಮ ಶಾಸ್ತ್ರವು ಅತ್ಯುಚ್ಚವಾಗಿ ಪ್ರಕಾಶಿಸಲು ದಾರಿಯಾಗುತ್ತೆ.

ನೋಡಿ—ಮಾಧವಾಚಾರ್ಯರ ಗ್ರಂಥಾಧಾರದಿಂದ ಷಡ್‌ಗುಣ ಸಿಂಧೂರ ತಯಾರಿಕೆಯ ವಿಚಾರದಲ್ಲಿ ಹೀಗೆ ಹೇಳಿದೆ—

ಪಾರದಂಬೊಕ್ಕಪಾಲು ಪರಿಶುದ್ಧ ಗಂಧಕಮಾರು ಭಾಗಂಬುಲು ।
ನಮರಹಂಸಪಾದಿರಸಂಬುನ ಬಾಗುಗಾ ನೊಕ್ಕನಾಡು ಮರ್ದಿಂಚಿ ।
ಯಾರಿಂಚಿಮಟ್ಟವ್ಮೈನ ಕಾಚಿಕುಪ್ಪೆಕುನಿಂಚಿ ಗಟ್ಟಿಬೋಲನೊನರ್ಚಿ ।
ವಾಲುಕಾಯಂತ್ರಾನ ವರುಸಮೂಡುದಿನಮುಲು ವಂಡಿನ ದಿವ್ಯ ಸಿಂಧೂರವೌ ॥
ತಬುವೈನಯನುಪಾನಕತುಲಸಿಡಿನ ಪಾಂಡು ಕಾಮಿಲು ಶೋಭಲು ರೂಕ್ಷಲುಪ ।
ದಂಶ ಮೇಹವ್ರಣಂಬುಲ ಮೇಲುಶೀಯೂ ಕುಷ್ಟುಲಷ್ಟಾದಶಂಬುಲ ।
ನಷ್ಟಪರಚು ದೇಹಬಲಮುನು ಕಾಂತಿಯುದೆಚ್ಚು ಚಾಲ ಅಶ್ವಿನಿದೇವತಂ ।
ಚೈ ಚಲಂಗು ಬಂಧುರಂಭ್ಯಗು ಷಡ್ಗುಣ ಸಿಂಧುರಂಬು ॥೧॥

ನೋಡಿ—ಷಡ್ಗುಣಸಿಂಧೂರ ತಯಾರಿಕೆಯಲ್ಲಿ ಗ್ರಂಥಾಧಾರದಲ್ಲಿ ಒಂದು ಭಾಗ ರಸ, ಆರು ಭಾಗ ಶುದ್ಧ ಗಂಧಕವನ್ನು ಸೇರಿಸಿ ಹಂಸಪಾದಿರಸದಿಂದ ಒಂದು

ದಿನ ಅರೆದು ಕಾಚುಕುಪ್ಪಿಗೆ ಕಪಟಮಟ್ಟಿ ಮಾಡಿ ಆರಿಸಿ ಅದರಲ್ಲಿ ಮೇಲಿನ ಅರತೆಯಾದ ರಸ ಗಂಧಕವನ್ನು ತುಂಬಿ ವಾಲುಕಾಯಂತ್ರದಿಂದ ಮೂರು ದಿನ ಉರಿಸುವುದರಿಂದ ಸಿಂಧೂರಸವಾಗುತ್ತೆ. ಇದರಿಂದ ಇಂತಿಂಥ ಮಹಾ ವ್ಯಾಧಿಗಳು ಗುಣವಾಗುತ್ತೆ ಎಂದು ಹೇಳಿದೆಯಲ್ಲವೆ, ಸರಿ ಈ ಸಿಂಧೂರವನ್ನು ತಯಾರಿಗಾಗಿ ಇಟ್ಟ ಕಾಲವು ಸುಯೋಗವುಳ್ಳದ್ದಾದರೆ ಮಾತ್ರ ಸರಿಯಾದ ಪಕ್ವವನ್ನು ಕಾಣುತ್ತಾನೆ. ಇಲ್ಲದೇ ಹೋದಲ್ಲಿ ವರ್ಣಹೀನವಾದ ಅಪಕ್ವ ಸೀಸೆಯಿಂದ ತೆಗೆಯಲೂ ಸಹ ಬರದಿರುವ ಅತಿಪಕ್ವವನ್ನು ಕಂಡು ಉತ್ಸಾಹ ಹೀನರಾಗಿರುವ ಅನೇಕ ವೈದ್ಯರನ್ನು ಸಹ ಪ್ರತ್ಯಕ್ಷ ನೋಡಿಯೂ ಸಹ 2 ಸಾರಿ ಇಂಥ ನಷ್ಟಕ್ಕೆ ಗುರಿಯಾಗಿಯೂ ಇರುವುದನ್ನು ಇಲ್ಲಿ ಹೇಳದಿರಲಾರೆ.

ಈ ವಿಚಾರವನ್ನು ಅರಿತುಸುರಿತ ಕೆಲ ಕನ್ನಡ ಮತ್ತು ಆಂಧ್ರ ವೃದ್ಧ ವೈದ್ಯರಲ್ಲಿ ಇದರ ಮುಖ್ಯವಾದ ಚಿಹ್ನೆಗಳೇನೆಂದು ಕೇವಲ ನಮ್ರ ಮನಸ್ಸಿನಿಂದ ಕೇಳಿದ್ದಕ್ಕೆ (ಅವರುಗಳು) ಗ್ರಂಥಾಧಾರವೇ ಮುಖ್ಯವಾದ್ದೆಂದೂ, ಕೆಲವರು ಉರಿಸುವ ವ್ಯತ್ಯಾಸವೆಂದೂ, ಕೆಲವರು ಹೀಗೆಲ್ಲಾ ಮುಚ್ಚುಮನಸ್ಸಿನಿಂದ ಅಪ್ಪಣೆಕೊಡಿಸಿದರು ನೋಡಿ, ನಾನು ಕೇಳುವ ಪ್ರಶ್ನೆಗೆ ಇದು ಸರಿಯಾದ ಉತ್ತರವೇ ? ಆ ಮಹಾನುಭಾವರುಗಳು ಈ ಮಹಾಸಮ್ಮೇಳನದಲ್ಲಿ ಭಾಗವಹಿಸಿದಂತೆ ತೋರುತ್ತೆ. ಆದರೆ ಈ ವಿಚಾರದಲ್ಲಿ ಅವರ ಮನಸ್ಸನ್ನು ನೋಹಿಸಲು ಹೇಳಿದ್ದಲ್ಲವೆಂದು ಖಂಡಿತ ತಿಳಿಯಬೇಕಾಗಿ ನನ್ನ ಅರಿಕೆ. ಸದ್ರಿ ಸಿಂಧೂರಗಳ ತಯಾರಿಕೆಗೆ ನಿರ್ಮಲಾತ್ಮನು ನನ್ನೀ ಮನಸ್ಸಿಗೆ ಪ್ರೇರಣೆ ಮಾಡಿದ ಪ್ರಕಾರ ಕೆಲವು ಚಿಹ್ನೆಗಳನ್ನು ಕಂಡುಕೊಂಡು ಸರಳಮಾರ್ಗದಿಂದ ಅನೇಕ ಸಿಂಧೂರಗಳನ್ನು ಯಾವನಷ್ಟವೂ ಆಗದಂತೆ ತಯಾರಿಸಿದ ಈ ಷಡ್ಗುಣ ಸಿಂಧೂರವನ್ನು ತಮ್ಮೀಘನವಾದ ಅವಲೋಕನೆಗೆ ಎದುರಿಟ್ಟು ಅನುಭವದ ಆಧಾರಶ್ಲೋಕದಿಂದಲೂ ಬಿಚ್ಚುಮನಸ್ಸಿನಿಂದಲೂ ವಿವರಿಸಿ ನನ್ನೀಉಪನ್ಯಾಸವನ್ನು ವಿರಮಿಸುತ್ತೇನೆ.—

ಗಂಧಕವು ಕಡ್ಡಿ ಗಂಟದೊಲಾಗೆ । ದೀಪದೋಲ್ ಕುಪ್ಪೆಯಿಂ ।
ದುರಿಸಾಗಿ ಬರುವುದಂ ಕಂಡು ॥ ಸಿಂಧೂರಪಾಕಮೆಂದರಿವುದನರಿದಂ ।
ಸಿದ್ಧಾರವೈದ್ಯನಿದನನುಭವದಾ ॥೧॥

ಉರಿಕಾಣಲ್ ಕುಪ್ಪೆಯೊಳ್ಮ । ತ್ತಿರದುರಿಸುವುದಿಪ್ಪತ್ತು ನಿಮಿಷ ಭರದಿಂದೊಲೆಯಂ।
ಉರಿಯುನು ನಿಲ್ಲಿಸುತಾಗಳ್ ತೋರಿತದಿ ತೆಗೆಯುವುದು ಸಾಂಗಸೀತಲದಿ ಸಿಂಧುರಮಂ॥

ಯಂತ್ರದ ಒಲೆಗೆ ಅಗ್ನಿಕೊಟ್ಟ ಕೆಲಕಾಲದ ನಂತರ ಗಂಧಕಪಕ್ವವನ್ನು ತಿಳಿಯುವುದು ಮೊದಲನೆಯದು. ಅದರ ಪಕ್ವವಾದರೋ ಸೀಸೆಯ ಕಾರ್ಕನ್ನು ತೆಗೆದು ಲೋಹದ ಕಡ್ಡಿಯನ್ನು ಹಾಕಿ ನೋಡುವಲ್ಲಿ ಗಂಧಕದ್ರವವು ಕಡ್ಡಿಗೆ ಅಂಟದಂತಾಗುವಲ್ಲಿ ಗಂಧಕ ಪಕ್ವವಾಗಿ ಸಿಂಧೂರಪಾಕಕ್ಕೆ ಬಂದಿರುವದೆಂದು ಅರಿತು ತಿರುಗಿ ಉರಿಸುತ್ತಾ ಜಾಗರೂಕತೆಯಿಂದ ಅವಲೋಕಿಸುತ್ತಾ ಕೆಲಕಾಲನಂತರ ಕುಪ್ಪೆಯಿಂದ ದೀಪದಂತೆ ಉರಿಯು ಹೊರ ಹೊರಟು ಆಗಲೇ ಅಡಗುವುದು ಈ ಸಂಕೇತವನ್ನು ತಿಳಿದಾಗಲೇ ಸಿಂಧೂರ ಪಾಕವಾಯಿತೆಂದು ತಿಳಿದು, ತಿರುಗಿ 30 ನಿಮಿಷ ಕಾಲ ಮಾತ್ರ ಯಂತ್ರದ ಬಲೆಯನ್ನು ಉರಿಸಿಬಿಟ್ಟು ಕುಪ್ಪೆಯನ್ನು ತೆಗೆದು ಸ್ವಾಂಗ ಸೀತಲವಾದ ನಂತರ ಸಿಂಧೂರವನ್ನು ತೆಗೆಯಲು ಬಾಲಸೂರ್ಯನಂತೆ ಕಲಾಯುಕ್ತವಾದ ಶುದ್ಧ ಸಿಂಧೂರವನ್ನು ಸಂದೇಹವಿಲ್ಲದೆ ನಾವು ಪಡೆಯುತ್ತೇವೆ.

ಇದರಂತೆ ಸರ್ವ ವೈದ್ಯ ತಯಾರಿಕೆಯಲ್ಲಿಯೂ ಒಂದೊಂದು ವಿಧ ಗೂಢವಾದ ಸಂಕೇತಗಳಿವೆ ಎಂಬುದನ್ನು, ಎಲ್ಲಾ ವೈದ್ಯ ಮಹಾನುಭಾವರುಗಳು ಅರಿತ ಅಂಶವಾಗಿಯೇಯಿದೆ. ಅಂತಹ ಗುಟ್ಟುಗಳನ್ನು ಇಂತಹ ಮಹಾ ಸಮ್ಮೇಳನಗಳಲ್ಲಿ ಸರ್ವ ವೈದ್ಯರುಗಳು ಅರಿಯುವಂತೆ ನಿಷ್ಕಳಂಕ ಭಾವನೆಯಿಂದ ಹೊರಗೆಡಹಿ ಈ ಆಯುರ್ವೇದದ ಅಭ್ಯುದಯವು ಸರ್ವವ್ಯಾಪಿಯಾಗಬೇಕೆಂದು ಕಾಯಾ, ವಾಚಾ, ಮನಸಾ ಪ್ರಯತ್ನಿಸುತ್ತಿರುವ ಮಹ ಮೇಧಾವಿಗಳಾದ ವೈದ್ಯ ವಿದ್ವಾನ್ ಮಣಿಗಳಿಗೂ ಆಯುರ್ವೇದ ಪ್ರೇಮಿಗಳಾದ ಮಹಾನುಭಾವರುಗಳಿಗೂ ಅವರ ಈ ಮಹತ್ ಕಾರ್ಯದಲ್ಲಿ ಸರ್ವ ವಿಧದಿಂದಲೂ ತಾವುಗಳೆಲ್ಲಾ ಸಹಕರಿಸಿ ಕೀರ್ತಿ ಭಾಜನರಾಗುವಂತಹ ಸರಳ ಮನಸ್ಸನ್ನು ದಯಪಾಲಿಸಲೆಂದು ಆ ಜಗನ್ನಿಯಾಮಕನಾದ ಪರಮಾತ್ಮನನ್ನು ಪ್ರಾರ್ಥಿಸಿ ನನ್ನೀ ಭಾಷಣವನ್ನ ವಿವಮಿಸುತ್ತೇನೆ.

ವೈದ್ಯ ರತ್ನ ಪಂ|| ಸಿದ್ದಪ್ಪಯ್ಯ,
ಹರಿಹರ.



ಸ್ವಾಗತಸದಸ್ಯರ, ಪ್ರತಿನಿಧಿಗಳ ಮತ್ತು ಅಧ್ಯಕ್ಷರುಗಳ ಗ್ರೂಫ್ ಫೋಟೊ

ಅನುಭವಿಗಳಾದ ಅನೇಕ ವೈದ್ಯರುಗಳು ಈ ವಿಚಾರಗಳಲ್ಲಿ ಮಾತನಾಡಿ ಸಂಶಯಗ್ರಸ್ತವಾದ ಸಂದರ್ಭಗಳ ಮೇಲೆಲ್ಲಾ ಚರ್ಚೆ ನಡೆಸಿ ಸದುತ್ತರದಿಂದ ತೃಪ್ತರಾದರು.

ತರುವಾಯ ಪುಷ್ಪಹಾರಗಳೂ ವಂದನಾಸಮರ್ಪಣೆಯೂ ಆದ ನಂತರ ಆಗಿನ ಪರಿಷತ್ತು ಮುಕ್ತಾಯವಾಯಿತು.

---

**ನಂತರ ಸಂಧ್ಯಾಕಾಲದಲ್ಲಿ ನಿ. ಕ. ಆಯುರ್ವೇದ ಸಮ್ಮೇಳನದ ಎಲ್ಲ ವೈದ್ಯಪ್ರತಿನಿಧಿಗಳ ಮತ್ತು ಅಧ್ಯಕ್ಷರುಗಳ, ಸ್ವಾಗತ ವೈದ್ಯಸದಸ್ಯರ ಗ್ರೂಫ್ ಫೋಟೋ ತೆಗೆಯಿಸಲಾಯಿತು.**

**ಆದಿನ ಸಾಯಂಕಾಲ ೬—೭-೩೦ ಗಂಟೆ ವರಿಗೆ** ಹೆಡತಲೆಯ ಯೋಗ ಶಾಲಾಧ್ಯಕ್ಷರಾದ **ಶ್ರೀಯುತ ಶ್ರೀರಂಗ** ಎಂಬುವರಿಂದ ಯೋಗಶಾಸ್ತ್ರಕ್ಕೂ ಆಯುರ್ವೇದಕ್ಕೂ ಇರುವ ನಿಕಟಸಂಬಂಧದ ವಿಚಾರವಾಗಿ ಭಾಷಣವೂ ಪ್ರದರ್ಶನವೂ ನಡೆದುದು ಸಭಿಕರಿಗೆಲ್ಲಾ ತುಂಬಾ ಆನಂದ ಪ್ರದವಾಗಿತ್ತು.

ಮಾನ್ಯಪ್ರೇಕ್ಷಕರಾಗಿದ್ದ ಶ್ರೀವರ್ಮಾ ಎಂ. ವಿ. ಶಾಸ್ತ್ರಿಗಳವರು ಅವರ ಪ್ರದರ್ಶನಕ್ಕೆ ಸಂತೋಷಪಟ್ಟು ಧನರೂಪವಾದ ಬಹುಮಾನವನ್ನು ಸಭೆಯಲ್ಲಿ ಅವರಿಗೆ ಕೊಟ್ಟರು. ಅವರು ಅದನ್ನು ಬಹು ಮರ್ಯಾದೆಯಿಂದ ಸ್ವೀಕರಿಸಿ, ಆ ಹಣವನ್ನು ಸಮ್ಮೇಳನಕ್ಕಾಗಿ ತಾವೂ ತಮ್ಮ ಪರಮಸಂತೋಷದಿಂದ ಒಪ್ಪಿಸಿದರು.

---

**ಇದೇ ರಾತ್ರಿ ೮-೩೦ ರಿಂದ ೧೨ ಗಂಟೆ ವರಿಗೆ ವಿಷಯನಿಯಾಮಕ** ಸಮಿತಿಯ ಸಭೆಯು ಮಂಡಳದ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆಯಿತು. ಹಿಂದಿನ ದಿವಸ ತೀರ್ಮಾನಕ್ಕೆ ಬರದೆ ನಿಂತಿದ್ದ ನಿ. ಕ. ಆ. ಮಂಡಳದ ಸಂಬಂಧದ ಪ್ರಸ್ತಾವಗಳೂ, ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದ ಪ್ರಸ್ತಾವಗಳೂ ಸಹ ಚರ್ಚೆಯಾಗಿ ಮುಂದಿನ ದಿನದ ಸಭೆಗಳಿಗೆ ನಿರ್ಣಯಗಳನ್ನು ಗೊತ್ತುಮಾಡಿ ಆ ಸಮಿತಿಯ ಕಾರ್ಯಕಲಾಪಗಳನ್ನು ಮುಗಿಸಲಾಯಿತು.

ಇಲ್ಲಿಗೆ ಆ ದಿನದ ಕಾರ್ಯಗಳು ಯಥಾಕ್ರಮವಾಗಿ ಪೂರೈಸಿದವು.

---

ತಾ॥ ೩೦-೧೨-೧೯೪೧ ನೆ ಮಂಗಳವಾರ ದಿವಸ

ಬೆಳಿಗ್ಗೆ ೮ ರಿಂದ ೧೧-೩೦ ರ ವರೆಗೆ

## ಮೈಸೂರು ಸಂಸ್ಥಾನದ ಪ್ರಥಮ ಸಮ್ಮೇಳನ

**ಅಧ್ಯಕ್ಷರು—ಶ್ರೀಮಾನ್ ಭಿಷಗ್ರತ್ನ ಪಾಳ್ಯಂ ವೆಂಕಟಾಚಲಪಂಡಿತರವರು.**
ಪ್ರೊಪ್ರೈಟರ್-ಶ್ರೀ ಸೀತಾರಾಘವ ವೈದ್ಯಶಾಲಾ, ಮೈಸೂರು.

**ಪರಿಚಯಭಾಷಣ – ಡಾ॥ ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳಿಂದ**

**ಅಧ್ಯಕ್ಷಭಾಷಣ—ಸಮ್ಮೇಳನಾಧ್ಯಕ್ಷರಿಂದ.**

**ಪ್ರಸ್ತಾವಗಳು ಮತ್ತು ನಿರ್ಣಯಗಳು**--(ಹಿಂದಿನ ರಾತ್ರಿ ವಿಷಯನಿಯಾಮಕ ಸಮಿತಿಯಲ್ಲಿ ಆಗಿದ್ದ ತೀರ್ಮಾನಗಳ ಮೇಲೆ.)

**ಪುಷ್ಪಮಾಲಿಕಾ ಮತ್ತು ಉಪಸಂಹಾರಭಾಷಣ—ಸಮ್ಮೇಳನಾ ಅಧ್ಯಕ್ಷರಿಂದ.**

**ವಂದನಾಸಮರ್ಪಣೆ—ಸ್ವಾಗತಸಮಿತಿಯಿಂದ.**

---

**ತಾಜಾಕಲಂ— ಪ್ರತಿದಿನವೂ ಎಗ್ಜಿಬಿಷನ್ ಕಟ್ಟಡದಲ್ಲಿ—**

**ಬೆಳಿಗ್ಗೆ ೫—೭-೩೦ ರ ವರಿಗೆ ಅತಿಥಿಗಳಿಗೂ ಪ್ರತಿನಿಧಿಗಳಿಗೂ ಮತ್ತುಸ್ವಾಗತ ಸಮಿತಿಯ ವೈದ್ಯಸದಸ್ಯರಿಗೂ—ಸ್ನಾನ, ಆಹ್ನಿಕ, ಉಪಾಹಾರ ಇವು ಗಳಿಗೆ ತಕ್ಕ ವ್ಯವಸ್ಥೆಯೂ.**

**ಮಧ್ಯಾಹ್ನ ೧೧-೩೦—೧೨-೩೦ ರ ವರಿಗೆ ಭೋಜನವ್ಯವಸ್ಥೆಯೂ.**

„ ೨—೨-೩೦ ರ ವರಿಗೆ ಟಿ ಪಾನದ ವ್ಯವಸ್ಥೆಯೂ.

**ರಾತ್ರಿ ೭—೮ ರ ವರಿಗೆ ಭೋಜನವ್ಯವಸ್ಥೆಯೂ ಕ್ರಮಬದ್ಧವಾಗಿ ಏರ್ಪ ಟ್ಟಿದ್ದವು.**

---

ತಾ|| ೩೦-೧೨-೧೯೪೧ನೇ ಮಂಗಳವಾರ ಮಧ್ಯಾಹ್ನ

ಮಧ್ಯಾಹ್ನ ೨-೩೦ ರಿಂದ ೬-೩೦ ರ ವರಿಗೆ

## ನಿಖಿಲಕರ್ಣಾಟಕಾಯುರ್ವೇದ ಸಮ್ಮೇಳನದ ಮಹಾಸಭೆ

ನಿ. ಕ. ಆ. ಮಂಡಳದ ವರದಿ—ಮಂಡಳದ ಸೆಕ್ರೆಟರಿಯವರಾದ ಶ್ರೀ ವೈದ್ಯ ಎ. ಕೆ. ರಾಯಬಾಗ್‌ಕರ್‌ರವರಿಂದ.

ಪ್ರಸ್ತಾವಗಳ ಮತ್ತು ನಿರ್ಣಯಗಳಮೇಲಿನ ಚರ್ಚೆ ಮತ್ತು ಅಂಗೀಕಾರ-ಪ್ರತಿನಿಧಿಗಳು ಮತ್ತು ಸ್ವಾಗತವೈದ್ಯ ಸದಸ್ಯರುಗಳಿಂದ.

ಸಮ್ಮೇಳನದ ಉಪಸಂಹಾರಭಾಷಣ— ಸಮ್ಮೇಳನಾಧ್ಯಕ್ಷರಿಂದ.

ಸ್ವಾಗತಸಮಿತಿಯ ಆಭಾರಮನ್ನಣೆ—ಸಮ್ಮೇಳನದ ಜ|| ಸೆಕ್ರೆಟರಿಯವರಿಂದ.

ಪ್ರತ್ಯುತ್ತರ—ನಾನಾಭಾಗದ ಪ್ರತಿನಿಧಿಗಳಿಂದ.

ವಂದನಾಸಮರ್ಪಣೆ.

ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆ—ಸರ್ವಸದಸ್ಯರಿಂದ.

ಮಂಗಳ—ಸ್ಕೌಟುಗಳಿಂದ. ಸಮ್ಮೇಳನಗಳ ಮುಕ್ತಾಯ.



ರಾತ್ರಿ ೬-೩೦—೮ ರ ವರಿಗೆ ಯೋಗಸಾಧನೆಯ ಪ್ರದರ್ಶನ(ಆಯುರ್ವೇದ ದೃಷ್ಟ್ಯಾ). ಯೋಗಪ್ರೊಫೆಸರ್ ಬ್ರ|| ಶ್ರೀ|| ಟಿ. ಕೃಷ್ಣಮಾಚಾರ್ಯರು, ಮೈಸೂರು ರವರಿಂದ.

ರಾತ್ರಿ ೯ ರಿಂದ ೧೧ ರ ವರಿಗೆ-ವಿವಿಧವಿನೋದಾವಳಿ—ವಾಲೆಂಟರುಗಳಿಂದ.



ತಾ|| ೩೧-೧೨-೧೯೪೧ನೇ ಬುಧವಾರ ದಿವಸ

ಬೆಳಗ್ಗೆ ೮—೧೧ ರ ವರಿಗೆ ಹಿಂದಿನ ದಿನದ ಸಮ್ಮೇಳನದ ತೀರ್ಮಾನಗಳಂತೆ ನಿಯಮಿಸಲ್ಪಟ್ಟ ಉಪಸಮಿತಿಗಳು ಸೇರಿ ಆಯಾ ವಿಚಾರಗಳನ್ನು ವಿಮರ್ಶಿಸಲು ಅನುಕೂಲವಾಗಿ ಅವಕಾಶವು ಏರ್ಪಡಿಸಲ್ಪಟ್ಟಿದ್ದಿತು.



ತಾ|| ೩೦-೧೨-೪೧ ನೇ ಮಂಗಳವಾರ ದಿವಸ

ಬೆಳಿಗ್ಗೆ ೮ ರಿಂದ ೧-೩೦ ರ ವರಿಗೆ

# ಮೈಸೂರು ಸಂಸ್ಥಾನದ ಪ್ರಥಮ ಆಯುರ್ವೇದ ಸಮ್ಮೇಳನವು.

---

**ಶ್ರೀಮಾನ್ ಭಿಷಗ್ರತ್ನ ಪಾಳ್ಯದ ವೆಂಕಟಾಚಲಪಂಡಿತರವರು ಅಧ್ಯಕ್ಷತೆಯ ಪೀಠವನ್ನು ಸಭಿಕರ ಆದರಪೂರ್ವಕವಾದ ಸ್ವಾಗತದೊಡನೆ ಅಲಂಕರಿಸಿದರು.**

ಸಾಹಿತ್ಯವಿದ್ವಾನ್ ಶ್ರೀ|| ಪಿ. **ಸೂರ್ಯನಾರಾಯಣಶಾಸ್ತ್ರಿಗಳಿಂದ** ಮಂಗಳಾ ಶಾಸನವಾದನಂತರ, ಶ್ರೀ|| **ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳವರು** ಸಭೆಗೆ ಅಧ್ಯಕ್ಷರ ಪರಿಚಯಮಾಡಿಕೊಡುತ್ತಾ ಈ ಸಮ್ಮೇಳನದ ಅವಶ್ಯಕತೆಯನ್ನು ಕುರಿತು ಈರೀತಿ ಭಾಷಣಮಾಡಿದರು.—

**ಮಾನ್ಯಸಭಾಸದರೇ, ಮಹಿಳೆಯರೆ,**—ಈಗ ನಾವುಗಳು ಇಲ್ಲಿ ಸೇರಿ ನಡಿಸಲಿರುವ ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೆ ಪ್ರಾರ್ಥಿಸಲ್ಪಟ್ಟಿರುವ ಶ್ರೀಮಾನ್ ಭಿಷಗ್ರತ್ನ ಪಾಳ್ಯದ ವೆಂಕಟಾಚಲಪಂಡಿತರ ಪರಿಚಯವನ್ನು ಮೊನ್ನೆ ತಾ|| 28ರಲ್ಲಿ ಸಮ್ಮೇಳನಗಳ ಪ್ರಾರಂಭೋತ್ಸವದಲ್ಲಿ ಮಾನ್ಯಮಂತ್ರಿವರ್ಯರಾದ ಶ್ರೀ|| ಎಚ್. ಬಿ. ಗುಂಡಪ್ಪ ಗೌಡರೂ, ಸ್ವಾಗತಸಮಿತಿಯ ಅಧ್ಯಕ್ಷರಾದ ಶ್ರೀಮಾನ್ ಅಂಬ್ಲೆ ಸುಬ್ರಹ್ಮಣ್ಯಯ್ಯರ್ ರವರೂ ತಮಗೆಲ್ಲಾ ಮಾಡಿಕೊಟ್ಟು, ಈ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಬೇಕೆಂದು ತಮ್ಮಗಳ ಪರವಾಗಿ ಆದಲೇ ಪ್ರಾರ್ಥಿಸಿ, ಆ ವಿಚಾರದಲ್ಲಿ ತಾವೆಲ್ಲರೂ ಸಮ್ಮತಿ ಕೊಟ್ಟಿರುವುದರಿಂದ ಅದೇ ವಿಷಯವಾಗಿ ನಾನು ಪುನಃ ಯಾಜಮಾನ್ಯವನ್ನು ವಹಿಸುವ ಅವಶ್ಯಕತೆಯಿಲ್ಲದೆ ಅವರುಗಳ ಪ್ರಾರ್ಥನೆಯನ್ನೇ ಮುಂದುವರಿಸಿ ಈ ದಿನ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಬೇಕೆಂದು ಈಗ ಅವರನ್ನು ಮತ್ತೊಮ್ಮೆ ಕೋರುವುದುಮಾತ್ರ ನನ್ನ ಕರ್ತವ್ಯವಾಗಿದೆ.

ಜ್ಞಾನವೃದ್ಧರಾಗಿಯೂ, ವಯೋವೃದ್ಧರಾಗಿಯೂ ಪೂರ್ಣಾನುಭವಿಗಳಾಗಿಯೂ ಇರುವ ಇಂತಹ ಮಹನೀಯರ ನೇತೃತ್ವದಲ್ಲಿ ಈ ಸಮ್ಮೇಳನವು ಯಶಸ್ವಿಯಾಗಿ

ಜರುಗಲೆಂದು ಹಾರೈಸುತ್ತೇನೆ. ಇದೇ ಸಂದರ್ಭದಲ್ಲಿ ಈ ಸಮ್ಮೇಳನದ ಅವಶ್ಯಕತೆಯ ವಿಚಾರವಾಗಿ ನಾಲ್ಕು ಮಾತುಗಳನ್ನಾಡುವುದು ಈಗಿನಕರ್ತವ್ಯವೆಂದು ಭಾವಿಸುತ್ತೇನೆ.

**ಸಂಘೇಶಕ್ತಿಃ ಕಲೌಯುಗೇ**—ಎಂಬ ನುಡಿಗನುಸಾರವಾಗಿ ಆಯುರ್ವೇದೋದ್ಧಾರಕ್ಕಾಗಿ ಭರತಖಂಡದ ಪ್ರಮುಖವೈದ್ಯರು ಸೇರಿ "**ನಿಖಿಲಭಾರತಆಯುರ್ವೇದಮಹಾಮಂಡಳ**"ವೆಂಬ ಸಂಸ್ಥೆಯನ್ನು ಈಗ್ಯೆ ಸುಮಾರು 30 ವರ್ಷಗಳ ಹಿಂದೆ ಸ್ಥಾಪಿಸಿದರು. ಅದರ ಅಧಿಕಾರಕ್ಕೊಳಪಟ್ಟು ಭರತಖಂಡದ ಭಾಷಾವಾರು ಪ್ರಾಂತಗಳಲ್ಲೆಲ್ಲಾ ಪ್ರಾಂತೀಯ ಶಾಖೆಗಳೂ ಏರ್ಪಟ್ಟವು. ಆಯಾ ಪ್ರಾಂತಾಂತರ್ಗತ ಪ್ರಮುಖಭಾಗಗಳಲ್ಲಿ ಉಪಮಂಡಳಗಳು ಏರ್ಪಟ್ಟು ಯಥಾನುಕೂಲವಾಗಿ ಅಭಿವೃದ್ಧಿಕಾರ್ಯಗಳೂ ನಡೆಯುತ್ತಿವೆ.

ನಮ್ಮ ಕರ್ಣಾಟಕಪ್ರಾಂತವು ಇತರ ತೆಲಗು, ತಮಿಳು, ಮರಾಠಿ ಪ್ರಾಂತಗಳಂತಲ್ಲದೆ ಒಂದು ವೈಶೇಷ್ಯವನ್ನು ಹೊಂದಿದುದಾಗಿದೆ. ಇದು ಮದರಾಸು, ಬೊಂಬಾಯಿ, ಹೈದರಾಬಾದು ಮತ್ತು ಮೈಸೂರು ಸರ್ಕಾರಗಳ ಅಧಿಕಾರಗಳನ್ನೊಳಗೊಂಡ ಭಾಗಗಳಿಂದ ಕೂಡಿದುದಾಗಿರುವುದರಿಂದ, ಪ್ರತ್ಯೇಕ ಸಮಸ್ಯೆಗಳುದ್ಭವಿಸುವ ಪರಿಸ್ಥಿತಿಯು ಅನಿವಾರ್ಯವು. ಆದ್ದರಿಂದ ಮೈಸೂರುದೇಶದ ವೈದ್ಯರ ಹಿತಸಾಧನೆಗೆಂದು ಈಗ್ಯೆ 14 ವರ್ಷಗಳಿಂದಲೂ ರಾಜಧಾನಿಯಲ್ಲಿ ಸ್ಥಾಪಿತವಾಗಿ ಸರಕಾರದಲ್ಲಿ ರಿಜಸ್ಟರಾಗಿ ವೈದ್ಯರ ಸೇವೆಯನ್ನೂ ಪ್ರಜಾಸೇವೆಯನ್ನೂ ಮಾಡುತ್ತಿರುವ **ಮೈಸೂರು ಆಯುರ್ವೇದ ವೈದ್ಯಸಂಘದ** ಪರಿಚಯವನ್ನು ನಾನು ಈಗ ಪುನಃ ತಮ್ಮಗಳಿಗೆ ಮಾಡಿಕೊಡಬೇಕಾದ್ದು ಅನಾವಶ್ಯಕವೆಂದು ನಂಬುತ್ತೇನೆ. ಈ ಸಂಘದ ಆಶ್ರಯದಲ್ಲಿ ಮೈಸೂರು ಸಂಸ್ಥಾನದ ನಾನಾ ಭಾಗಗಳಲ್ಲೂ ಪ್ರತಿವರ್ಷವೂ ಆಯುರ್ವೇದ ಸಮ್ಮೇಳನಗಳನ್ನು ನಡೆಸಿ, ಸಮಸ್ತವೈದ್ಯರ ಮತ್ತು ವೈದ್ಯಾಭಿಮಾನಿಗಳ ಸಹಾನುಭೂತಿಯನ್ನೂ ಗಳಿಸಿ, ತದ್ವಾರ ಆಯುರ್ವೇದ ವೈದ್ಯರ ಹಿತಸಾಧನೆಗಾಗಿ ಆವಶ್ಯಕವಾದ ವಿಚಾರಗಳನ್ನೆಲ್ಲಾ ಕುಲಂಕಷವಾಗಿ ಚರ್ಚಿಸಿ, ಅಲ್ಲಿ ಆದ ತೀರ್ಮಾನಗಳನ್ನು ಮಹಾಜನಗಳಿಗೂ, ಸರ್ಕಾರಕ್ಕೂ ನಿವೇದಿಸಿಕೊಂಡು, ಅವುಗಳನ್ನು ಕಾರ್ಯರೂಪಕ್ಕೆ ತರುವ ಸರ್ವ ಪ್ರಯತ್ನಗಳನ್ನೂ ನ್ಯಾಯರೀತಿಯಲ್ಲಿ ನಿರ್ವಹಿಸಲು ಇದು ಸಹಕಾರಿಯಾದೀತೆಂಬ ಹಂಬಲಿಕೆಯಿಂದ ಈ ಸಮ್ಮೇಳನವನ್ನು ಮೊದಲು ರಾಜಧಾನಿಯಲ್ಲಿ ಸೇರಿಸಲು ಈ ವೈದ್ಯಸಂಘವು ಮಾಡಿದ ಪ್ರಯತ್ನವು ಈಗ್ಯೆ ಸಫಲವಾದುದಕ್ಕಾಗಿ ಅದಕ್ಕೆ ಸಹಾಯಮಾಡಿದ ಸರ್ವರಿಗೂ ವೈದ್ಯಸಂಘವು ಚಿರಋಣಿ

ಯಾಗಿದೆಯೆಂಬ ಅಂಶವನ್ನು ಅವರ ಈಗಿನ ಅಧ್ಯಕ್ಷನಾಗಿರುವ ನಾನು ತಮ್ಮೆಲ್ಲರಲ್ಲೂ ನಿವೇದಿಸಿಕೊಳ್ಳುವುದೇ ನನ್ನ ಮುಖ್ಯೋದ್ದೇಶವು.

ಈ ವೈದ್ಯಸಂಘವು ನಿಖಿಲ ಕರ್ಣಾಟಕಾಯುರ್ವೇದ ಮಂಡಳದ ಅಂಗ ಸಂಸ್ಥೆಯಾಗಿರಬೇಕಾದದ್ದು ನ್ಯಾಯವಾದರೂ, ಇದು ಮೊದಲಿನಿಂದಲೂ ಮೈಸೂರು ಸರ್ಕಾರದಲ್ಲಿ ರಿಜಿಷ್ಟರಾಗಿ ಸ್ವತಂತ್ರ ಸಂಸ್ಥೆಯಾಗಿಯೇ ಕೆಲಸಮಾಡುತ್ತಿರುವುದರಿಂದ, ಇದು ಸಧ್ಯಕ್ಕೆ ನಿಖಿಲ ಕರ್ಣಾಟಕಾಯುರ್ವೇದ ಮಂಡಳಕ್ಕೆ ಮಿತ್ರಸಂಸ್ಥೆ ಯಾಗಿದ್ದುಕೊಂಡು, ಪರಸ್ಪರ ಸಾಮರಸ್ಯದಿಂದ ಕಾರ್‍ಯನಿರ್ವಾಹ ಮಾಡುತ್ತಿದೆ ಯೆಂದು ತಿಳಿಸಲು ಸಂತೋಷಿಸುತ್ತೇನೆ. ನಮ್ಮ ಸಂಸ್ಥಾನದ ವೈದ್ಯರಿಗೇ ಸಂಬಂಧ ಪಟ್ಟ ಅಂಶಗಳ ಮೇಲೆ ನಿನ್ನೆ ರಾತ್ರಿ ಬಂದಿದ್ದು ಗೊತ್ತಾಗಿರುವ ಪ್ರಸ್ತಾವಗಳನ್ನು ಈದಿನ ಈ ಸಮ್ಮೇಳನಾಧ್ಯಕ್ಷರು ನಿರ್ಣಯಪಡಿಸಿ, ನಮಗೆ ಮಾರ್ಗದರ್ಶಕರಾಗು ವವರಾದ್ದರಿಂದ, ತಮ್ಮಗಳ ಅಮೌಲ್ಯವಾದ ಕಾಲವನ್ನು ಹೆಚ್ಚಾಗಿ ತೆಗೆದುಕೊ ಳ್ಳದೆ ತಮ್ಮಗಳ ಪರವಾಗಿ, ಕಾರ್‍ಯಾರಂಭ ಮಾಡಬೇಕಾಗಿ ಅಧ್ಯಕ್ಷರನ್ನು ಪ್ರಾರ್ಥಿಸು ತ್ತೇನೆ" ಎಂದು ತಮ್ಮ ಭಾಷಣವನ್ನು ಮುಗಿಸಿದರು.

ತರುವಾಯ ಮಾನ್ಯಅಧ್ಯಕ್ಷರು ತಮ್ಮ ಅಮೋಘವೂ ಅನುಭವಪೂರಿತವೂ ಆದ ಭಾಷಣದಿಂದ ತಕ್ಕ ಹಿತೋಕ್ತಿಗಳನ್ನು ಕೊಟ್ಟಮೇಲೆ ಹಿಂದಿನ ರಾತ್ರಿ ವಿಷಯ ನಿಯಾಮಕ ಸಮಿತಿಯಲ್ಲಿ ಗೊತ್ತಾಗಿದ್ದ ಪ್ರಸ್ತಾವಗಳು ಸಭೆಯಲ್ಲಿ ಮಂಡಿಸಲ್ಪಟ್ಟವು. ಅವುಗಳಮೇಲೆ ತಕ್ಕ ಚರ್ಚೆಗಳು ನಡೆದು ಅನೇಕ ತೀರ್ಮಾನಗಳು ಬಹುಮತದಿಂದ ಅಂಗೀಕೃತವಾದವು. (ಅವುಗಳನ್ನು ಮುಂದೆ ಕೊಟ್ಟಿದೆ)

ನಂತರ ಅಧ್ಯಕ್ಷರ ಉಪಸಂಹಾರಭಾಷಣವೂ, ಸ್ವಾಗತಸಮಿತಿಯಿಂದ ವಂದನಾಸಮರ್ಪಣೆಯೂ ಸಂಸ್ಥಾನದ ನಾನಾಭಾಗಗಳ ಪ್ರತಿನಿಧಿಗಳಿಂದ ಪ್ರತಿವಂದನೆಗಳೂ ನಡೆದ ಮೇಲೆ ಪುಷ್ಪಮಾಲಿಕೆಗಳ ಅರ್ಪಣೆಯೂ ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆಯೂ ನಡೆದು, ಮೈಸೂರು ಸಂಸ್ಥಾನದ ಪ್ರಥಮ ಸಮ್ಮೇಳನವು ಮುಕ್ತಾಯಗೊಂಡಿತು.

ಈ ಸಮ್ಮೇಳನಕ್ಕೆ ಸಂಬಂಧಪಟ್ಟ ಪ್ರತಿನಿಧಿಗಳ ಮತ್ತು ಸ್ವಾಗತಸಮಿತಿ ಯವರ ಒಂದು ಗ್ರೂಪ್ ಫೋಟೊ ತೆಗೆದುಕೊಳ್ಳಲ್ಪಟ್ಟಿತು.

# ಮೈಸೂರು ಸಂಸ್ಥಾನದ ಪ್ರಥಮ ಆಯುರ್ವೇದ ಸಮ್ಮೇಲನದ ಅಧ್ಯಕ್ಷರಾದ ಶ್ರೀಯುತ ಭಿಷಗ್ರತ್ನ, ಪಾಳ್ಯದ ವೆಂಕಟಾಚಲ ಪಂಡಿತರವರ ಭಾಷಣವು.

**30-12-41.**

---

ಶ್ರೀಯುತ ಸ್ವಾಗತಾಧ್ಯಕ್ಷರೇ, ಮಾನನೀಯರೇ, ಮಹನೀಯರೇ, ಮತ್ತು ವೈದ್ಯ ಸಹೋದರರೇ,

ಈ ಮಹಾಸಮ್ಮೇಲನದ ಅಧ್ಯಕ್ಷತೆಯನ್ನು ವಹಿಸುವ ಗೌರವವನ್ನು ನನಗೆ ವಹಿಸಿದ್ದಕ್ಕಾಗಿ ನಾನು ತಮ್ಮೆಲ್ಲರಿಗೆ ಧನ್ಯವಾದವನ್ನು ಅರ್ಪಿಸುತ್ತೇನೆ. ನಾನು ವೃದ್ಧನು, ಅಶಕ್ತನು, ತಮ್ಮೆಲ್ಲರ ಸಹಾಯಬಲದಿಂದಲೇ ಆಯುರ್ವೇದ ವೈದ್ಯದ ಏಳಿಗೆಗೆ ನನ್ನ ಸೇವೆಯನ್ನು ಸಲ್ಲಿಸಬಹುದೆನ್ನುವ ಧೈರ್ಯದಿಂದ ಈ ಸ್ಥಾನದಲ್ಲಿ ನಿಂತಿರುವೆನು. ತಮ್ಮ ಆಜ್ಞೆಯನ್ನು ಮೀರಲಾರದೆ ಶಿರಸಾವಹಿಸಿರುವೆನು.

ಆಯುರ್ವೇದವು ವೇದಗಳ ಅಂಗವಾಗಿದೆ, ಋಷಿವರ್ಗದವರಿಂದ ಉಪದೇಶಿಸಲ್ಪಟ್ಟುದು. ಇದು ಅತ್ಯಂತ ಪ್ರಾಚೀನವಾದುದು, ಅಮೂಲ್ಯವಾದುದು, ಎಲ್ಲಾ ಬಗೆಯ ವೈದ್ಯಗಳಿಗೂ ಮಾತೃಸ್ಥಾನವನ್ನು ಅಲಂಕರಿಸಿರುವುದು. ಅಗ್ಗವಾಗಿ ಜನಗಳಿಗೆ ಮಹದುಪಕಾರವನ್ನು ಮಾಡುತ್ತಲಿರುವ ಮಹೋನ್ನತ ಶಾಸ್ತ್ರವಾಗಿದೆ. ನಮ್ಮ ದೇಶದಲ್ಲಿ ರೋಗಿಗಳ ಸಂಖ್ಯೆಯಲ್ಲಿ ಮುಕ್ಕಾಲುಪಾಲಿಗಿಂತಲೂ ಹೆಚ್ಚಾಗಿ ಆಯುರ್ವೇದ ವೈದ್ಯದಿಂದಲೇ ಅನುಕೂಲವನ್ನು ಪಡೆಯುತ್ತಿರುವರೆಂದರೆ ಅತಿಶಯೋಕ್ತಿಯಾಗಲಾರದು. ರೋಗವು ಬಂದವೇಳೆ ಚಿಕಿತ್ಸೆಯನ್ನು ಮಾಡಿಕೊಳ್ಳುವುದಕ್ಕಿಂತ ರೋಗವು ಬಾರದಂತೆ ನೋಡಿಕೊಳ್ಳುವ ಉಪಾಯಗಳ ಕಡೆಗೇ ಹೆಚ್ಚಾಗಿ ಗಮನಕೊಟ್ಟಿರುವ ಪ್ರಥಮ ಶಾಸ್ತ್ರವಿದು.

ನಿಖಿಲಭಾರತ ಆಯುರ್ವೇದ ವೈದ್ಯಸಮ್ಮೇಲನದವರೂ, ಈಗ ನಾವೆಲ್ಲರೂ ಗೌರವದಿಂದಲೂ ಆದರದಿಂದಲೂ ಜೊತೆಗೂಡಿ ಸಂತೋಷಿಸುತ್ತಲಿರುವ ನಿಖಿಲ ಕರ್ಣಾಟಕ ಆಯುರ್ವೇದ ವೈದ್ಯಸಮ್ಮೇಲನದವರೂ ಆಯುರ್ವೇದದ ಅಭಿವೃದ್ಧಿಗಾಗಿ ವಿಶೇಷವಾಗಿ ಶ್ರಮವಹಿಸುತ್ತಿರುವುದಕ್ಕಾಗಿ ನಾನು ಆ ಮಹಿತ ಸಂಸ್ಥೆ

ಗಳನ್ನು ಕೃತಜ್ಞತೆಯಿಂದ ವಂದಿಸುತ್ತೇನೆ. ಆದರೆ ನಮ್ಮ ಮೈಸೂರು ಸಂಸ್ಥಾನದ ಆಯುರ್ವೇದ ವೈದ್ಯವಿದ್ವಜ್ಜನರು ಮೇಲಿನ ಸಂಸ್ಥೆಗಳೊಡನೆ ಇನ್ನೂ ಹೆಚ್ಚಾಗಿ ಸಹಕರಿಸಿ ಕೆಲಸ ಮಾಡಲೂ, ನಮ್ಮ ಸಂಸ್ಥಾನದಲ್ಲಿಯೇ ಇನ್ನೂ ಅಧಿಕವಾಗಿ ಆಯುರ್ವೇದೋದ್ಧಾರ ಕಾರ್ಯವನ್ನು ಕೈಗೊಳ್ಳಲೂ ಈ " **ಮೈಸೂರು ಸಂಸ್ಥಾನದ ಆಯುರ್ವೇದ ವೈದ್ಯಸಮ್ಮೇಲನವು** " ಬಹಳ ಉಪಕಾರಿಯಾಗಿದೆ. ನಮ್ಮ ಸಂಸ್ಥಾನದ ವೈದ್ಯ ಮಹಾಶಯರೆಲ್ಲರೂ ಈಸಮ್ಮೇಲನದ ಸದಸ್ಯರಾಗಬೇಕೆಂದೂ, ಆಯುರ್ವೇದಾಭಿಮಾನಿಗಳು ಸಹಕರಿಸಬೇಕೆಂದೂ ವಿನಯದಿಂದ ಪ್ರಾರ್ಥಿಸುತ್ತೇನೆ. ಈ ಸಮ್ಮೇಲನದ ಪ್ರಥಮ ಕಾರ್ಯನಿರ್ವಾಹಕ ಸಮಿತಿಯು ಮೈಸೂರು ರಾಜಧಾನಿಯಲ್ಲಿರಬೇಕೆಂದೂ, ಪ್ರತಿ ಡಿಸ್ಟ್ರಿಕ್ಟಿನಲ್ಲಿಯೂ ಒಂದು ಉಪಸಮಿತಿಯು ಏರ್ಪಡಬೇಕೆಂದೂ. ಪ್ರತಿ ಸಂವತ್ಸರವೂ ಈ ಸಮ್ಮೇಲನವು ಒಂದೊಂದು ಡಿಸ್ಟ್ರಿಕ್ಟಿನಲ್ಲಿ ನಡೆಯಬೇಕೆಂದೂ ನನ್ನ ಹಾರೈಕೆ.

ಈ ಪ್ರಥಮ ಸಮ್ಮೇಲನವನ್ನು ದೀರ್ಘವಾಗಿ ನಡೆಯಿಸಲು ಕಾಲಾವಕಾಶವಿಲ್ಲದಿರುವುದರಿಂದ ನನ್ನ ಮನಸ್ಸಿನಲ್ಲಿ ಉಕ್ಕಿ ಬಂದ ಕೆಲವು ಅಭಿಪ್ರಾಯಗಳನ್ನೆಲ್ಲಾ ಹಾಗೆಯೇ ತಮ್ಮಲ್ಲಿ ನಿವೇದಿಸಿಕೊಳ್ಳುತ್ತೇನೆ.

ಆಯುರ್ವೇದಶಾಸ್ತ್ರದಲ್ಲಿ ಹೊಸ ಪರಿಶೋಧನೆಗಳಾಗಬೇಕು. ವೈದ್ಯರಲ್ಲಿ ಸಂಘಶಕ್ತಿಯು ಹೆಚ್ಚಬೇಕು. ನಮ್ಮ ಭೇದಭಾವಗಳು ಮಾಯವಾಗಬೇಕು. ಸರ್ಕಾರದವರೂ ಮತ್ತು ಇತರ ಪ್ರಜಾ ಸಂಸ್ಥೆಗಳವರೂ ಸಂಸ್ಥಾನದ ಆಯುರ್ವೇದ ವೈದ್ಯಸಮ್ಮೇಲನದ ಅಭಿಪ್ರಾಯಗಳನ್ನು ಯಾವಾಗಲೂ ಗಳಿಸುವಂತೆಯೂ ಗೌರವಿಸುವಂತೆಯೂ ಆಗುವ ಭರವಸೆಯನ್ನು ನಮ್ಮ ಕೆಲಸದ ಶ್ರದ್ಧೆಯಿಂದ ಸಂಪಾದಿಸಬೇಕು. ಆಯುರ್ವೇದ ವೈದ್ಯಸಂಸ್ಥೆಗಳಿಗೆ ಪಾಶ್ಚಾತ್ಯ ವೈದ್ಯರನ್ನು ತುಂಬುವುದೂ, ಆಯುರ್ವೇದವನ್ನು ಅಭ್ಯಾಸಮಾಡದ ಅವರಿಂದ ನಾವು ಮೇಲನ್ನು ಕೋರುವಂತೆ ಆಗಿರುವುದೂ ಹಿತಕರವಲ್ಲ. ಇದನ್ನು ಸರ್ಕಾರದವರು ಮನಗಾಣಬೇಕು. ಕಾಲೇಜುಗಳಲ್ಲಿ ಓದಿ ಉತ್ತೀರ್ಣರಾದ ಪಂಡಿತರೂ ವಂಶಪಾರಂಪರ್ಯವಾಗಿ ಮಹತ್ತಾದ ಸೇವೆಯನ್ನು ಬಹುಕಾಲದಿಂದ ಸಲ್ಲಿಸುತ್ತಲಿರುವ ವೈದ್ಯಮಹಾಶಯರೂ ಅಂತಸ್ತಿನಲ್ಲಿ ಬೇರೆಯಾಗದೆ ಭ್ರಾತೃಭಾವದಿಂದ ಒಂದುಗೂಡಿ ಶ್ರಮಿಸಬೇಕು, ಎಲ್ಲರೂ ಜ್ಞಾನಭಂಡಾರವನ್ನು ಹೆಚ್ಚಿಸಿಕೊಳ್ಳಬೇಕು. ಪಾಶ್ಚಾತ್ಯವೈದ್ಯರಿಗೆ ಸಲ್ಲುವ ಸ್ಥಾನಮಾನಗಳು ಆಯುರ್ವೇದ ವೈದ್ಯರಿಗೂ ಸಲ್ಲು

ವಂತೆ ಯತ್ನಿಸಬೇಕು. ಯಾವಯಾವ ಮಾರ್ಗಗಳಲ್ಲಿ ರೋಗಿಗಳಿಗೆ ಉಪಕಾರವಾಗುವ ಹೊಸ ವಿಷಯಗಳು ದೊರೆತರೂ ಅವನ್ನೆಲ್ಲಾ ಸಂಗ್ರಹಿಸಿ ಉಪಯೋಗಿಸುವ ಜ್ಞಾನವನ್ನು ಪಡೆಯಬೇಕು. ಶ್ರೀಮಂತರ ಸಹಾಯವನ್ನು ಗಳಿಸಬೇಕು. ಆಯುರ್ವೇದದ ವಿಚಾರದಲ್ಲಿ ವೃದ್ಧವೈದ್ಯರ ಅನುಭವಗಳನ್ನೊಳಗೊಂಡ ಲೇಖನಗಳು ಕನ್ನಡಭಾಷೆಯಲ್ಲಿ ಪ್ರಚಾರವಾಗಬೇಕು, ನಿಖಿಲಕರ್ಣಾಟಕ ಆಯುರ್ವೇದ ಸಮ್ಮೇಲನದ "ಧನ್ವಂತರಿ" ಪತ್ರಿಕೆಯ ಸೇವೆಯು ಪ್ರಶಂಸನೀಯವಾಗಿದೆ. ಇದರ ಉಪಯೋಗವನ್ನು ಇನ್ನೂ ಹೆಚ್ಚಿಸುವ ಪ್ರಯತ್ನವಾಗಬೇಕು. ನಮ್ಮ ಸಂಸ್ಥಾನದ ಸಾವಿರಾರು ಮಂದಿ ವೈದ್ಯ ಮಹಾಶಯರು ಈ ದಿವಸವೇ ಸಮ್ಮೇಲನದ ಸದಸ್ಯತ್ವವನ್ನು ಅಂಗೀಕರಿಸಿ ಒಬ್ಬೊಬ್ಬರು ಒಂದು ವರ್ಷದ ಚಂದಾ ಮೂರು ರೂಪಾಯಿಗಳನ್ನಾದರೂ ಸಲ್ಲಿಸಿದರೆ ಒಂದೇ ವರ್ಷದಲ್ಲಿ ಮಹದುಪಕಾರವಾದ ಕಾರ್ಯಗಳನ್ನು ಮಾಡಬಹುದೆಂದು ಭರವಸೆ ಕೊಡಬಲ್ಲೆನು. ಪ್ರಚಾರೋಪನ್ಯಾಸಗಳಾಗಬೇಕು, ಅತ್ಯವಶ್ಯಕವಾಗಿ ನಮ್ಮ ಮಹಿಳೆಯರು ಸಾಮಾನ್ಯರೋಗಗಳಿಗೆ ಸುಲಭ ಚಿಕಿತ್ಸೆಗಳನ್ನು ತಿಳಿದುಕೊಳ್ಳುವಂತೆ ಕಾರ್ಯಸಾಧನೆಯಾಗಬೇಕು. ಮಹಿಳಾ ಸಮಾಜಗಳವರು ಈ ಕಡೆಗೆ ಗಮನ ಕೊಟ್ಟರೆ ಬಹಳ ಅನುಕೂಲ. ವೈದ್ಯರು ತಮ್ಮ ಅನುಭವದ ಉತ್ತಮ ಯೋಗಗಳನ್ನು ಇತರ ವೈದ್ಯರಿಗಾದರೂ ಬಹಿರಂಗಪಡಿಸಿದರೆ ಬಹಳ ಉಪಕಾರವಾಗುವುದು. ಅವರ ಜೀವನದ ಯೋಗಗಳು ಅವರವರ ಕುಟುಂಬದಲ್ಲಿಯೇ ಇರಬಹುದು. ಕರ್ಣಾಟಕಕ್ಕೆಲ್ಲಾ ಒಂದು ಮುಖ್ಯ ಸಂಸ್ಥೆಯನ್ನು ಅಂಗೀಕರಿಸಿ ಅದರ ಅಂಗಗಳಾಗಿ ಮಿಕ್ಕ ಎಲ್ಲ ಸಂಸ್ಥೆಗಳೂ ಒಂದುಗೂಡಿ ಕೆಲಸ ಮಾಡುವುದು ಅವಶ್ಯಕ. ಆದರೂ ಸರ್ಕಾರದ ರಚನೆಗಳು ಬೇರೆಬೇರೆಯಾಗಿರುವುದರಿಂದ ದೇಶೀಯ ಸಂಸ್ಥಾನಗಳಲ್ಲಿ ಮೂಲತತ್ವಕ್ಕೆ ವಿರೋಧವಿಲ್ಲದಂತೆ, ಪ್ರತ್ಯೇಕ ಸಮ್ಮೇಲನಗಳು ಆಗಲೇಬೇಕು, ಸಮ್ಮೇಲನಗಳು ಒಂದಕ್ಕೊಂದಕ್ಕೆ ವಿರೋಧವಿಲ್ಲದೆ ವರ್ತಿಸಬೇಕು. ಆಯುರ್ವೇದದಲ್ಲಿ ಅಡಕವಾಗಿರುವಂತೆ ದಿನಚರ್ಯೆ, ಆಹಾರ ಪದಾರ್ಥಗಳ ಗುಣ ಇತ್ಯಾದಿಗಳನ್ನು ಕನ್ನಡಿಗರಲ್ಲಿ ಹರಡಬೇಕು. ಆಯುರ್ವೇದದ ಯೋಗಗಳಲ್ಲಿ ಪದಾರ್ಥಗಳ ಪ್ರಮಾಣವು ರೂಪುಗೊಳ್ಳಬೇಕು. ವನಸ್ಪತಿಗಳ ವಿಚಾರದಲ್ಲಿ ಸಂಶೋಧನೆಯಾಗಬೇಕು. ಕನ್ನಡದಲ್ಲಿ ಉತ್ತಮ ಕೋಶಗಳನ್ನು ಬರೆಯಿಸಬೇಕು. ಕೆಲವು ಮುಖ್ಯ ಗ್ರಂಥಗಳನ್ನು, ಎಂದರೆ ಕಾಲೇಜುಗಳಲ್ಲಿ ಓದಿ ತೇರ್ಗಡೆಯಾಗದವರಿಗೆ ಉಪಯುಕ್ತವಾದುವುಗಳನ್ನಾದರೂ, ಶೋಧಿಸಿ ಪಂಡಿತರುಗಳಿಂದ ಕನ್ನಡಕ್ಕೆ ಭಾಷಾಂತರ ಮಾಡಿಸುವುದು ಪ್ರಥಮ ಕಾರ್ಯ. ನಮ್ಮ

ಪೂರ್ವಾಚಾರ್ಯರುಗಳ ಮತ್ತು ಹಿಂದಿನ ಗ್ರಂಥಗಳ ಕಾಲ, ಚರಿತ್ರೆ ಮುಂತಾದುವು ಗಳನ್ನು ಆಧಾರ ಸಹಿತ ಬರೆಯಿಸಬೇಕು. ಹೊರಗಿನ ವೈದ್ಯಸಾಮಗ್ರಿಗಳು ಬರುವುದು ಸದ್ಯಕ್ಕೆ ನಿಂತುಹೋಗಿದೆ. ನಮ್ಮ ದೇಶದ ವರ್ತಕರು ನಮ್ಮ ದೇಶದ ಸರಕುಗಳಿಗೇ ದರವನ್ನು ಬಹಳ ಮಟ್ಟಿಗೆ ಹೆಚ್ಚಿಸಿದಾರೆ. ನಾವು ನಮ್ಮ ದೇಶಕ್ಕೆ, ಈಗ ನಮ್ಮ ವೈದ್ಯದಿಂದಲೇ ಬಹಳ ಸಹಾಯಮಾಡಬೇಕಾಗಿದೆ. ಸುಲಭ ಚಿಕಿತ್ಸೆಗಳನ್ನು ಪರಿಶೋಧಿಸಬೇಕು. ಸರ್ಕಾರದವರ ಸಹಾಯವನ್ನು ಪ್ರಾರ್ಥಿಸಬೇಕು. ನಾವೆಲ್ಲರೂ ಆಸಕ್ತಿಯಿಂದ ಕೆಲಸಮಾಡಬೇಕೆಂದು ನನ್ನ ಪ್ರಾರ್ಥನೆ.

ಹಿಂದುಸ್ಥಾನದಲ್ಲಿ ಹಳ್ಳಿಯ ವಾಸಸ್ಥರ ದುಃಸ್ಥಿತಿಗೆ ಕಾರಣಗಳಲ್ಲಿ ಮಲೇರಿಯಾ ರೋಗದ ಕರಾಳ ಹಾವಳಿಯೇ ಬಹುಮುಖ್ಯವಾದುದೆಂದು ತಿಳಿದು ಬಂದಿದೆ. ಹಿಂದುಸ್ಥಾನದಲ್ಲಿ ವರ್ಷಂಪ್ರತಿ ಸುಮಾರು ಇಪ್ಪತ್ತು ಲಕ್ಷ ಜನರು ಈ ರೋಗದಿಂದ ಹತರಾಗುತ್ತಲಿರುವುದೂ, ನಮ್ಮ ಮೈಸೂರು ಸಂಸ್ಥಾನದಲ್ಲೇ ಕಳೆದ ವರ್ಷ ದಿನ ಒಂದಕ್ಕೆ ಸರಾಸರಿ ನೂರು ಜನರಷ್ಟು ಈ ರೋಗಕ್ಕೆ ತುತ್ತಾದರೆಂಬುದೂ, ಈ ರೋಗವು ಕಾಡುವುದರಿಂದ ಹಿಂದೂಸ್ಥಾನದ ಜನಸಮುದಾಯಕ್ಕೆ ಪ್ರತಿವರ್ಷವೂ ಸುಮಾರು ಐವತ್ತು ಕೋಟಿ ರೂಪಾಯಿಗಳಷ್ಟು ಸಂಪಾದನೆಯು ನಷ್ಟವಾಗುತ್ತಿರುವುದೆಂಬುದೂ ವೈದ್ಯರಾದ ನಮ್ಮೆಲ್ಲರ ಮನಸ್ಸನ್ನು ಬಹಳ ನೋಯಿಸುತ್ತಿದೆ. ಇದು ಬಹಳ ಪುರಾತನವಾದ ರೋಗ. ಆಯುರ್ವೇದದಲ್ಲಿ ಈ ರೋಗವನ್ನು ಪ್ರತಿಬಂಧಿಸಲೂ ನಿವೃತ್ತಿಮಾಡಲೂ ಬಹಳ ಸಲಕರಣೆಗಳಿವೆ. ವೈದ್ಯರೇನೋ ಅಲ್ಲಲ್ಲಿ ಬಹಳ ಉಪಕಾರಮಾಡುತ್ತಲಿದಾರೆ. ನಮ್ಮ ಈ ಸಮ್ಮೇಲನದಲ್ಲಿ ತಕ್ಷಣವೇ ಈ ರೋಗನಿವಾರಣೆಯಲ್ಲಿ ವಿಶೇಷ ಅನುಭವವಿದೆ ಎಂದು ಮುಂದೆ ಬರುವ ವೈದ್ಯಮಹಾಶಯರ ಒಂದು ಪ್ರತ್ಯೇಕ ಉಪಸಮಿತಿಯನ್ನಾದರೂ ನೇಮಿಸಿ ಈ ರೋಗಕ್ಕೆ ತಕ್ಕ ಪ್ರತೀಕಾರ ಮಾರ್ಗಗಳನ್ನು ಇನ್ನೂ ಹೆಚ್ಚಾಗಿ ನಿರ್ಧರಿಸಿ ಸರ್ಕಾರದವರಲ್ಲಿ ನಿವೇದಿಸಿ ಸಹಾಯವನ್ನು ಪಡೆದು ಕಾರ್ಯಮಾಡುವುದು ಅತ್ಯಗತ್ಯವಾಗಿದೆ. ಈಗಾಗಲೇ ಮೈಸೂರು ರಾಜಧಾನಿಯ ನಗರದಲ್ಲಿ ಕೆಲವು ಪಂಡಿತರು ಈ ಮಹತ್ಕಾರ್ಯಕ್ಕೆ ಪ್ರಾರಂಭಮಾಡಿರುವರೆಂಬುವುದು ಸ್ತುತ್ಯವಾಗಿದೆ.

ಮೈಸೂರು ಸಂಸ್ಥಾನದ ಘನಸರ್ಕಾರದವರು ಜನರಿಗೆ ವೈದ್ಯ ಸಹಾಯ ಮಾಡುವ ಮಹತ್ಕಾರ್ಯದಲ್ಲಿ ಪ್ರಥಮ ಸ್ಥಾನವನ್ನು ಅಲಂಕರಿಸುವರೆಂದೇ ಕೃತಜ್ಞತೆಯಿಂದ ಹೆಮ್ಮೆಪಡಬಹುದಾಗಿದೆ. ನಮ್ಮ ಸುತ್ತಮುತ್ತಲಿರುವ ನಾಲ್ಕಾರು ಮುಖ್ಯ

ಸರ್ಕಾರಗಳು ವೈದ್ಯಕ್ಕಾಗಿ ಮಾಡುವ ಸಹಾಯದೊಡನೆ ಹೋಲಿಸಿದರೆ ಇದು ವ್ಯಕ್ತವಾಗುತ್ತದೆ. ಮದ್ರಾಸು ಆಧಿಪತ್ಯದಲ್ಲಿ 126 ಚದರ ಮೈಲಿಗಳ 41217 ಪ್ರಜಾ ಸಂಖ್ಯೆಗೆ ಒಂದು ವೈದ್ಯಸಹಾಯ ಸಂಸ್ಥೆ ಇದೆ, ಜನಸಂಖ್ಯೆಯ ಪ್ರತಿ ತಲೆಗೆ 2 ಆಣೆ 6 ಪೈಗಳು ಖರ್ಚಾಗಿದೆ. ಬೊಂಬಾಯಿಸಲ್ಲಿ 180 ಚದರ ಮೈಲಿಗಳಿಗೆ 41940 ಜನಸಂಖ್ಯೆಗೆ ಒಂದು ಸಂಸ್ಥೆ; ಪ್ರತಿ ತಲೆಗೆ ಖರ್ಚು 4 ಆಣೆ 9 ಪೈಗಳು ಬಂಗಾಳಾದಲ್ಲಿ 540 ಚದರ ಮೈಲಿಗೆ 34585 ಪ್ರಜಾಸಂಖ್ಯೆಗೆ ಒಂದು ಸಂಸ್ಥೆ; ಪ್ರತಿ ತಲೆಗೆ ಖರ್ಚು 2 ಆಣೆ 1 ಪೈ, ಸಂಯುಕ್ತಸಂಸ್ಥಾನದಲ್ಲಿ 178 ಚದರಮೈಲಿಗಳಿಗೆ 81087 ಪ್ರಜಾಸಂಖ್ಯೆಗೆ ಒಂದು ಸಂಸ್ಥೆ; ಖರ್ಚು ಪ್ರತಿ ತಲೆಗೆ 1 ಆಣೆ 3 ಪೈ. ನಮ್ಮ ಮೈಸೂರು ಸಂಸ್ಥಾನದಲ್ಲಾದರೋ 94 ಚದರ ಮೈಲಿಗಳಿಗೆ 20653 ಪ್ರಜಾಸಂಖ್ಯೆಗೆ ಒಂದು ಸಂಸ್ಥೆ ಇದೆ: ಪ್ರತಿ ತಲೆಗೂ ಖರ್ಚು 4 ಆಣೆ 6 ಪೈಗಳಾಗಿದೆ. (ಈ ಸಂಖ್ಯೆಗಳು ಸುಮಾರಾಗಿ 1939 ನೇ ಇಸವಿಯ ವರದಿಗಳಿಂದ ಆರಿಸಲ್ಪಟ್ಟಿವೆ.) ಇದಕ್ಕಾಗಿ ನಾವು ನಮ್ಮ ಘನಸರ್ಕಾರವನ್ನು ವಂದಿಸಿ ಆಯುರ್ವೇದ ವೈದ್ಯದ ಕಡೆಗೆ ವೈದ್ಯ ಇಲಾಖೆಯ ಖರ್ಚಿನಲ್ಲಿ ದಯೆಯಿಟ್ಟು ಇನ್ನೂ ಬಹಳ ಹೆಚ್ಚಿನ ಅಂಶವನ್ನು ಮೀಸಲಾಗಿಡಬೇಕೆಂದು ಪ್ರಾರ್ಥಿಸಲೇ ಬೇಕಾಗಿದೆ, ವೈದ್ಯಖಾತೆಯ ಅಮಾತ್ಯ ಶ್ರೇಷ್ಠರಾದ ಶ್ರೀಯುತ ಹೆಚ್. ಬಿ. ಗುಂಡಪ್ಪಗೌಡ ಮಹಾಶಯರು ಆಯುರ್ವೇದಾಭಿಮಾನಿಗಳಾಗಿರುವುದು ನಮ್ಮ ಸುದೈವ. ಈ ಮಂತ್ರಿವರ್ಯರು ದಯೆಯಿಟ್ಟು ನಮ್ಮ ಸಂಸ್ಥಾನದ ಆಯುರ್ವೇದ ವೈದ್ಯಸಮ್ಮೇಲನದ ಸಲಹೆಗಳನ್ನು ಮುಖ್ಯವಾಗಿ ಮನ್ನಿಸಿ ಬಹಳವಾಗಿ ಆಗಬೇಕಾಗಿರುವ ಸಹಾಯವನ್ನು ಕ್ಷಿಪ್ರದಲ್ಲಿಯೇ ನೀಡಬೇಕಾಗಿ ಪ್ರಾರ್ಥಿಸುತ್ತೇನೆ.

ಕರ್ಣಾಟಕ ಸಿಂಹಾಸನಾಧೀಶ್ವರರಾದ ಮೈಸೂರು ಮಹೀಪತಿಗಳು ಆಯುರ್ವೇದ ವೈದ್ಯಕ್ಕೆ ವಿಶೇಷವಾಗಿ ಮನ್ನಣೆಯಿತ್ತು ಆಚಂದ್ರಾರ್ಕವಾದ ಕೀರ್ತಿಯನ್ನು ಬೆಳಗಿಸುತ್ತ ಬಂದಿರುವರು. ನಮ್ಮನ್ನಾಳುವ ಮಹಾಪ್ರಭುಗಳಾದ **ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂ**ರವರೂ, ರಾಜಮನೆತನದ ಮಹಾವ್ಯಕ್ತಿಗಳೂ ಆಯುರ್ವೇದ ವೈದ್ಯವನ್ನು ಸನ್ಮಾನಿಸುತ್ತಲಿರುವುದು ನಮ್ಮ ಮಾದರಿಯ ಸಂಸ್ಥಾನದ ಆಯುರ್ವೇದ ವೈದ್ಯರ ಭಾಗ್ಯೋದಯವಾಗಿದೆ. ಈ ಮಹದನುಗ್ರಹಕ್ಕೆ ಅಖಿಲ ಕರ್ಣಾಟಕ ಆಯುರ್ವೇದ ವೈದ್ಯಸಮ್ಮೇಲನದ ಅಧ್ಯಕ್ಷರಾದ ಶ್ರೀಯುತ ಆಯುರ್ವೇದ ತೀರ್ಥ ಆದ್ಯ ಅನಂತಾಚಾರ್ಯರವರು ಟೀಕಿಸಿರುವ ವಾಗ್ಭಟ ಗ್ರಂಥವು ಮಹಾಸ್ವಾಮಿಯವರಿಗೆ ಅಪ್ಪಣೆ

ಪಡೆದು ಅರ್ಪಿತವಾಗಿರುವುದೂ ಆಚಾರ್ಯರವರಿಗೆ ಸನ್ಮಾನವಾಗಿರುವುದೂ ಈಚಿನ ಉದಾಹರಣೆಯಾಗಿದೆ. ಮೈಸೂರಿನ ಸುಪ್ರಸಿದ್ಧ ವೈದ್ಯರೂ ನಿವೃತ್ತ ಇಂಜನೀಯರೂ ಆದ ಆಯುರ್ವೇದೋಪಾಧ್ಯಾಯ. ವೈದ್ಯವಲ್ಲಭ, ಎಂ. ಜಿ. ಶಿಂಗ್ರೈಯ್ಯಂಗಾರ್ಯರವರು ರಚಿಸಿರುವ "ಆಯುರ್ವೇದದ ಸುಲಭ ಚಿಕಿತ್ಸೆಗಳು" ಎಂಬ ಗ್ರಂಥವು ಮೈಸೂರು ಸಂಸ್ಥಾನದ **ಪೂಜ್ಯ ಶ್ರೀಮನ್ಮಹಾರಾಣಿ ಮಹಾಮಾತೃಶ್ರೀ ಪ್ರತಾಪಕುಮಾರಿ ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನಂಗಳವರಿಗೆ** ಅಪ್ಪಣೆ ಪಡೆದು ರಾಜಭಕ್ತಿಪುರಸ್ಸರವಾಗಿ ಅರ್ಪಿತವಾಗಿರುವುದೂ, ಗ್ರಂಥದಲ್ಲಿ **ಮಹಾಮಾತೃಶ್ರೀಯವರ** ಭಾವಚಿತ್ರವು ಸಂಸ್ಥಾನದ ಪ್ರಜೆಗಳಿಂದ ಆರಾಧಿಸಲ್ಪಡುವಂತೆ ಕಂಗೊಳಿಸುತ್ತಲಿರುವುದೂ, ಗ್ರಂಥಕ್ಕೆ ಸಹಕರಿಸಿರುವ ಪಂಡಿತರುಗಳಾದ ಗ್ರಂಥಕರ್ತರೂ, ನಾನೂ, ಮೈಸೂರಿನ ಪ್ರಸಿದ್ಧ ವೈದ್ಯರಾದ ಆಯುರ್ವೇದೋಪಾಧ್ಯಾಯ, ರಾಜವೈದ್ಯ, ಪಿ. ಹೆಚ್. ಚಂದ್ರಭಾನ್ ಸಿಂಗರವರೂ ಸನ್ಮಾನಿತರಾಗಿರುವುದೂ ನೆನ್ನೆ ನೆನ್ನೆಯ ನಿದರ್ಶನವಾಗಿದೆ. **ಮಹಾಪ್ರಭುವರ್ಯರವರಿಗೆ** ಈ ಸಮ್ಮೇಲನವು ರಾಜಭಕ್ತಿಪೂರಿತವಾಗಿ ವಂದಿಸುತ್ತಲಿದೆ.

ಆಯುರ್ವೇದಾಧಿದೇವನಾದ **ಶ್ರೀ ಧನ್ವಂತರಿಮಹಾದೇವನು** ನಮ್ಮ ಸಂಸ್ಥಾನದ ರಾಜಮನೆತನದವರಿಗೂ, ಆಯುರ್ವೇದ ವೈದ್ಯವರ್ಯರಾದ ಮತ್ತು ವೈದ್ಯಾಭಿಮಾನಿಗಳಾದ ತಮ್ಮೆಲ್ಲರಿಗೂ ಸಕಲ ಪ್ರಜೆಗಳಿಗೂ ಸನ್ಮಂಗಳವನ್ನು ದಯೆಪಾಲಿಸುತ್ತಿರಲೆಂದು ಪ್ರಾರ್ಥಿಸಿ, ನನಗೆ ಈ ಸ್ಥಾನದಿಂದ ತಮ್ಮೆಲ್ಲರನ್ನು ಗೌರವದಿಂದ ಸಂಬೋಧಿಸುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ಇನ್ನೊಂದಾವರ್ತಿ ಸ್ವಾಗತ ಮಂಡಲವನ್ನೂ ತಮ್ಮೆಲ್ಲರನ್ನೂ ವಂದಿಸಿ ಈ ಭಾಷಣವನ್ನು ಮುಗಿಸಲು ತಮ್ಮ ಅಪ್ಪಣೆಯನ್ನು ಕೋರುತ್ತೇನೆ.

---

ಶ್ರೀ ಸೀತಾರಾಘವ ಪವರ್ ಪ್ರೆಸ್, ಮೈಸೂರು.

ನಿಖಿಲಕರ್ಣಾಟಕದ ೧೨ನೆ ಮತ್ತು ಮೈಸೂರು ಸಂಸ್ಥಾನದ ೧ನೆ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941



## 1941ನೆ ಡಿಸೆಂಬರ್ 30ನೆ ತಾರೀಖಿನಲ್ಲಿ ಮೈಸೂರಲ್ಲಿ ನಡೆದ ಮೈಸೂರು ಸಂಸ್ಥಾನದ ಪ್ರಥಮ ಆಯುರ್ವೇದ ಸಮ್ಮೇಳನದಲ್ಲಾದ

# ನಿರ್ಣಯಗಳು.

---

1. ಮೈಸೂರು ಸಂಸ್ಥಾನದ ಸುಪ್ರಸಿದ್ಧ ವೈದ್ಯರಾಗಿದ್ದ ಈ ಕೆಳಗೆ ಕಾಣಿಸುವ ಮಹಾಶಯರುಗಳು ತಮ್ಮ ಮಧ್ಯ ವಯಸ್ಸಿನಲ್ಲೇ ವಿಧಿವಶರಾದ್ದರಿಂದ ಮೈಸೂರು ವೈದ್ಯವೃಂದಕ್ಕೆ ಅಪಾರ ನಷ್ಟವಾಯಿತೆಂದು ಈ ಸಭೆಯು ತನ್ನ ಅನುತಾಪವನ್ನು ಸೂಚಿಸುತ್ತದೆ. ಮತ್ತು ಅವರುಗಳ ಆತ್ಮಕ್ಕೆ ಚಿರಶಾಂತಿಯುಂಟಾಗಲೆಂದು ಭಗವಂತ ನನ್ನು ಪ್ರಾರ್ಥಿಸುತ್ತದೆ.

1. ಶ್ರೀ|| ಟಿ. ಶ್ರೀನಿವಾಸಯ್ಯಂಗಾರ್, ಮೈಸೂರು.
2. ಶ್ರೀ|| ಹೆಚ್. ನರಸಿಂಹಶಾಸ್ತ್ರಿ, ಬೆಂಗಳೂರು.
3. ಶ್ರೀ|| ಹೆಚ್. ಶ್ರೀನಿವಾಸಯ್ಯಂಗಾರ್, ಜಾಫ್ನಾ.
4. ಶ್ರೀ|| ಪಂ|| ಮೈಲಾರಪ್ಪನವರು, ಬೆಂಗಳೂರು.

ಸೂ.—ಅಧ್ಯಕ್ಷರಿಂದ.

ಸರ್ವರೂ ಎದ್ದುನಿಂತು ತಮ್ಮ ವ್ಯಸನವನ್ನು ಸೂಚಿಸಿದರು.

ಈ ತೀರ್ಮಾನವನ್ನು ಸೆಕ್ರೆಟರಿಯವರು ದಯವಿಟ್ಟು ಅವರುಗಳ ಕುಟುಂಬ ದವರಿಗೆ ತಿಳಿಸತಕ್ಕದ್ದು.

2. ಉತ್ತಮರೀತಿಯಲ್ಲಿ ಶಾಸ್ತ್ರೀಯವಾಗಿ ತಯಾರಾದ ಆಯುರ್ವೇದೀಯ ಔಷಧಿಗಳು ಮತ್ತು ಮೂಲಿಕೆಗಳು ವೈದ್ಯರಿಗೂ, ಸಾರ್ವಜನಿಕರಿಗೂ ಸಕಾಲದಲ್ಲಿ ದೊರೆಯದೇ ಇರುವುದರಿಂದ ಉಂಟಾಗುವ ಅನಾನುಕೂಲವನ್ನೂ, ಆಯುರ್ವೇದದ ಮೇಲೆ ಆಗುತ್ತಿರುವ ಅಪಪ್ರಚಾರವನ್ನೂ ತಪ್ಪಿಸುವುದಕ್ಕಾಗಿಯೂ, ಶಾಸ್ತ್ರೀಯ ವಾಗಿಯೂ ಉತ್ತಮಗುಣಕಾರಿಗಳಾಗಿಯೂ ಇರತಕ್ಕ ಔಷಧಿಗಳಿಗೆ ತಕ್ಕ ಪ್ರೋತ್ಸಾ ಹವನ್ನು ಉಂಟುಮಾಡುವುದಕ್ಕಾಗಿಯೂ, ನಿರುದ್ಯೋಗಿಗಳಾಗಿರಬಹುದಾದ ವೈದ್ಯ ರಿಗೆ ಸಾಧ್ಯವಾದಮಟ್ಟಿಗೂ ಉದ್ಯೋಗವನ್ನು ಕಲ್ಪಿಸಿಕೊಡುವುದಕ್ಕಾಗಿಯೂ, **"ಮೈಸೂರು ಸಂಸ್ಥಾನದ ಆಯುರ್ವೇದ ವೈದ್ಯರ ಸಹಕಾರಸಂಘ"** ಎಂಬ ದಾಗಿ ಒಂದು ಕೇಂದ್ರೀಕೃತಸಹಕಾರಸಂಸ್ಥೆಯನ್ನು ಕೂಡ್ಲೆ ಸ್ಥಾಪಿಸಿ, ಅದರ ಕೇಂದ್ರ

ಕಚೇರಿಯನ್ನು ಮೈಸೂರು ನಗರದಲ್ಲಿಯೂ ಮತ್ತು ಶಾಖೆಗಳನ್ನು ಸಂಸ್ಥಾನದ ಜಿಲ್ಲಾಗಳಲ್ಲಿಯೂ, ಸ್ಥಾಪನೆಮಾಡಬೇಕೆಂದು ಈ ಸಭೆಯ ನಿರ್ಣಯಿಸುತ್ತದೆ.

ಸೂ.—ಶ್ರೀ|| ಕೆ. ಪಿ. ಪುರಾಣೀಕರು, ಮೈಸೂರು.

ಅನು.—ಶ್ರೀ|| ಎಂ. ರಾಮಾನುಜಪಂಡಿತರು, ಮೇಲುಕೋಟೆ.

ಸರ್ವಾನುಮತದಿಂದ.

3. ಸಂಸ್ಥಾನದ ಎಲ್ಲ ಕಡೆಯಲ್ಲಿಯೂ ಇರತಕ್ಕ ಆಯುರ್ವೇದವೈದ್ಯರುಗಳ ಸ್ಥಿತಿಗತಿಗಳನ್ನು ಸರ್ವೇಮಾಡಬೇಕಾಗಿಯೂ, ಅದಕ್ಕಾಗಿ ಪ್ರತಿಜಿಲ್ಲೆಯ ಪ್ರತಿನಿಧಿಗಳೂ ಸಹಕರಿಸಿ ತಮ್ಮ ತಮ್ಮ ವರದಿಯನ್ನು ವೈದ್ಯಸಂಘದ ಆಫೀಸಿಗೆ ಸಂಗ್ರಹಿಸಿ ಕಳುಹಿಸಿಕೊಡಬೇಕೆಂತಲೂ ಈ ಸಭೆಯು ನಿರ್ಣಯಿಸುತ್ತದೆ.

ವರದಿಗೆ ಬೇಕಾದ ವಿಷಯಗಳ ಹೆಡ್ಡಿಂಗ್‌ನ್ನುಳ್ಳ ಪ್ರಿಂಟಾದ ಫಾರಮನ್ನು ಮೈಸೂರು ವೈದ್ಯಸಂಘದ ಆಫೀಸಿನಿಂದ ಪಡೆಯತಕ್ಕದ್ದು.

ಸೂ.—ಶ್ರೀ|| ಕೆ. ಪಿ. ಪುರಾಣೀಕ್, ಮೈಸೂರು.

ಅನು.—ಡಾ|| ಎನ್. ಎಸ್. ಸುಬ್ರಹ್ಮಣ್ಯಶಾಸ್ತ್ರಿ, ಸರ್ವಾನುಮತ.

4. ಅಖಿಲಭಾರತಾಯುರ್ವೇದ ವಿದ್ಯಾಪೀಠದ ಕಡೆಯಿಂದ ನಡೆಸತಕ್ಕ ಪರೀಕ್ಷೆಗಳನ್ನು ಮೈಸೂರು ನಗರದಲ್ಲಿ ಕೇಂದ್ರವನ್ನಾಗಿ ನಡೆಸುವಂತೆ ಅಖಿಲಭಾರತಾಯುರ್ವೇದ ಮಹಾಮಂಡಳವನ್ನು ಈ ಸಭೆಯು ಪ್ರಾರ್ಥಿಸುತ್ತದೆ.

ಸೂ—ಪಂ|| ಡಿ. ಶ್ರೀಕಂಠಯ್ಯ, ಕೆಂಗಾಕಿ.

ಅನು—ಪಂ|| ಎಂ. ಎಸ್. ನಾಗೇಶರಾವ್, ಮೈಸೂರು.

ಬಹುಮತದಿಂದ ಒಪ್ಪಲಾಯಿತು.

5. ಮೈಸೂರು ಗೌ|| ಆಯುರ್ವೇದಿಕ್ ಕಾಲೇಜಿನ ಪದವೀಧರರಾಗಿಯೋ, ಅಥವಾ ಬೇರೆ ಕಾಲೇಜಿನಲ್ಲಿ ವೈದ್ಯಪ್ರಶಸ್ತಿಯನ್ನು ಪಡೆದು ಬಹುಕಾಲದಿಂದಲೂ ಮೈಸೂರು ದೇಶದಲ್ಲಿ ನೆಲಸಿರುವವರಾಗಿಯೋ ಇರುವ ಪ್ರಮುಖ ಆಯುರ್ವೇದ ವಿದ್ಯಾವಂತರು ಸಿಕ್ಕುತ್ತಿದ್ದಾಗ್ಯೂ ಮೈಸೂರು ಸರ್ಕಾರದ ಕಾಲೇಜಿಗೆ ಹೊರಗಿನವರನ್ನು (non-mysoreans) ಅಧಿಕಾರಕ್ಕೆ ಸೇರಿಸುತ್ತಿರುವುದನ್ನು ಈ ಸಭೆಯು ಬಹು ವಿಷಾದದಿಂದ ಖಂಡಿಸುತ್ತದೆ.

ಇನ್ನುಮುಂದೆಯಾದರೂ ಈರೀತಿ ಮಾಡಬಾರದೆಂದು ಮೈಸೂರು ಸರ್ಕಾರವನ್ನು ವಿನಯದಿಂದ ಪ್ರಾರ್ಥಿಸುತ್ತದೆ.

ಸೂ—ಪಂ|| ಸಿ. ಎಚ್. ನಾರಾಯಣರಾವ್, ಮಂಡ್ಯ.

ಅನು—ಪಂ|| ಟಿ. ಸಿ. ಸುಬ್ಬಣ್ಣಾಚಾರ್, ನಂದಿ.

ಸರ್ವಾನುಮತ.

6. ಮುಂಬೈಸರ್ಕಾರದವರು ಮಾಡಿರುವ ರೀತಿಯಲ್ಲಿ ಮೈಸೂರು ಸರಕಾರ ದವರೂ ಸಹ ಇಲ್ಲಿನ ವೈದ್ಯರೆಲ್ಲರ ಹಿತಸಾಧನೆಯಾಗಲನುಕೂಲವಾಗುವಂತೆ ರಿಜಸ್ಟ್ರೇಷನ್ ಕ್ರಮುವನ್ನೂ, ವೈದ್ಯರ ಬೋರ್ಡ್_ಆಫ್ ಇಂಡಿಯನ್ ಮೆಡಿಸಿನ್ ಎಂಬ ಸಂಸ್ಥೆಯ ಸ್ಥಾಪನೆಯನ್ನೂ ಜಾರಿಗೆ ತರಬೇಕೆಂದು ಈ ಸಭೆಯು ಮೈಸೂರು ಸರಕಾರವನ್ನು ವಿನಯದಿಂದ ಪ್ರಾರ್ಥಿಸುತ್ತದೆ.

ಸೂ—ಪಂ|| ಡಿ. ಆರ್. ಹನುಮಂತಾಚಾರ್, ಮೆಲ್ಲೂರು.

ಅನು—ಪಂ|| ಎಲ್. ಎನ್. ಮೂರ್ತಿ, ತುಂಕೂರು.

ಬಹುಮತದಿಂದ ಒಪ್ಪಲಾಯಿತು.

7. ಮೈಸೂರುದೇಶದ ಡಿ|| ಬೋರ್ಡು ಮತ್ತು ಮ್ಯುನಿಸಿಪಾಲಿಟಿಗಳಲ್ಲಿ ಸಹಾಯಪಡೆದು ಕೆಲಸಮಾಡುತ್ತಿರುವ ವೈದ್ಯರುಗಳಿಗೆಲ್ಲಾ ತಕ್ಕ ಉತ್ತೇಜನದೊಡನೆ ಗ್ರ್ಯಾಂಟಿಗೆ ಬದಲಾಗಿ ಖಾಯಂಸರ್ವಿಸ್ಸನ್ನು ಮಾಡಿಸಿಕೊಡಬೇಕೆಂದು ಘನಸರ್ಕಾರ ವನ್ನು ಈ ಸಭೆಯು ಪ್ರಾರ್ಥಿಸುತ್ತದೆ.

ಸೂ—ಪಂ|| ಡಿ. ಶ್ರೀಕಂಠಯ್ಯ, ಕೆಂಗಾಕಿ.

ಅನು—ಭಿಷಗ್ರತ್ನ ಸೂರ್ಯನಾರಾಯಣಪಂಡಿತರು, ಮೈಸೂರು.

ಸರ್ವಾನುಮತ.

8. ಮೈಸೂರು ಗೌ|| ಆಯುರ್ವೇದ ಮತ್ತು ಯುನಾನಿಕಾಲೇಜಿನಲ್ಲಿ ಉತ್ತೀರ್ಣರಾದವರಿಗೆ ಆಯುರ್ವೇದ ವಿದ್ವಾನ್ ಮತ್ತು L.A.M.S. ಎಂಬ ಪ್ರಶಸ್ತಿ ಯನ್ನು ಮೈಸೂರು ಸರ್ಕಾರದವರು ಕೊಡುತ್ತಿರುವುದರಿಂದ ಅದರ ವೈಶಿಷ್ಟ್ಯವನ್ನೂ ಮರ್ಯಾದೆಯನ್ನೂ ಕಾಪಾಡುವುದಕ್ಕಾಗಿ, ಅಲ್ಲಿ ಉತ್ತೀರ್ಣರಾಗದ ಯಾರೊಬ್ಬರೂ ಆ ಪ್ರಶಸ್ತಿಯನ್ನು ಉಪಯೋಗಿಸಿಕೊಳ್ಳದಂತೆ ನಿರ್ಬಂಧಪಡಿಸಬೇಕೆಂದು ಈ ಸಭೆಯು ಮೈಸೂರು ಘನಸರ್ಕಾರಕ್ಕೆ ಬಿನ್ನವಿಸುತ್ತದೆ.

ಸೂ—ಶ್ರೀ ಪಂ|| ಗೋಪಾಲಕೃಷ್ಣಾವಧಾನಿಗಳು, ಮೈಸೂರು.

ಅನು—ಪಂ|| ಎಂ. ಮಹದೇವಶಾಸ್ತ್ರಿ, ಬೆಂಗಳೂರು.

ಬಹುಮತದಿಂದ ನಿರ್ಧರಿಸಲಾಯಿತು,

9. (a) ಈ ಸಮ್ಮೇಳನದಲ್ಲಿ ಇದರ ಅಧ್ಯಕ್ಷರ ನೇತೃತ್ವದಲ್ಲಾದ ನಿರ್ಣಯ ಗಳನ್ನೆಲ್ಲಾ ಕಾರ್ಯಕಾರಿಗಳನ್ನಾಗಿ ಮಾಡಲು ಮೈಸೂರು ವೈದ್ಯಸಂಘಕ್ಕೆ ಈ ಸಭೆಯು ವಹಿಸುತ್ತದೆ.

(b) ಆ ವೈದ್ಯಸಂಘವು ತನ್ನ ಶಾಖೆಗಳನ್ನು ಮೈಸೂರು ದೇಶದ ಎಲ್ಲಾ ಜಿಲ್ಲೆಗಳಲ್ಲೂ ಸ್ಥಾಪಿಸಿ, ಪ್ರತಿವರ್ಷವೂ ಒಂದೊಂದು ಜಿಲ್ಲೆಯಲ್ಲಿ ಮೈಸೂರು ಸಂಸ್ಥಾನದ ಆಯುರ್ವೇದ ಸಮ್ಮೇಳನವು ಜರುಗುವಂತೆ ಏರ್ಪಡಿಸತಕ್ಕದ್ದು.

(c) ಈ ವೈದ್ಯಸಂಘದ ಕಾರ್ಯನಿರ್ವಾಹಕ್ಕಾಗಿ ಈಗ ಇರುವ ವೈದ್ಯಸಂಘದ ಕಾರ್ಯನಿರ್ವಾಹಕಸಮಿತಿಯ ಜೊತೆಗೆ ಮೈಸೂರು ಸಂಸ್ಥಾನದ ಪ್ರತಿಜಿಲ್ಲೆಯ ವೈದ್ಯ ರೊಳಗಿಂದಲೂ ಇಬ್ಬರಿಗೆ ಕಮ್ಮಿಯಿಲ್ಲದಂತೆ ಸದಸ್ಯರನ್ನು ಈ ಸಮ್ಮೇಳನವು ಗೊತ್ತು ಮಾಡಿ ವೈದ್ಯಸಂಘದ ಸ್ಥಾಯಿಸಮಿತಿಗೆ ಸೇರಿಸತಕ್ಕದ್ದು.

(d) ಈ ವೈದ್ಯಸಂಘದಲ್ಲಿ ಮೈಸೂರು ಸಂಸ್ಥಾನದ ಎಲ್ಲ ವೈದ್ಯರ ಅನುಕೂ ಲಕ್ಕೆ ಬೇಕಾಗುವ ರೀತಿಯಲ್ಲಿ ಏನೇನು ತಿದ್ದುಪಡಿಯು ಅವಶ್ಯಕವಾದರೂ ಅವುಗ ಳನ್ನು ಮುಂದಿನ ಸಮ್ಮೇಳನದಲ್ಲಿ ನಿರ್ಧರಿಸಿ ವೈದ್ಯಸಂಘದ ಈಗಿರುವ ನಿಯಮಗಳ ಜೊತೆಗೆ ಸೇರಿಸತಕ್ಕದ್ದು.

ಸೂ.—ಪಂ|| ಎನ್. ಶ್ಯಾಮಣ್ಣ, ಟಿ. ನರಸೀಪುರ.
ಅನು.—ಪಂ|| ಸೂರ್ಯನಾರಾಯಣಪಂಡಿತರು, ಮೈಸೂರು.
ಪಂ|| ಕೆ. ಪಿ. ಪುರಾಣೀಕರು, ಮೈಸೂರು.
ಸರ್ವಾನುಮತ.

ಜಿಲ್ಲಾವಾರು ಸದಸ್ಯರನ್ನು ಈ ರೀತಿ ಸೇರಿಸಿಕೊಳ್ಳಲಾಗಿದೆ.

1. ಮೈಸೂರು ಡಿ|| ಹಾಲಿ ಇರುವ ಸದಸ್ಯರುಗಳ ಜೊತೆಗೆ
ಶ್ರೀ|| ಯಮ್. ಜಿ. ಶಿಂಗ್ರಯ್ಯಂಗಾರ್ಯರವರು, ಮೈಸೂರು.
2. ಕೋಲಾರ—ಶ್ರೀ|| ಪಂ|| ಟಿ. ಸಿ. ಸುಬ್ಬಣ್ಣಾಚಾರ್ಯರು, ನಂದಿ.
ಪಂ|| ಎಸ್. ಕೃಷ್ಣಶಾಸ್ತ್ರಿಗಳು, ಮುರಗುಮಲೆ.
3. ಶಿವಮೊಗ್ಗ—ಕೆ. ಯಲ್. ಸೂರ್ಯನಾರಾಯಣಶಾಸ್ತ್ರಿ, ಶಿವಮೊಗ್ಗ.
ಅಗಸ್ತ್ಯಪಂಡಿತ ಡಿ. ಮುತ್ತುಸ್ವಾಮಿಪಂಡಿತರು, ಶಿವಮೊಗ್ಗ.
ಶ್ರೀಯುತ ವೈ. ಪಾರ್ಥನಾರಾಯಣಪಂಡಿತರು, ಶಿವಮೊಗ್ಗ.
ಪಂ|| ಪಿ. ಎಸ್. ನಾರಾಯಣಸ್ವಾಮಿ, ಶಿವಮೊಗ್ಗ.

4. ಚಿತ್ರದುರ್ಗ—ಪಂ|| ಯಂ. ನಂಜುಂಡಯ್ಯ, ಅಳಜಿ, ದಾವಣಗೆರೆ.
ಪಂ|| ವಾಗೋಜಿರಾವ್, ವನಸ್ಪತಿಡಿಪೋ, ಚಿತ್ರದುರ್ಗ.

5. ಮಂಡ್ಯ— ಶ್ರೀ|| ಗುಂಡಾಪಂಡಿತರು, ಶಿವಪುರ, ಮದ್ದೂರು.
ಶ್ರೀ|| ರಾಮಾನುಜಪಂಡಿತರು, ಮೇಲುಕೋಟೆ.
ಪಂ|| ಶಿಂಗ್ರಯ್ಯಂಗಾರ್, ಕ್ಯಾತನಹಳ್ಳಿ.
ಪಂ|| ಸುಬ್ಬಾಶಾಸ್ತ್ರಿ, ನಾಗಮಂಗಲ.

6. ಬೆಂಗಳೂರು—ಪಂ|| ಯಲ್ಲಪ್ಪ, ಬೆಂಗಳೂರು.
ಪಂ|| ಮಹದೇವಶಾಸ್ತ್ರಿ, ಬೆಂಗಳೂರು.
ಶ್ರೀ|| ಕೆ. ರಾಮಕೃಷ್ಣಪಂಡಿತರು, ಕಾನಕಾನಹಳ್ಳಿ.

7. ಹಾಸನ— ಶ್ರೀ|| ಬಿ. ಶಾಮಣ್ಣಪಂಡಿತರು, ಹಾಸನ.
ಶ್ರೀ|| ಎಂ. ಎನ್. ಶಾಮಣ್ಣಪಂಡಿತರು

8. ತುಂಕೂರು— ಪಂ|| ಡಿ. ವಿ. ದಾಸ್, ಕಿಬ್ಬನಹಳ್ಳಿ.
ಪಂ|| ಚಂದ್ರಶೇಖರಯ್ಯ, ತುಂಕೂರು.
ಪಂ|| ಎಲ್. ನರಸಿಂಹಮೂರ್ತಿ, ತುಂಕೂರು.
ಪಂ|| ಲಕ್ಷ್ಮಣಸ್ವಾಮಿ, ಚಿಕ್ಕಹೊಸಹಳ್ಳಿ, ಮಧುಗಿರಿ ತಾ||

9. ಕಡೂರು— ಪಂ|| ಪಟ್ಲಗೆರೆ ಸೂರ್ಯನಾರಾಯಣಶಾಸ್ತ್ರಿಗಳು, ಕಡೂರು.

ಇನ್ನೂ ಹೆಚ್ಚು ಸದಸ್ಯರನ್ನು ಸೇರಿಸಿಕೊಳ್ಳುವ ಅಧಿಕಾರವು ಸ್ಥಾಯಿ ಸಮಿತಿಗೆ ಇರುತ್ತದೆ.

ಸೂ.—ಅಧ್ಯಕ್ಷರಿಂದ.

ಸರ್ವಾನುಮತ.

10. ಮೈಸೂರು ಸಂಸ್ಥಾನದ ದ್ವಿತೀಯ ಸಮ್ಮೇಳನಕ್ಕಾಗಿ ಮುಂದಿನ ವರ್ಷಕ್ಕೆ ಕೋಲಾರ ಡಿ|| ನಂದಿಯ ತತ್ವವಾದಿ ಪಂ. ಚಿಕ್ಕಸುಬ್ಬಣ್ಣಾಚಾರ್ಯರು ಮತ್ತು ಮುರಗುಮಲೆಯ ಪಂ. ಕೃಷ್ಣಶಾಸ್ತ್ರಿಗಳೂ ಕೊಟ್ಟ ಆಹ್ವಾನವನ್ನು ಈ ಸಭೆಯು ಅಂಗೀಕರಿಸುತ್ತದೆ.

ಸೂ.—ಪಂ. ತತ್ವವಾದಿ ಚಿಕ್ಕಸುಬ್ಬಣ್ಣಾಚಾರ್ಯರು—ನಂದಿ.

ಅನು.— ಪಂ. ಯಲ್ಲಪ್ಪ, ಬೆಂಗಳೂರು.

ಸರ್ವಾನುಮತ,

11. ವೈದ್ಯಸಂಘದ ಪರವಾಗಿ ಈ ಸಮ್ಮೇಳನವು ಈಸಲ ಇಲ್ಲಿ ಏರ್ಪಟ್ಟಿದ್ದರಿಂದ ವೈದ್ಯಸಂಘಕ್ಕೂ, ಸ್ವಾಗತಸಮಿತಿಗೂ ಈ ಸಭೆಯು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ.

ಸೂ.—ಪಂ. ಮಹಾದೇವಶಾಸ್ತ್ರಿ ಬೆಂಗಳೂರು.

ಅನು.—ಪಂ. ಡಿ. ಆರ್. ಹನುಮಂತಾಚಾರ್ಯರು—ಮೇಲೂರು

ಅಧ್ಯಕ್ಷರ ಅಪ್ಪಣೆಯಂತೆ ಉಪಸಂಹಾರ ಭಾಷಣವೂ, ಪರಸ್ಪರ ವಂದನಾ ಸಮರ್ಪಣೆಯೂ, ಮಂಗಳವೂ ಆದನಂತರ, ಶ್ರೀಮನ್ಮಹಾರಾಜರವರ ಶ್ರೇಯಃ ಪ್ರಾರ್ಥನೆ ನಡೆದು, ಮೈಸೂರು ಸಂಸ್ಥಾನದ ಸಮ್ಮೇಳನವು ಬರಖಾಸ್ತಾಯಿತೆಂದು ಅಕ್ಷರದಿಂದ ಉದ್ಘೋಷಿಸಲ್ಪಟ್ಟಿತು.

(Sd.) ಪಾ—ವೆಂಕಟಾಚಲಪಂಡಿತ್,
ಅಧ್ಯಕ್ಷರು.

ಮೈಸೂರು,
ತಾ|| 30-12-1941. (ಪೂರ್ವಾಹ್ಣ)

ವೈ. ಲಕ್ಷ್ಮೀನರಸಿಂಹಶಾಸ್ತ್ರಿ,
ಜ|| ಸೆಕ್ರಿಟೆರಿ (ಸ್ವಾ. ಸಮಿತಿ.)



# ಮೈಸೂರು ಸಂಸ್ಥಾನದ ಪ್ರಥಮ ಆಯುರ್ವೇದ ಸಮ್ಮೇಳನ, ಮೈಸೂರು.

## ಉಪಸಂಹಾರ ಭಾಷಣ

---

(ಅಧ್ಯಕ್ಷರ ಅಪ್ಪಣೆಯ ಪ್ರಕಾರ)

ಮಾನ್ಯಅಧ್ಯಕ್ಷರೆ, ಪ್ರಿಯವೈದ್ಯಭ್ರಾತೃಭಗಿನಿಯರೆ, ಮಹಿಳೆಯರೆ, ಮಹಾಶಯರೆ—

ಈ ಸಮ್ಮೇಳನವು ಮೈಸೂರಿನ ಪ್ರಸಿದ್ಧರಾದ ವೃದ್ಧವೈದ್ಯ ಶ್ರೀಯುತ ಭಿಷಗ್ರತ್ನ ಸಾ|| ವೆಂಕಟಾಚಲಪಂಡಿತರವರ ಅಧ್ಯಕ್ಷತೆಯಲ್ಲಿ ಸಾಂಗವಾಗಿ ನೆರವೇರಿದುದು ನಮಗೆಲ್ಲರಿಗೂ ಹೆಮ್ಮೆಯ ವಿಚಾರ. ಈ ಮಹನೀಯರು ಬಹುಕಾಲದಿಂದಲೂ ಆಯುರ್ವೇದ ಮಹಿಮಾಪ್ರಚಾರಕ್ಕೆ ಅಖಂಡವಾಗಿ ದುಡಿದು, ನಮ್ಮ ಮೈಸೂರಿನ ವೈದ್ಯರ ಹೆಸರನ್ನು ದೇಶವಿದೇಶದಲ್ಲೆಲ್ಲಾ ಪ್ರಚುರಪಡಿಸಿದವರು. ಈಗಲೂ ತದೇಕಚಿತ್ತರಾಗಿ ಶ್ರಮಿಸುತ್ತಿರುವವರು.

ನಿಖಿಲಭಾರತಾಯುರ್ವೇದಮಹಾಮಂಡಳವು ಇಡೀ ಭರತಖಂಡದ ವೈದ್ಯರ ವಿಚಾರವನ್ನೆಲ್ಲಾ ಹೇಗೆ ಒಳಗೊಂಡಿದೆಯೋ, ನಿಖಿಲ ಕರ್ಣಾಟಕಾಯುರ್ವೇದ ಮಂಡಳವು ಹೇಗೆ ಇಡೀ ಕರ್ಣಾಟದ ವೈದ್ಯರ ಹಿತಸಾಧನೆಗಾಗಿ ನಿಂತಿದೆಯೋ, ಹಾಗೆಯೇ ಇಡೀ ಮೈಸೂರುದೇಶಕ್ಕೂ ಒಂದು ಒಟ್ಟಿನ ಸಂಸ್ಥೆಯ ಅವಶ್ಯಕತೆಯನ್ನು ಪುನಃ ಹೇಳಬೇಕಾಗಿಲ್ಲ. ಮೇಲೆ ಹೇಳಿದ ಸಂಸ್ಥೆಗಳೆಲ್ಲವೂ ಒಂದಕ್ಕೊಂದು ಪರಸ್ಪರ ಆಶ್ರಯಾಶ್ರಯೀಭಾವಗಳಿಂದ ಸೇವೆಮಾಡುತ್ತಿವೆಯೆ ಹೊರ್ತು ಭಿನ್ನತೆಯಿಂದಲ್ಲ. ಅದೇ ತತ್ವದಮೇಲೆ ನಮ್ಮ ಮೈಸೂರು ದೇಶದ ಹಿತಸಾಧನೆಗಾಗಿ ಆಗಾಗ್ಯೆ ಸಮ್ಮೇಳನ ಜರುಗಿಸಿ, ನಾವೆಲ್ಲರೂ ಒಟ್ಟಿಗೆ ಕಲೆತು ವಿಚಾರವಿನಿಮಯ ಮಾಡುವುದವಶ್ಯಕವಿತ್ತು. ಆಗಾಗ್ಯೆ ಅಲ್ಲಲ್ಲಿ ಇಂತಹ ಸಭೆಗಳು ಸೇರಿದ್ದವೆಂದು ತಿಳಿದುಬಂದರೂ, ವ್ಯವಸ್ಥಿತರೀತಿಯಲ್ಲಿ ಪ್ರತಿವರ್ಷವೂ ಏರ್ಪಡಿಸುವುದು ಆಚರಣೆಗೆ ಬಂದಿರಲಿಲ್ಲ.

ವೈದ್ಯರ ಹಿತಸಾಧನೆಯೇ ಮುಖ್ಯವನ್ನಾಗಿ ಉಳ್ಳ ಮೈಸೂರು ಆಯುರ್ವೇದ ವೈದ್ಯಸಂಘ (ರಿಜಿಸ್ಟರ್ಡ್) ಎಂಬ ಸಂಸ್ಥೆಯು ಈಗ್ಯೆ 14 ವರ್ಷಗಳಲ್ಲಿ ಸ್ಥಾಪಿತವಾದಂದಿನಿಂದ, 1930ರಲ್ಲಿ ನಿ. ಭಾರತದ 21ನೆಯ ಮತ್ತು ನಿ. ಕರ್ಣಾಟಕದ 6ನೆಯ ಸಮ್ಮೇಳನಗಳಿಗೂ, ಈಗ ನಡೆಯುತ್ತಿರುವ ನಿ. ಕರ್ಣಾಟಕದ 12ನೆಯ ಮತ್ತು ಮೈಸೂರು ಸಂಸ್ಥಾನದ ಪ್ರಥಮಸಮ್ಮೇಳನಗಳಿಗೂ ಕಾರಣವಾಯಿತೆಂಬುದು ಸಂತೋಷದ ಸಂಗತಿ.

ನಾವುಗಳು ನಿಖಿಲಕರ್ಣಾಟಕಕ್ಕೇ ಸೇರಿದವರಾದಾಗ್ಯೂ ನಮ್ಮ ಸರ್ಕಾರವೇ ಬೇರೆಯಾದುದರಿಂದ, ಅದರ ಛತ್ರಛಾಯೆಯಲ್ಲಿರುವ ನಮ್ಮಗಳ ಆಶೋತ್ತರಗಳು

ನಮ್ಮ ದೇಶದ ಮತ್ತು ನಮ್ಮ ಘನಸರ್ಕಾರದ ವೈಶಿಷ್ಟ್ಯಗಳನ್ನುಳ್ಳವಾಗಿರುತ್ತವೆ. ಆದ್ದರಿಂದ ಇಂತಹ ಸಮ್ಮೇಳನಗಳು ವರ್ಷೆವರ್ಷೆ ಕಲೆತು ನಮ್ಮೆಲ್ಲರ ಹಿತಸಾಧನೆಗೆ ಕಾರಣವಾಗಲೆಂದು ಆಶಿಸುತ್ತೇನೆ.

ಮೈಸೂರುದೇಶದ ದೂರದೂರವಾದ ಭಾಗಗಳಿಂದೆಲ್ಲಾ ಇದೇ ಮಹೋದ್ದೇಶದಿಂದಲೇ ಬಹು ಶ್ರಮವಹಿಸಿ ನಮ್ಮ ವೈದ್ಯ ಸಹೋದರರನೇಕರು ನಮ್ಮ ಪ್ರಾರ್ಥನೆಗೆ ಮನ್ನಣೆಕೊಟ್ಟು, ದಯಮಾಡಿಸಿ ಕೇವಲ ಸಹೋದರಭಾವದಿಂದ ಇಲ್ಲಿ ಕಲೆತು, ಏನೇ ಭಿನ್ನಾಭಿಪ್ರಾಯಗಳಿದ್ದರೂ ಮರೆತು ಈ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡಿದ್ದಕ್ಕೆ ನನ್ನ ಅನಂತಧನ್ಯವಾದಗಳು.

ಕಾರ್ಯಾತುರದಲ್ಲಿ ನಮ್ಮಿಂದೇನಾದರೂ ಅವಜ್ಞತೆಗಳು ನಡೆದಿದ್ದಲ್ಲಿ, ಉದಾರ ಮನಸ್ಕರಾದ ತಾವುಗಳು ಕೃಪೆಮಾಡಿ ಮನ್ನಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ಸಾಂಘಿಕಶಕ್ತಿಯಿದ್ದಲ್ಲದೆ ನಮ್ಮಗಳ ಪುರೋವೃದ್ಧಿಯು ಕಷ್ಟವೆಂಬುದನ್ನು ತಾವೆಲ್ಲರೂ ಗ್ರಹಿಸಿ ವೈದ್ಯಸಂಘದ ಸದಸ್ಯತ್ವವನ್ನು ಕೂಡ್ಲೆ ಅಂಗೀಕರಿಸಿ, ನಮ್ಮೆಲ್ಲರ ಕಷ್ಟಕಾರ್ಪಣ್ಯಗಳನ್ನೂ ಒಟ್ಟಿಗೆ ಪ್ರದರ್ಶನಮಾಡಿ, ಯುಕ್ತಪರಿಹಾರಹೊಂದಲನುಕೂಲವಾಗುವಂತೆ ಮಾಡಿರಿ.

ಈ ಸಮ್ಮೇಳನವಾಗಲು ಸರ್ವವಿಧದಲ್ಲೂ ಸಹಾಯವನ್ನೊದಗಿಸಿಕೊಟ್ಟ ನಮ್ಮನ್ನಾಳುವ ಮಹಾಪ್ರಭುಗಳ, ಘನಸರ್ಕಾರದ, ನಮ್ಮ ಮಾನ್ಯಸ್ವಾಗತಾಧ್ಯಕ್ಷರಾದ ಶ್ರೀಮಾನ್ ಅಂಬ್ಲೆ ಸುಬ್ರಹ್ಮಣ್ಯ ಅಯ್ಯರ್‌ರವರ, ಪುರಪ್ರಮುಖರ, ಪ್ರಮುಖ ವೈದ್ಯರ, ವೈದ್ಯಾಭಿಮಾನಿಗಳ ಮತ್ತು ಡಿ|| ಬೋರ್ಡು, ಮುನಿಸಿಪಾಲಿಟಿ, ಕೊ.ಆ. ಸೊಸೈಟಿಗಳು ಮುಂತಾದ ಸ್ಥಳೀಯ ಸಂಸ್ಥೆಗಳ, ತನುಮನಧನಗಳ ಸಹಾಯಕ್ಕಾಗಿ ವೈದ್ಯಸಂಘದ ಪರವಾಗಿಯೂ ತಮ್ಮೆಲ್ಲರ ಪರವಾಗಿಯೂ ಅವರುಗಳನ್ನು ವಂದಿಸುವುದು ನನ್ನ ಕರ್ತವ್ಯ. ನಮಗೆ ಸರ್ವವಿಧದಿಂದಲೂ ಆಶ್ರಯದಾತರಾಗಿರುವ ಶ್ರೀಮನ್ಮಹಾರಾಜರವರಿಗೆ ಶ್ರೀ ಧನ್ವಂತರಿಯು ಅಖಂಡವಾದ ಆಯುರಾರೋಗ್ಯ ಐಶ್ವರ್ಯಗಳನ್ನು ದಯೆಪಾಲಿಸಲೆಂದು ಹಾರೈಸಿ ಈ ಸಭೆಯನ್ನು ಬರಖಾಸ್ತುಮಾಡಿದೆಯೆಂಬ ಅಧ್ಯಕ್ಷರ ಆಜ್ಞೆಯನ್ನು ತಮ್ಮಲ್ಲಿ ನಿವೇದಿಸುತ್ತೇನೆ. ದೇವರು ತಮಗೆಲ್ಲಾ ಸನ್ಮಂಗಳವನ್ನುಂಟುಮಾಡಲಿ. ಇತಿಶಿವಂ..

ಮೈಸೂರು,

30—12—1941. (ಪೂರ್ವಾಹ್ನ)

ವೈ. ಲಕ್ಷ್ಮೀನರಸಿಂಹಶಾಸ್ತ್ರೀ
ಜ|| ಸೆಕ್ರಿಟರಿ (ಸ್ವಾ. ಸಮಿತಿ)

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

ಮೈಸೂರು ಸಂಸ್ಥಾನದ ಪ್ರಥಮ ಆಯುರ್ವೇದ, ಸಮ್ಮೇಳನ ಮತ್ತು ವಸ್ತುಪ್ರದರ್ಶನ—1941



ತಾ॥ ೩೦-೧೨-೯೪೧ನೆ ಮಂಗಳವಾರ

ಮಧ್ಯಾಹ್ನ ೨-೩೦ ರಿಂದ ೬-೩೦ರ ವರಿಗೆ

## ನಿಖಿಲಕರ್ಣಾಟಕದ ೧೨ ನೆ ಆಯುರ್ವೇದಸಮ್ಮೇಳನದ ಮಹಾಸಭೆಯು ಪ್ರಾರಂಭವಾಯಿತು.

---

**ಸಮ್ಮೇಳನಾಧ್ಯಕ್ಷರು ಅಧ್ಯಕ್ಷತೆಯನ್ನು ವಹಿಸಿದ್ದರು.**

ಸ್ವಾಗತಾಧ್ಯಕ್ಷರಾದ ಶ್ರೀ ಎ. ಸುಬ್ರಹ್ಮಣ್ಯಯ್ಯರ್, ಶ್ರೀ ಪಾ॥ ವೆಂಕಟಾಚಲ ಪಂಡಿತರು, ಸ್ವಾಗತಸಮಿತಿಯ ಸದಸ್ಯರುಗಳು, ಪ್ರತಿನಿಧಿಗಳು, ಮಾನ್ಯಪ್ರೇಕ್ಷಕ ಮಹಾಶಯರು, ಮಹಿಳೆಯರು ಇವರುಗಳಿಂದ ಸಭೆಯು ಕಿಕ್ಕಿರಿಯುತ್ತಿದ್ದಿತು.

ವಾಲೆಂಟಿಯರುಗಳು ಸಭೆಯ ಸಿಸ್ತನ್ನು ಪಾಲಿಸುತ್ತಾ ಅತಿಥಿಗಳಿಗೆ ಆದರ ವನ್ನು ತೋರಿಸುತ್ತಲಿದ್ದರು.

ಮೈಸೂರು ವನಿತಾಸದನದ ಶ್ರೀಮತಿ ಸುಶೀಲಾಬಾಯಿಯವರು ಮಹಿಳೆ ಯರನ್ನು ಸ್ವಾಗತಿಸುತ್ತಲಿದ್ದರು.

ಹಿಂದಿನ ಪರಿಷತ್ತುಗಳಿಗೆ ನೇರವಾಗಿ ಸಂಬಂಧಿಸದೆ ಇದ್ದ ಕೆಲವು **ಉತ್ತಮ ಪ್ರಬಂಧಗಳು** ಓದಲ್ಪಟ್ಟವು. ಶಿವಮೊಗ್ಗೆಯ ನಿವಾಸಿಗಳಾದ ಶ್ರೀಮಾನ್ ಆಯುರ್ವೇದಭೂಷಣ **ಪಿ. ಸೂರ್ಯನಾರಾಯಣಶಾಸ್ತ್ರಿಗಳವರು** "ಆಯುರ್ವೇದದ ಚಿಕಿತ್ಸಾವೈಶಿಷ್ಟ್ಯ" ಎಂಬ ವಿಚಾರವಾಗಿಯೂ, ಶ್ರೀಮಾನ್ **ಆ॥ ವಿ॥ ಮಹದೇವ ಶಾಸ್ತ್ರಿಗಳು, ಬೆಂಗಳೂರು**—ಇವರು **ಆಯುರ್ವೇದ ವೈಜ್ಞಾನಿಕ ದೃಷ್ಟಿ** ಎಂಬ ವಿಚಾರವಾಗಿಯೂ ಶ್ರೀಮಾನ್ **ಡಾ॥ ಎನ್. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳವರು ಆ॥ ವಿ॥ ಮೈಸೂರು**—ಇವರು **ಅಂತ್ರಕ್ರಿಮಿ (Round worm)** ಯ ಉಪಟಳ ವನ್ನೂ ಅದನ್ನು ಗೊತ್ತುಮಾಡುವ ವಿಧಾನವನ್ನೂ ಕುರಿತ ವಿಚಾರವಾಗಿಯೂ, ಬಳ್ಳಾರಿಯಿಂದ ಬಂದಿದ್ದ ಪಂ॥ ಶ್ರೀಮತಿ ಲಕ್ಷ್ಮೀಬಾಯಿಯವರು ತ್ರಿದೋಷತತ್ವದ ವಿಚಾರವಾಗಿಯೂ, ಬಹು ಸ್ವಾರಸ್ಯವಾದ ಭಾಷಣಗಳನ್ನು ಮಾಡಿದರು.

ಇದಾದಮೇಲೆ **ನಿಖಿಲಕರ್ಣಾಟಕಾಯುರ್ವೇದಮಂಡಳಿ, ಹುಬ್ಬಳ್ಳಿ**—ಇದರ **1940 ಮತ್ತು 1941 ನೇ ವರ್ಷಗಳ ವರದಿಯನ್ನು** ಮಂಡಳದ ಸೆಕ್ರಿಟೆರಿ ಯವರಾದ **ಶ್ರೀಮಾನ್ ವೈದ್ಯ ಎ. ಕೆ. ರಾಯಬಾಗ್‌ಕರ್‌ರವರು** ಸಭೆಯ ಮುಂದೆ

ಮಂಡಿಸಿದರು. ಮಂಡಳದ ಸಹಾಯಕ ಸೆಕ್ರೆಟರಿಯವರಾದ ಶ್ರೀಮಾನ್ ಎಚ್. ಎಸ್. **ರಟ್ಟೀಹಳ್ಳಿಯವರು** ಅದನ್ನು ಓದಿ ಸಭೆಯಲ್ಲಿ ವಿವರಿಸಿದರು. ಸಭೆಯಲ್ಲಿ ವಿವರವಾದ ಚರ್ಚೆಗಳಾದಮೇಲೆ ಆ ವರದಿಯು ಸರ್ವಾನುಮತದಿಂದ ಅಂಗೀಕೃತವಾಯಿತು.

ತರುವಾಯ ಹಿಂದಿನ ತಾ|| 28 ಮತ್ತು 29 ನೇ ರಾತ್ರಿಗಳಲ್ಲಿ ನಡೆದ ವಿಷಯನಿಯಾಮಕಸಮಿತಿಗಳಲ್ಲಿ ಗೊತ್ತುಮಾಡಿ ಒಪ್ಪಲ್ಪಟ್ಟಿದ್ದ ಪ್ರಸ್ತಾವಗಳನ್ನೂ ಅವುಗಳ ಮೇಲೆ ಅಲ್ಲಿ ಆಗಿದ್ದ ತೀರ್ಮಾನಗಳನ್ನೂ ಸೆಕ್ರೆಟರಿಯವರು ಸಭೆಯ ಮುಂದೆ ಮಂಡಿಸಿದರು. ಪ್ರತಿ ವಿಚಾರಗಳಮೇಲೂ ಆ ಮಹಾಸಭೆಯಲ್ಲಿ ಧಾರಾಳವಾಗಿ ಚರ್ಚೆಗಳು ನಡೆದವು. ಅಧ್ಯಕ್ಷರು ಸರ್ವ ಪ್ರತಿನಿಧಿಗಳಿಗೂ ಪೂರ್ಣ ಅವಕಾಶಗಳನ್ನು ಕಲ್ಪಿಸಿ, ಶಾಂತರೀತಿಯಿಂದ ಕಾರ್ಯನಿರ್ವಾಹಮಾಡುತ್ತಲಿದ್ದುದರಿಂದ ಸುವ್ಯವಸ್ಥಿತವಾದ ರೀತಿಯಲ್ಲಿ ಚರ್ಚೆಗಳು ಜರುಗಿ ತೀರ್ಮಾನಗಳಿಗೆ ಬರಲು ಅವಕಾಶವಿದ್ದಿತು. ಅದರಂತೆ ಅನೇಕ ನಿರ್ಣಯಗಳು (Resolutions) ಸರ್ವಾನುಮತದಿಂದ ಅಂಗೀಕೃತವಾದುವು (ಅವುಗಳನ್ನು ಮುಂದೆ ಕೊಟ್ಟಿದೆ).

ಕೆಲಕೆಲವು ವಿಚಾರಗಳಮೇಲೆ ಪ್ರತಿನಿಧಿಗಳು ಬಹು ಖಂಡಿತವಾಗಿ ಮಾತನಾಡುವ ಸಂದರ್ಭವದಗಿದಾಗಲೂ ಅವು ಪರಸ್ಪರ ಈರ್ಷ್ಯಾಸೂಯಗಳಿಂದ ದೂರವಾಗಿದ್ದವೆಂದೂ, ಆಯುರ್ವೇದಾಭಿವೃದ್ಧಿಯೂ, ವೈದ್ಯರ ಉತ್ಕರ್ಷವೂ ಯಲ್ಲರಿಗೂ ಸರ್ವಸಾಮಾನ್ಯದ ಗುರಿಗಳಾಗಿದ್ದವೆಂಬುದೂ ವ್ಯಕ್ತವಾಗುತ್ತಿತ್ತು. ಇಲ್ಲಿಗೆ ಸಮ್ಮೇಳನದ ಕಾರ್ಯಕ್ರಮದ ಪಟ್ಟಿಯಂತೆ ಪ್ರಧಾನಕಾರ್ಯಗಳೆಲ್ಲವೂ ಸಾಂಗವಾಗಿ ಕೊನೆಗಂಡು ಸಮ್ಮೇಳನೋಪಸಂಹಾರವು ನಿರೀಕ್ಷಿಸಲ್ಪಡುತ್ತಿತ್ತು.

ನಿಖಿಲ ಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—1941
ಸಮ್ಮೇಳನಗಳಿಗಾಗಿ ಪ್ರಚಾರಕಾರ್ಯ ನಡೆಸಿದವರು.



ಶ್ರೀ|| ಪಂ|| ತತ್ವವಾದಿ ಚಿಕ್ಕಸುಬ್ಬಣ್ಣಾಚಾರ್ಯರು,
ಪ್ರೊ|| ಆಯುರ್ವೇದಿಕ್ ಡಿಸ್ಪೆನ್‌ಸರಿ, ನಂವಿ.



ಶ್ರೀ|| ಪಂ|| ಡಿ. ಶ್ರೀಕಂಠಯ್ಯನವರು,
ಪ್ರೊ|| ಶ್ರೀ ಮರುನ್ನಂದನ ವೈದ್ಯಶಾಲಾ, ಕೆಂಗಾಕಿ.



ಶ್ರೀ|| ಆ|| ವಿ|| ಕೆ. ಜಿ. ರಾಮಭದ್ರ, L.A.M.S.
ಪ್ರೊ|| ಶ್ರೀ ಹಯಗ್ರೀವ ಆ|| ಫಾರ್ಮಸಿ, ಮೈಸೂರು.

12ನೇ ನಿ. ಕ. ಮತ್ತು 1ನೇ ಮೈ. ಸಂ. ಆ. ಸಮ್ಮೇಳನದಲ್ಲಿ ಮಾಡಿದ ಭಾಷಣ

# ಆಯುರ್ವೇದಚಿಕಿತ್ಸೆಯ ವೈಶಿಷ್ಟ್ಯ

(ಆಯುರ್ವೇದ ಭೂಷಣ ಪಿ. ಸೂರ್ಯನಾರಾಯಣ ಶಾಸ್ತ್ರಿಗಳು, ಕಡೂರು, ಇವರಿಂದ)

ವೈಶಿಷ್ಟ್ಯ ಎಂದರೆ ಒಂದುಬಗೆಯ ತುಲನಾತ್ಮಕ ವಿಮರ್ಶೆ—ಪ್ರಸಕ್ತ ದಿವಸಗಳಲ್ಲಿ ಪ್ರಚಾರದಲ್ಲಿರುವ ಎಲ್ಲಾಬಗೆಯ ಚಿಕಿತ್ಸಾಪದ್ಧತಿಗಳನ್ನೂ ಅಂದರೆ ವಿಶೇಷವಾಗಿ ಪಾಶ್ಚಾತ್ಯಚಿಕಿತ್ಸಾಪದ್ಧತಿಯನ್ನು ಆಯುರ್ವೇದಚಿಕಿತ್ಸಾಪದ್ಧತಿಯೊಡನೆ ಹೋಲಿಸಿ ನೋಡಿದರೆ ಆಯುರ್ವೇದಚಿಕಿತ್ಸಾಪದ್ಧತಿಯು ಭಾರತೀಯರ ಪ್ರಕೃತಿ, ಆಹಾರ, ಆರ್ಥಿಕಸ್ಥಿತಿ ಎಲ್ಲದಕ್ಕೂ ಸಂಪೂರ್ಣ ಸರಿಹೋಗುವಂತೆ ಬೇರೇ ಪದ್ಧತಿಗಳು ಸರಿಹೋಗುವುದಿಲ್ಲವೆಂಬ ವಿಷಯ ಎಲ್ಲರಿಗೂ ಗೊತ್ತು. ಆಯುರ್ವೇದಿಗಳು ಮಾತ್ರ ಹೇಳುವ ಮಾತಲ್ಲ ಇದು. ಪಾಶ್ಚಾತ್ಯ ಡಾಕ್ಟರುಗಳು ಕೂಡ ಇದೇ ಅಭಿಪ್ರಾಯಪಡುತ್ತಾರೆ. ಕೆಲವು ಅಭಿಪ್ರಾಯಗಳನ್ನು ಕೊನೆಯಲ್ಲಿ ಕೊಟ್ಟಿದೆ. ಅವನ್ನು ಓದಿಕೊಂಡರೆ ಗೊತ್ತಾಗುತ್ತದೆ.

ಸಾಮಾನ್ಯವಾಗಿ ಒಂದು ರೋಗಕ್ಕೆ ಚಿಕಿತ್ಸೆಮಾಡುವಾಗ ಆ ಚಿಕಿತ್ಸೆಯಿಂದ ರೋಗ ಗುಣವಾಗುತ್ತಬಂದರೂ ಅದರಿಂದ ಬೇರೇ ರೋಗಗಳು ಹುಟ್ಟಬಾರದು. ಹೀಗಿದ್ದರೆ ಮಾತ್ರ ಇದನ್ನು ಸರಿಯಾದ ಚಿಕಿತ್ಸೆ ಎಂದು ಕರೆಯಬಹುದು. ರೋಗವು ಗುಣವಾದರೂ ಮತ್ತೊಂದು ರೋಗವು ಮೊದಲಿನ ರೋಗಕ್ಕೆ ಬದಲಾಗಿ ಹುಟ್ಟಿದರೆ ಅದು ಸರಿಯಾದ ಚಿಕಿತ್ಸೆ ಎನ್ನಿಸಿಕೊಳ್ಳುವುದಿಲ್ಲ ಅದರಿಂದ ರೋಗಿಗೆ ಉಪಕಾರವಾದಂತೆಯೂ ಇಲ್ಲ. ಇದು ಅನುಭವಸಿದ್ಧವಾದ ಸೂತ್ರ. ಆಯುರ್ವೇದವು ಇಂತಹ ಸೂತ್ರವನ್ನು ಅಂಗೀಕರಿಸುತ್ತದೆ.

ಪ್ರಯೋಗಃ ಶಮಯೇದ್ವ್ಯಾಧಿಂ ಯೋಽನ್ಯಮನ್ಯಮುದೀರಯೇತ್ ।
ನಾಸೌವಿಶುದ್ಧಶ್ಶುದ್ಧಸ್ತುಶಮಯೇದ್ಯೋ ನ ಕೋಪಯೇತ್ ॥

ಶುದ್ಧವಾದ ಆಯುರ್ವೇದ ಚಿಕಿತ್ಸಾಪದ್ಧತಿಯು ಈ ಸೂತ್ರಕ್ಕೆ ಸ್ವಲ್ಪವೂಬಾಧೆ ಬಾರದಂತೆ ಏರ್ಪಟ್ಟಿದೆ. ಪಾಶ್ಚಾತ್ಯಪದ್ಧತಿಯ ಚಿಕಿತ್ಸೆಯನ್ನು ನೋಡಿದ ಅನುಭವದಿಂದ ಹೇಳುವುದಾದರೆ ಅದು ಈ ಸೂತ್ರದಂತೆ ಸರಿತೂಗುವುದಿಲ್ಲ.

ದೇಶದಲ್ಲಿ ಸಾವಿರಾರು ಜನರನ್ನು ಕೊಲ್ಲುತ್ತಿರುವ ಮಲೇರಿಯಾಜ್ವರ ಚಿಕಿತ್ಸೆಯಲ್ಲಿ ಪಾಶ್ಚಾತ್ಯರ ಚಿಕಿತ್ಸೆಯನ್ನು ಕೊಂಚ ವಿಮರ್ಶಿಸೋಣ. ಮಲೇರಿಯಾ ಜ್ವರಕ್ಕೆ ಕ್ವಿನೀನು ಉತ್ತಮೋತ್ತಮ ಔಷಧವೆಂದು ಪಾಶ್ಚಾತ್ಯರು ಸಾರುತ್ತಾರೆ. ಅಟಬ್ರಿನ್ ಅದರ ಅಪ್ಪ, ಅದೂ ಭಾರತಕ್ಕೆ ಬಂದಿದೆ. ಇವತ್ತು ಎಲ್ಲರೂ ನಿರ್ವಾಹವಿಲ್ಲದೆ ಅದನ್ನು ಸೇವಿಸುತ್ತಿದ್ದಾರೆ. ರಾಜಕೀಯಪುರಸ್ಕಾರವೂ ಕ್ವಿನೀನಿಗೆ ಇದೆ. ಆದರೂ ಆ ಔಷಧಗಳನ್ನು ಸೇವಿಸಿದವರಿಗೆ ಕಾಮಿಲಾ, ಪಾಂಡು, ಉದರ ಮೊದ

ಲಾದ ರೋಗಗಳು ಹುಟ್ಟಿಯೇ ಹುಟ್ಟುತ್ತವೆ. ಇದನ್ನು ಎಲ್ಲರೂ ಬಲ್ಲರು. ಈ ಚಿಕಿತ್ಸೆ ಸರಿಯೇ ಎಂದು ಪ್ರಶ್ನೆ ಬಂದರೆ ಇದು ಸರಿಯಲ್ಲ ರೋಗಿಗೆ ಇದರಿಂದ ರೋಗ ಮುಕ್ತಿಯಾಗಲಿಲ್ಲ ಎಂದು ಧಾರಾಳವಾಗಿ ಹೇಳಬಹುದು.

ಆಯುರ್ವೇದ ಪದ್ಧತಿಯಂತೆ ಮಲೇರಿಯಾಜ್ವರ ಚಿಕಿತ್ಸೆಯನ್ನು ನಡಿಯಿಸಿದರೆ ಚಿಕಿತ್ಸೆ ಸ್ವಲ್ಪ ಸಾವಕಾಶವಾದರೂ ರೋಗಾಂತರೋತ್ಪತ್ತಿಗೆ ಅವಕಾಶವಿಲ್ಲದಂತೆ ರೋಗಿಯನ್ನು ರೋಗ ಮುಕ್ತನನ್ನಾಗಿ ಮಾಡಬಹುದು.

ಕ್ವಿನೀನು ಭಾರತೀಯ ಮೂಲಿಕೆಯೇ ಆಗಿಹೋಗಿರುವುದರಿಂದ ಭಾರತೀಯ ದೇಶೀವೈದ್ಯಪದ್ಧತಿಯವರು ಸಹ ಅದನ್ನು ಪುರಸ್ಕರಿಸಬಹುದು ಎಂಬ ಹೇಳಿಕೆಯೂ ಇದೆ. ಕ್ವಿನೀನಿನಲ್ಲಿ ಜ್ವರವನ್ನು ಪ್ರತಿಬಂಧಿಸುವ ಒಂದು ಬಗೆಯ ವಿಶೇಷಪ್ರಭಾವಿದ್ದರೂ ಅತಿಯಾಗಿ ಪಿತ್ತಪ್ರಕೋಪಮಾಡುವ ದುರ್ಗುಣವಿದೆ. ಜ್ವರಚಿಕಿತ್ಸೆಯಲ್ಲಿ ಅದೊಂದನ್ನೆ ಏಕಮೂಲಿಕಾ ಪ್ರಯೋಗವಾಗಿ ಕೊಡಲು ಆಯುರ್ವೇದ ಸೂತ್ರದಲ್ಲಿ ಸಮ್ಮತಿಯಿಲ್ಲ.

ಊಷ್ಮಾಪಿತ್ತಾದೃತೇನಾಸ್ತಿಜ್ವರೋನಾಸ್ತ್ಯೂಷ್ಮಣಾವಿನಾ ।
ತಸ್ಮಾತ್ ಪಿತ್ತವಿರೋಧೀನಿ ತ್ಯಜೇತ್ಪಿತ್ತಾಧಿಕೇಧಿಕಂ ॥

ಈ ರೀತಿ ರೋಗಾಂತರೋತ್ಪತ್ತಿಗೆ ಅವಕಾಶವಿಲ್ಲದೆ ರೋಗಚಿಕಿತ್ಸೆಯನ್ನು ನಡೆಯಿಸುವುದೊಂದು ಆಯುರ್ವೇದ ಚಿಕಿತ್ಸಾಪದ್ಧತಿಯಲ್ಲಿನ ವೈಶಿಷ್ಟ್ಯ—

ಭರತಖಂಡವು ಇವತ್ತಿಗೆ ಬಡವರನಾಡು. ಅವರಿಗೆ ಬೇಕಾದದ್ದೆಲ್ಲವನ್ನೂ ಅವರು ಸ್ವಂತಪರಿಶ್ರಮದಿಂದಾಗಲಿ ಅಥವಾ ಸ್ವಲ್ಪ ಖರ್ಚಿನಿಂದಾಗಲಿ ಅವರು ಒದಗಿಸಿಕೊಳ್ಳಬೇಕು. ಅವರ ಆರೋಗ್ಯವನ್ನು ಕಾಪಾಡಿಕೊಳ್ಳಲು ಪ್ರತಿದಿನವೂ ಬೇಕಾಗುವ ಔಷಧಿಗಳನ್ನು ಅವರು ದೇಶಾಂತರದಿಂದ ಹೇಳಿದಷ್ಟು ದುಡ್ಡು ಕೊಟ್ಟುಕೊಳ್ಳುವದು ಸಾಧ್ಯವಿಲ್ಲ. ಪಾಶ್ಚಾತ್ಯ ಪದ್ಧತಿಯ ಚಿಕಿತ್ಸೆಯಲ್ಲಿ ಉಪಯೋಗವಾಗುವ ಔಷಧಿಗಳನ್ನು ಅವರು ತಯಾರಿಸಿಕೊಳ್ಳಲಾರರು. ಬೇರೆಯವರು ಇಲ್ಲಿ ತಯಾರಿಸಬೇಕಾದರೂ ಹೆಚ್ಚು ಹಣ ಖರ್ಚುಮಾಡಿ ಲ್ಯಾಬರೇಟರಿಗಳನ್ನು ಸ್ಥಾಪಿಸಬೇಕು. ಹಾಗೆ ತಯಾರಿಸಿದ ಔಷಧಿಗಳಿಗೆ ಹೆಚ್ಚು ಕ್ರಯ ಬೀಳಲೇಬೇಕು. ಆಗ್ಯೂ ಅವರು ಕೊಳ್ಳಲಾರರು. ಆದ್ದರಿಂದ ಆಯುರ್ವೇದದ ಔಷಧಿಗಳೇ ಅವರಿಗೆ ಅನುಕೂಲವೆಂದು ಎಲ್ಲರೂ ಒಪ್ಪಬೇಕು. ಆಯುರ್ವೇದ ಚಿಕಿತ್ಸೆಗೆ ಬೇಕಾಗುವ ಔಷಧಿಗಳನ್ನು ಯಾರುಬೇಕಾದರೂ ಸ್ವಲ್ಪ ಶ್ರಮಪಟ್ಟು ಮೂಲಿಕೆಗಳನ್ನು ಸಂಗ್ರಹಿಸಿದರೆ ತಯಾರಿಸಿಕೊಳ್ಳಬಹುದು. ಅಥವಾ ಗಂದಿಗೆ ಅಂಗಡಿಯ ಸರಕುಗಳನ್ನು ಕೊಳ್ಳುವುದಾದರೂ ಖರ್ಚು ಬಹಳ ಕಡಮೆ ಬೀಳುತ್ತದೆ. ಹೀಗೆ ಸ್ವಲ್ಪ ವ್ಯಯದಿಂದ ಕೆಲವು

ಸಂದರ್ಭಗಳಲ್ಲಿ ಖರ್ಚಿಲ್ಲದೆ ಬಡಭಾರತೀಯರ ಆರೋಗ್ಯಭಾಗ್ಯವನ್ನು ಕಾಪಾಡಲು ಆಯುರ್ವೇದ ಚಿಕಿತ್ಸಾಪದ್ಧತಿಗೆ ದೊರೆತಿರುವುದು ಎರಡನೆಯ ವೈಶಿಷ್ಟ್ಯ.

ಆಯುರ್ವೇದ ಚಿಕಿತ್ಸಾಪದ್ಧತಿಗೆ ಮೂಲಭೂತವಾಗಿರುವ ತ್ರಿದೋಷಗಳ ತತ್ವವು ಸಾಮಾನ್ಯವಾಗಿ ಭಾರತೀಯರೆಲ್ಲರಿಗೂ ಮೈಯ್ಯುಂಡುಹೋಗಿದೆ. ಅವರೆಲ್ಲರೂ ರೋಗಪೀಡಿತರಾಗಿ ಪಾಶ್ಚಾತ್ಯ ಪದ್ಧತಿಯ ವೈದ್ಯರಲ್ಲಿ ಹೋದರೂ ತಮ್ಮ ರೋಗಗಳ ಸ್ವರೂಪ ಸ್ವಭಾವಗಳನ್ನು ತಿಳಿಸುವಾಗ ವಿಶೇಷವಾಗಿ ವಾತಪ್ರಕೋಪ ಪಿತ್ತಪ್ರಕೋಪ ಈ ವಿಷಯಗಳನ್ನೇ ಹೇಳುತ್ತಾರೆ. ಈ ಶಬ್ದಗಳನ್ನೆ ಉಪಯೋಗಿಸುತ್ತಾರೆ. ಪಾಶ್ಚಾತ್ಯವೈದ್ಯರಲ್ಲಿ ಇವು ಇಲ್ಲವಾದುದರಿಂದ ಇವರು ಹೇಳುವ ಮಾತುಗಳಿಗೂ ಅವರ ಅಭಿಪ್ರಾಯಗಳಿಗೂ ಅನೇಕವೇಳೆ ಸರಿಬೀಳದೆ ತಮ್ಮ ಇಷ್ಟಬಂದಂತೆಯೊ, ತಮಗೆ ತೋರಿದಂತೆಯೊ ಏನೋ ಒಂದು ಔಷಧಿ ಕೊಡಬೇಕಾಗುತ್ತದೆ. ಅಲ್ಲಿ ರೋಗಿಯ ಮಾತಿಗೆ ಮನ್ನಣೆಯೇ ಇಲ್ಲ. ಇಂತಹ ಸಂದರ್ಭದಲ್ಲಿ ಚಿಕಿತ್ಸೆ ತಪ್ಪಾಗಬಹುದು. ಆದರೆ ಆಯುರ್ವೇದ ವೈದ್ಯಪದ್ಧತಿಯ ಚಿಕಿತ್ಸೆಯಲ್ಲಿ ಈ ಬಂಡಾಟವಿಲ್ಲ. ರೋಗಿಯು ಹೇಳುತ್ತಿರುವುದೂ ಅದೇ ವಿಷಯ. ವೈದ್ಯನಿಗೆ ಬೇಕಾಗಿರುವುದೂ ಅದೇ ವಿಷಯ. ಹೀಗಾಗಿ ಅನೇಕ ಕಡೆಗಳಲ್ಲಿ ಆಯುರ್ವೇದ ಚಿಕಿತ್ಸೆ ಸುಗಮವಾಗಿ ನಡೆದು ಒಳ್ಳೆ ಫಲವನ್ನು ಕೊಡುತ್ತದೆ. ಇದೊಂದು ಮೂರನೆಯ ವೈಶಿಷ್ಟ್ಯ.

ಯಸ್ಮಿನ್ ದೇಶೇಹಿಯೊಜಾತಸ್ತಜ್ಜಂ ತಸ್ಯಾಷಧಂ ಸ್ಮೃತಂ ॥

ಯಾವ ಮನುಷ್ಯನು ಯಾವ ದೇಶದಲ್ಲಿ ಹುಟ್ಟಿರುತ್ತಾನೊ ಆ ದೇಶದ ಆಹಾರಾಚಾರಗಳು ಅವನಿಗೆ ಹಿತವಾಗಿರುತ್ತವೆ. ಅವನಿಗೆ ರೋಗಬಂದಾಗ್ಯೆ ಅದೇ ವಾತಾವರಣದಲ್ಲಿಯೇ ಹುಟ್ಟಿ ಬೆಳೆದ ಮೂಲಿಕೆಗಳಿಂದ ಸಿದ್ಧಗಳಾದ ಔಷಧಿಗಳು ಹಿತವಾಗುವಷ್ಟು ಪರದೇಶದವು ಹಿತವಾಗಲಾರವು. ಇದು ಒಂದುಬಗೆಯ ಸ್ವತಸ್ಸಿದ್ಧ ಪ್ರಮಾಣ. ಈ ಸ್ವತಸ್ಸಿದ್ಧವನ್ನು ಹಿಡಿದು ವಿಮರ್ಶಿಸುತ್ತ ಹೋದರೂ ಆಯುರ್ವೇದೌಷಧಿಗಳು ಭಾರತೀಯರಿಗೆ ಸ್ವದೇಶದವು ಇವುಗಳಿಂದ ಆಗುವ ಉಪಕಾರವು ಪರದೇಶದ ಔಷಧಿಗಳಿಂದ ಆಗುವುದು ಸಾಧ್ಯವಿಲ್ಲ. ಭಾರತೀಯರಿಗೆ ಆಯುರ್ವೇದೌಷಧಿಗಳು ಇದೊಂದು ರೀತಿಯಿಂದ ವಿಶಿಷ್ಟ ಗುಣಕರಗಳಾಗಿವೆ.

ಚಿಕಿತ್ಸೆಗೆ ಆಧಾರಭೂತವಾದ ನಮ್ಮ ಸ್ಥೂಲಶರೀರವು ಪಂಚಭೂತಗಳ ಸಂಯೋಗದಿಂದ ಹುಟ್ಟಿದೆ ಎಂದು ಎಲ್ಲಾ ಭಾರತೀಯ ದರ್ಶನಶಾಸ್ತ್ರಗಳು ಮತ್ತು ಆಯುರ್ವೇದಶಾಸ್ತ್ರವು ಸಾರಿ ಹೇಳುತ್ತದೆ. ಹಾಗೆಯೇ ಆಯುರ್ವೇದಚಿಕಿತ್ಸೆಗೆ ಉಪಯುಕ್ತಗಳಾದ ಗಿಡಮೂಲಿಕೆಗಳು ಕೂಡ ಪಂಚಭೂತಾತ್ಮಕಗಳೇ ಆಗಿದ್ದು ತದನುಗುಣಗಳಾದ ರಸವೀರ್ಯಗಳನ್ನು ಹೊಂದಿವೆ ಎಂದು ಆಯುರ್ವೇದ ಪ್ರವ್ಯೆ

ಗುಣಶಾಸ್ತ್ರವು ಹೇಳುತ್ತಿದ್ದು ಈ ಎರಡು ಬಗೆಯ ತತ್ವಗಳ ಮೇಲೆ ದೇಹದ ರೋಗ ನಿಶ್ಚಯವೂ ತದನುಗುಣವಾಗಿ ಚಿಕಿತ್ಸಾಯೋಜನೆಯೂ ನಡೆಯುವುದೊಂದು ಆಯುರ್ವೇದ ಚಿಕಿತ್ಸಾಶಾಸ್ತ್ರದ ವೈಶಿಷ್ಟ್ಯ.

ಪ್ಲೇಗು ಎಂದು ಪ್ರಪಂಚದಲ್ಲಿ ಹೆಸರುಗೊಂಡಿರುವ ರೋಗವನ್ನು ಪಾಶ್ಚಾತ್ಯರು ಭರತಖಂಡಕ್ಕೆ ಅದು ಹೊಸರೋಗವೆಂದು ಸಾರಿ ಹೊಸದಾದ ಚಿಕಿತ್ಸಾ ಯೋಜನೆಯನ್ನು ಮಾಡುತ್ತಿದ್ದಾರೆ. ಆಯುರ್ವೇದದಲ್ಲಿ ಅದು ಹೇಳಿಯೇ ಇಲ್ಲವೆಂದು ಸಹಾ ಅವರು ಹೇಳುತ್ತಾರೆ.

ಆಯುರ್ವೇದ ಚಿಕಿತ್ಸಕರು ಪ್ಲೇಗನ್ನು ಸುಲಭವಾಗಿ ಚಿಕಿತ್ಸಿಸುತ್ತಾರೆ. ಆಯುರ್ವೇದಿಗಳಿಗೆ ರೋಗದ ಹೆಸರಿನಿಂದ ಹೆಚ್ಚಾಳವೇನೂ ಇಲ್ಲ. ಅವರಲ್ಲಿ ಆ ಹೆಸರಿನ ರೋಗವಿರಲಿ ಇಲ್ಲದಿರಲಿ ತಮ್ಮ ಮೂಲಸೂತ್ರದಂತೆ ದೋಷನಿರ್ಣಯ ಮಾಡಿಕೊಂಡು ತದನುಗುಣವಾಗಿ ಚಿಕಿತ್ಸಾಕ್ರಮವನ್ನು ಯೋಜನೆಮಾಡಿದರೆ ತೀರಿತು. ರೋಗವನ್ನು ಗುಣಪಡಿಸುವುದು ಸಾಧ್ಯವಿದೆ. ಈರೀತಿ ಚಿಕಿತ್ಸಾಯೋಜನಪದ್ಧತಿ ಬೇರೆ ಯಾವ ಚಿಕಿತ್ಸಾಶಾಸ್ತ್ರದಲ್ಲಿಯೂ ಸಾಧ್ಯವಿಲ್ಲ. ಇದೂ ಒಂದು ಆಯುರ್ವೇದ ಚಿಕಿತ್ಸೆಯಲ್ಲಿರುವ ವೈಶಿಷ್ಟ್ಯ. ಇವೆಲ್ಲವೂ ಚಿಕಿತ್ಸಾ ಪದ್ಧತಿಯಲ್ಲಿ ಸಾಮಾನ್ಯವಾಗಿರುವ ವೈಶಿಷ್ಟ್ಯಗಳು. ಹೀಗೆಯೇ ಪ್ರತಿ ರೋಗವನ್ನೂ ವಿಮರ್ಶಿಸುತ್ತ ಹೋದರೆ ಇನ್ನೂ ಅನೇಕ ಚಿಕಿತ್ಸಾ ಚಮತ್ಕಾರಗಳನ್ನು ತೋರಿಸಬಹುದು.

ಇಂತಹ ಉತ್ತಮವಾದ ಚಿಕಿತ್ಸಾಪದ್ಧತಿಯು ನಮ್ಮಲ್ಲಿದ್ದೂ ನಾವು ಬೇರೆ ಚಿಕಿತ್ಸಾ ಪದ್ಧತಿಯ ಬೆನ್ನುಹತ್ತಿ ನಮ್ಮ ಆರೋಗ್ಯವನ್ನೂ ನಮಗೆ ಬಹಿಃ ಪ್ರಾಣದಂತಿರುವ ದ್ರವ್ಯವನ್ನೂ ಹಾಳುಮಾಡಿಕೊಳ್ಳುತ್ತಿರುವುದನ್ನು ನಾವು ಆಲೋಚಿಸಿಕೊಂಡರೆ "ಕರಭಮನುಸರಾಮಃ ಕಾಮಧೇನೌ ಸ್ಥಿತಾಯಾಂ" ಎಂದರೆ ಕಾಮಧೇನುವನ್ನು ಹತ್ತರ ಇರಿಸಿಕೊಂಡು ಕತ್ತೆಯ ಹಾಲು ಕರೆಯಲು ಹೋಗಿ ಒದೆ ತಿಂದಹಾಗಾಗಿದೆ.

ಆದ್ದರಿಂದ ಮಹಾಜನಗಳು ಈಗಲಾದರೂ ಎಚ್ಚರಗೊಂಡು ಆಯುರ್ವೇದ ಚಿಕಿತ್ಸಾ ಪದ್ಧತಿಯು ನಮ್ಮದು-ನಮ್ಮ ಪ್ರಕೃತಿಗೆ ಹೊಂದಿಕೆಯಾದದ್ದು ಎಂದು ಭಾವಿಸಬೇಕು. ಯುದ್ಧದ ಪರಿಸ್ಥಿತಿಯಿಂದ ಪಾಶ್ಚಾತ್ಯ ಔಷಧಿಗಳು ಒಂದಕ್ಕೆ ನಾಲ್ಕರಷ್ಟು ಬೆಲೆಯೇರಿರುವಾಗ ನಮ್ಮದೇ ಆಗಿರುವ ಆಯುರ್ವೇದ ಚಿಕಿತ್ಸಾ ಪದ್ಧತಿಯು ದೇಶದಲ್ಲೆಲ್ಲಾ ಹರಡುವಂತೆ ಪ್ರೋತ್ಸಾಹಿಸಿ ಆಯುರ್ವೇದ ಚಿಕಿತ್ಸಾ ಪದ್ಧತಿಯನ್ನು ಪುನರುಜ್ಜೀವನಗೊಳಿಸಬೇಕಾಗಿ ತಮ್ಮಲ್ಲಿ ನನ್ನ ಬೇಡಿಕೆ.

29-12-1942.

ಪಿ ಸೂರ್ಯನಾರಾಯಣಶಾಸ್ತ್ರಿ

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

## 12ನೇ ನಿ. ಕ. ಮತ್ತು 1ನೇ ಮೈ. ಸಂ. ಆಯುರ್ವೇದ ಸಮ್ಮೇಳನದ ಪರಿಷತ್ತಿನಲ್ಲಿ ಪಠಿಸಿದ ಭಾಷಣ.

# The Scientific Aspect of Ayurveda.

# ಆಯುರ್ವೇದ ವೈಜ್ಞಾನಿಕದೃಷ್ಟಿ.

(ಲೇಖಕ—ಪೋಟಗಾನಹಳ್ಳಿ ಮಹದೇವಶಾಸ್ತ್ರಿ, L.A.M.S. ಆ॥ ವಿ॥ ಬೆಂಗಳೂರು.)

ಸುಮಾರು ಎರಡೂವರೆಸಾವಿರ ವರ್ಷಗಳ ಹಿಂದೆ ಭಾರತಭೂಮಿಯಲ್ಲಿ ಪ್ರಚಲಿತವಾಗಿದ್ದ ಆಯುರ್ವೇದ ಪದ್ಧತಿಯು ವೈಜ್ಞಾನಿಕವಾಗಿತ್ತೇ ಎಂಬ ಪ್ರಶ್ನೆಯು ಆಧುನಿಕ ವಿದ್ಯಾವಂತರೆಲ್ಲರಲ್ಲೂ ಉಂಟಾಗುತ್ತಿದೆ. ಇದಕ್ಕೆ ಕಾರಣವೇನು? ಈಗ ಶಿಕ್ಷಣವನ್ನು ಪಡೆಯುತ್ತಿರುವ ವಿದ್ಯಾರ್ಥಿಗಳು ಪ್ರಾರಂಭದಲ್ಲಿ ಪಾಶ್ಚಾತ್ಯರಿಂದ ವೃದ್ಧಿಗೊಳಿಸಿರುವ ವಿಜ್ಞಾನಶಾಸ್ತ್ರವನ್ನು ಅಭ್ಯಾಸಮಾಡಿ ಅದರಲ್ಲಿ ಪಾರಂಗತರಾಗುತ್ತಿರುವುದರಿಂದ ಯಾವುದೊಂದು ವಿಚಾರವನ್ನೂ ಕೂಡ ತಾವು ತಿಳಿದುಕೊಂಡಿರುವ ರೀತಿಯಲ್ಲೇ ವಿಮರ್ಶಿಸುತ್ತಾರೆ. ಇದು ಸಾಮಾನ್ಯ ವಾಡಿಕೆ. ಹಿಂದಿನ ಆಯುರ್ವೇದ ಪದ್ಧತಿಯೊಂದನ್ನೇ ಅನುಸರಿಸಿಕೊಂಡು ಈಗಿನ ಪ್ರಯೋಗಸಿದ್ಧವಾದ ವಿಜ್ಞಾನದ ಕಡೆಗೆ ಲೇಶವೂ ಗಮನಕೊಡದೆ ಇರುವ ಕೆಲವು ವಿದ್ವಾಂಸರನ್ನು ವಿಚಾರಿಸುವಾಗ ಸಾಧಾರಣವಾಗಿ ಅವರೆಲ್ಲರೂ ಏನು ಹೇಳುವರು? ವಿಜ್ಞಾನಶಾಸ್ತ್ರವೂ ಆಯುರ್ವೇದವೂ ಸಮನ್ವಯವಾಗುವುದಿಲ್ಲ. ಆಯುರ್ವೇದಶಾಸ್ತ್ರವು ವಿಜ್ಞಾನವನ್ನುನೋಡಿಕೊಂಡು ಬರೆದದ್ದಲ್ಲ. ಇದು ಅದಿಮವಾದುದು. ಇದರಲ್ಲಡಗಿರುವ ತತ್ವಗಳೆಷ್ಟೋ ವೈಜ್ಞಾನಿಕರಿಗೆ ಇನ್ನೂ ಅರ್ಥವಾಗಿಲ್ಲ. ಇದು ಆಯುರ್ವೇದಕ್ಕೆ ಕಳಂಕವನ್ನು ತರುವುದಕ್ಕಾಗಲೀ ಅಥವಾ ಪಂಡಿತರನ್ನು ಭ್ರಮೆಗೆ ಎಳೆಯುವುದಕ್ಕಾಗಲೀ ಇರುವ ದೊಡ್ಡ ತೊಡಕು ಎನ್ನಬಹುದು. ತುಲನಾತ್ಮಕ ದೃಷ್ಟಿಯಿಂದ ನೋಡುವಾಗ ನಿಷ್ಪಕ್ಷಪಾತದಿಂದ ವಿಮರ್ಶಿಸಬೇಕು. ಪಂಚಭೂತಗಳಿಂದುತ್ಪನ್ನವಾದ ಶಾಸ್ತ್ರವನ್ನು ಒಂದುಕಡೆಯಲ್ಲೂ ಪಂಚಭೂತಗಳನ್ನೇ ಸಂಬದಿರುವ ಶಾಸ್ತ್ರವನ್ನು ಮತ್ತೊಂದು ಕಡೆಯಲ್ಲೂ ಇಟ್ಟುಕೊಂಡು ನೋಡೋಣ. ಎಲ್ಲಾ ಶಾಸ್ತ್ರಗಳಲ್ಲೂ ಅಭಿಮತ (theory) ವಿದ್ದೇ ಇರುತ್ತದೆ. ಈ ತತ್ವವನ್ನನುಸರಿಸಿ ಮುಂದೆ ಶಾಸ್ತ್ರವನ್ನು ಬೆಳೆಸುತ್ತಾರೆ. ಇದು ತಚ್ಛಾಸ್ತ್ರಜ್ಞರ ಸಮೂಹದಲ್ಲಿ ಆಗಾಗ್ಗೆ ಚರ್ಚಿಸಲ್ಪಟ್ಟು ಸಮರ್ಥನೆ ದೊರೆತುದನ್ನು ಪುಷ್ಟೀಕರಿಸುತ್ತಲೂ, ಇಲ್ಲವಾದರೆ ಖಂಡಿಸುತ್ತಲೂ ಇರುವುದು ವಾಡಿಕೆ. ಪುಷ್ಟೀಕರಿಸಲ್ಪಡುವ ವಿಷಯಗಳು ಪ್ರಯೋಗಗಳಲ್ಲಿ ಹೆಚ್ಚುಹೆಚ್ಚಾಗಿ ಸೇರಿಸಲ್ಪಡುತ್ತವೆ. ಇವು ಜನತೆಗೆ ಉಪಯೋಗವಾದಷ್ಟೂ ಇವುಗಳಲ್ಲಿ ವಿಶ್ವಾಸವು ಹೆಚ್ಚುತ್ತದೆ.

ಹೀಗಿರುವುದೂ ಸಹ ಕಾಲಾಂತರದಲ್ಲಿ ಪರಿವರ್ತನೆಗಳನ್ನು ಹೊಂದಬಹುದು. ಇದಕ್ಕೆ ಸಾಕಷ್ಟು ನಿದರ್ಶನಗಳೂ ಇವೆ. ಪ್ರತಿಯೊಂದು ಶಾಸ್ತ್ರದಲ್ಲೂ ಹೀಗಿವೆ ಎಂದಮೇಲೆ ಆಯುರ್ವೇದದಲ್ಲೂ ಹೀಗಿದೆಯೇ? ಈಗಿನಂತೆ ಪೂರ್ವಕಾಲದಲ್ಲೂ ವಿದ್ವಾಂಸರ ಸಭೆಗಳು ಸೇರಿ ವಿಷಯಗಳು ಚರ್ಚಿಸಲ್ಪಡುತ್ತಿದ್ದುವೇ ಮತ್ತು ಒಬ್ಬರು ತೀರ್ಮಾ ನಿಸಿದುದನ್ನು ಮತ್ತೊಬ್ಬರು ಅನುಮೋದಿಸುವುದಾಗಲೀ ಅಥವಾ ವಿರೋಧಿಸುವು ದಾಗಲೀ ಆಗುತ್ತಿತ್ತೇ ಎಂದರೆ ಅದಕ್ಕೂ ಸಮಾಧಾನವನ್ನು ಕೊಡಬಹುದು.

ಗರ್ಭಸ್ಯ ಹಿ ಸಂಭವತಃ ಪೂರ್ವಂ ಶಿರಃ ಸಂಭವತೀತ್ಯಾಹಶೌನಕಃ ಶಿರೋ ಮೂಲತ್ವಾದ್ದೇಹೇಂದ್ರಿಯಾಣಾಂ ॥ ಹೃದಯಮಿತಿಕೃತವೀರ್ಯೋ ಬುದ್ಧೇರ್ಮನ ಸಶ್ಚಸ್ಥಾನತ್ವಾತ್ ॥ ನಾಭಿರಿತಿಪಾರಾಶರ್ಯಸ್ತತೋಹಿ ವರ್ಧತೇದೇಹೋದೇಹಿನಃ॥ ಪಾಣಿಪಾದಮಿತಿಮಾರ್ಕಂಡೇಯಸ್ತನ್ಮೂಲತ್ವಾಚ್ಚೇಷ್ಟಾಯಾಃ ಗರ್ಭಸ್ಯ ॥ ಮಧ್ಯ ಶರೀರಮಿತಿಸುಭೂತಿರ್ಗೌತಮಸ್ತನ್ನಿಬದ್ಧತ್ವಾತ್ ಸಮಗಾತ್ರಸಂಭವಸ್ಯ ॥

ತತ್ತುನಸಮ್ಯಕ್। ಸರ್ವಾಂಗಪ್ರತ್ಯಂಗಾನಿಯುಗಪತ್ಸಂಭವಂತೀತ್ಯಾಹ ಧನ್ವಂ ತರಿಗರ್ಭಸ್ಯಸೂಕ್ಷ್ಮತ್ವಾನ್ನೋಪಲಭ್ಯಂತೇವಟಾಂಕುರವಚ್ಚೂತಫಲವಚ್ಚ ॥

ಹೀಗೆ ಗರ್ಭದಲ್ಲಿ ಶಿಶುವಿನ ಯಾವ ಅಂಗ ಅಥವಾ ಭಾಗವು ಮೊದಲು ಉಂಟಾಗುವುದೆಂದು ಋಷಿಗಳಲ್ಲಿ ಮತಭೇದವುಂಟಾದಾಗ ಧನ್ವಂತರಿಯು ಸದುತ್ತರ ಕೊಟ್ಟಿರುವುದನ್ನು ಇಂದಿಗೂ ಎಲ್ಲರೂ ಒಪ್ಪತಕ್ಕುದಾಗಿದೆ. ಹೀಗೆಯೇ ವಾತಕಲಾ ಜ್ಞಾನವನ್ನು ಕುರಿತು ಜಿಜ್ಞಾಸ ಮಾಡುತ್ತಿದ್ದಾಗ ಸಾಂಕೃತ್ಯಾಯನರು ವಾತದ ಗುಣವನ್ನು ಹೇಳಿದಾಗ ಅದನ್ನು ಭಾರದ್ವಾಜರು ಅನುಮೋದಿಸಿದರು. ಕಾಂಕಾಯನರು ಹೇಳಿದುದನ್ನು ಧಾಮಾರ್ಗವರು ಒಪ್ಪಿದರು. ಅನೇಕ ಉದಾಹರಣೆಗಳು ಹೀಗೆ ದೊರೆಯುವುದರಿಂದ ಯಾರೊಬ್ಬರು ಮಾತ್ರ ಅವರಿಗೆ ತೋರಿದಂತೆ ಬರೆದಿದ್ದಾರೆಂದು ಹೇಳುವ ಹಾಗಿಲ್ಲ. ಇನ್ನು ಅವರು ಬರೆದಿರುವುದು ವೈಜ್ಞಾನಿಕವೇ? ನೋಡೋಣ.

ಪಾಶ್ಚಾತ್ಯ ವಿಜ್ಞಾನವು ಎಲ್ಲಾ ಅವಸ್ಥೆಗಳಲ್ಲೂ ಪ್ರಯೋಗ (Experiment), ಕಣ್ಣರಿಕೆ (Observation) ಮತ್ತು ಅನುಮಾನ (Inference) ಗಳನ್ನು ಇಟ್ಟುಕೊಂಡಿದೆ. ಆಯುರ್ವೇದದಲ್ಲೂ ಪ್ರತ್ಯಕ್ಷ, ಅನುಮಾನ, ಆಗಮಗ ಳಿಂದ ತೀರ್ಮಾನ ಮಾಡಿದ್ದಾರೆ. Cause and effect ಎಂಬುದನ್ನು "ಕಾರ ಣಾನುರೂಪಂ ಕಾರ್ಯಂ" ಎಂದು ಹೇಳುತ್ತಾರೆ. ಸೃಷ್ಟಿಯು ಪಂಚಭೂತಗಳಿಂ ದಾಗಿದೆ ಎಂದು ದಾರ್ಶನಿಕಮತವನ್ನು ತೆಗೆದುಕೊಂಡಿದ್ದಾರೆ. ಪಂಚಭೂತಗಳ ತರತಮ ಸಂಯೋಗಗಳಿಂದ ವಿವಿಧ ಪದಾರ್ಥಗಳು ಉಂಟಾಗಿವೆ ಎಂದು ಹೇಳು

ತ್ತಾರೆ. ಈಗಿನ ಶಾಸ್ತ್ರವು ಸೃಷ್ಟಿಯಲ್ಲಿ ತೊಂಭತ್ತೆರಡು ತತ್ವಗಳಿವೆಯೆಂದೂ ಪ್ರತಿಯೊಂದು ವಸ್ತುವೂ ಈ ಯಾವುದಾದರೂ ತತ್ವಗಳ ಸಂಯೋಗದಿಂದವೇ ಆಗಿರುವುದೆಂದೂ ಸಿದ್ಧಪಡಿಸಿರುತ್ತದೆ. ಈಗಿನವರು ಈ ತತ್ವಗಳನ್ನು (elements) ತಿಳಿದ ರೀತಿಯಲ್ಲೇ ಪಂಚಭೂತಗಳನ್ನೂ ಐದು ತತ್ವಗಳೆಂದು ಭಾವಿಸಿ ಎಲಿಮೆಂಟ್ಸ್ ಎಂದು ಹೇಳುತ್ತಿದ್ದಾರೆ. Element ಎಂದರೆ ಬೇರೆಯೊಂದು ಪದಾರ್ಥದ ಸಂಯೋಗವಿಲ್ಲದೆ ತಾನಾಗಿ ಒಂದೇ ಅಭೇದ್ಯವಾಗಿರುವುದು. ಒಂದು ಯೌಗಿಕ (Compound)ದಲ್ಲಿ ಕನಿಷ್ಟಪಕ್ಷ ಎರಡು ತತ್ವಗಳಾದರೂ ಇರಬೇಕು. ಈ ದೃಷ್ಟಿಯಿಂದ ದಾರ್ಶನಿಕರು ಹೇಳುವ ಭೂತಗಳನ್ನೂ elements ಅಲ್ಲವೆಂದು ಹೇಳುತ್ತಾರೆ. ಉದಾಹರಣೆಗೆ ಪೃಥ್ವೀಭೂತದಲ್ಲಿ ಅನೇಕ ಎಲಿಮೆಂಟ್ಸ್ ಇರುತ್ತವೆ. ಜಲದಲ್ಲಿ ಉದಜನಕ ಮತ್ತು ಊಷ್ಮಜನಕಗಳೆಂಬ ವಾಯುಗಳು ಪ್ರೈಕಮರ್ಯಾದೆಯಲ್ಲಿ ರಾಸಾಯನಿಕರೂಪವನ್ನು ಹೊಂದಿವೆ ಇತ್ಯಾದಿ. ಆಕಾಶದಲ್ಲಿ ಅಸ್ತಿತ್ವವೇ ಇಲ್ಲದಿರುವುದರಿಂದ ಇದು ತತ್ವವಲ್ಲವೆಂದು ವಾದಿಸುತ್ತಾರೆ. ಆದರೆ ದಾರ್ಶನಿಕರು ಇವನ್ನು ರಸಾಯನಿಕ ದೃಷ್ಟಿಯಿಂದ ವಿವರ್ಶಿಸಿಲ್ಲ. ಸೃಷ್ಟಿಯಲ್ಲಿರುವ ಪ್ರಾಣಿ, ಸಸ್ಯ ಇತ್ಯಾದಿಗಳನ್ನೂ ಗಮನಿಸಿ ಮುಖ್ಯವಾಗಿ ಐದು ಭೂತಗಳನ್ನು ಪ್ರಧಾನವಾಗಿಟ್ಟುಕೊಂಡು ಇವುಗಳ ಸಂಯೋಗದಿಂದ ವಸ್ತುಗಳಾಗುವುವೆಂದು ನಿಶ್ಚಯಮಾಡಿದರು. ಆದುದರಿಂದ ಇವು ದಾರ್ಶನಿಕತತ್ವ (Elements)ಗಳೇ ಹೊರತು ಆಧುನಿಕತತ್ವಗಳಲ್ಲ. ಇವು ಮೂಲಪ್ರಕೃತಿಯಿಂದಾದುವೆಂದು ಅವರ ಮತ. ಈ ಪ್ರಕೃತಿಯೊಂದಿಗೆ ಪುರುಷನು (ಆತ್ಮ) ಸೇರಿದರೆ ಗರ್ಭವಾಗುವುದೆಂದೂ ಪ್ರಕೃತಿಯಿಂದಾಗುವ ಅಹಂಕಾರವು ತ್ರಿಗುಣಾತ್ಮಕವೂ ಎಂದು ಸಾರಿರುತ್ತಾರೆ. ಗರ್ಭಕಾಲದಲ್ಲಿ ಆತ್ಮನು ಸೇರುವುದು ಮುಖ್ಯ. ಇಲ್ಲವಾದರೆ ಜೀವಿಯಾಗುವುದಿಲ್ಲ. ಬೇರೆಯೋಂದು ಕಡೆಯಲ್ಲಿ ಗರ್ಭಧಾರಣವಾಗಿ ಮುಂದೆ ಅಭಿವೃದ್ಧಿಯಾಗುವುದನ್ನು ಸಸಿಗೆ ಹೋಲಿಸುತ್ತಾರೆ.

ಧ್ರುವಂ ಚತುರ್ಣಾಂ ಸಾನ್ನಿಧ್ಯಾತ್ ಗರ್ಭಸ್ಯಾದ್ವಿಧಿಪೂರ್ವಕಃ ।
ಋತುಕ್ಷೇತ್ರಾಂಬುಬೀಜಾನಾಂ ಸಾಮಗ್ರ್ಯಾದಂಕುರೋಯಥಾ ॥

ಋತು (ಕಾಲ), ಕ್ಷೇತ್ರ (ಗರ್ಭಸ್ಥಾನ), ಅಂಬು (ಪೋಷಕದ್ರವಗಳು), ಬೀಜ (ಶುಕ್ರ) ಇವಿಷ್ಟೂ ಶುದ್ಧವಾಗಿ ಸೇರಿದರೆ ಬೀಜದಿಂದ ಮೊಳಕೆಯಾಗುವಂತೆ ಗರ್ಭವುಂಟಾವುದೆಂದು ಹೇಳಿದ್ದಾರೆ. ವೈಜ್ಞಾನಿಕರೂ ಇವನ್ನೇ ಒಪ್ಪುತ್ತಾರೆ. ಆದರೆ ಆತ್ಮನ ವಿಷಯವನ್ನು ತೆಗೆದುಕೊಂಡಿಲ್ಲ. ಗರ್ಭದಲ್ಲಿ ಕೇವಲ ಶುಕ್ರಾರ್ತವ ಸಂಯೋಗನಾದರೆ ಫಲ ಉಂಟಾಗುವುದೆನ್ನುತ್ತಾರೆ ಹಾಗೆ ಫಲವಾಗಬೇಕಾದರೆ

ಶುಕ್ರಾರ್ತವಗಳಲ್ಲಿ ಜೀವವಿರಬೆಕೇ ಬೇಡವೇ ? ಇವನ್ನು ಜೀವಾಣುಗಳೆಂದು (Living cells) ಹೇಳುವುದರಿಂದ ಜೀವವಿರಬೇಕೆಂದು ಹೇಳಬೇಕು. ಈ ಜೀವಾಣುಗಳು ಗರ್ಭಕೋಶದಲ್ಲಿ ಒಂದು ನಿಶ್ಚಿತ ಪರಿಸ್ಥಿತಿಯಲ್ಲಿರುವಾಗ ಇವೆರಡಕ್ಕೂ ರಸಾಯಿನಕ ಪರಿವರ್ತನೆಯಾಗಿ (Bio-chemical change) ಅವುಗಳಿಗೆ ಪೋಷಕ ಸಾಮಗ್ರಿಗಳು ಸೇರಿದಂತೆಲ್ಲಾ ಬೆಳೆಯುವವೆಂದು ಸಿದ್ಧಪಡಿಸಿರುತ್ತಾರೆ. ಇನ್ನೂ ಸರಳವಾಗಿ ಹೇಳಬೇಕೆಂದರೆ ವಿದ್ಯುತ್ಕೋಶದ ನಿದರ್ಶನವನ್ನು ಹೇಳಬಹುದು. ಹೇಗೆಂದರೆ ಕೋಶಕ್ಕೆ ಯೋಗ್ಯವಾದ ಪಾತ್ರೆ (ಗಾಜು, ಪಿಂಗಾಣಿ, ಆದಿ) ಯಲ್ಲಿ ಉತ್ತೇಜಕ ದ್ರವ (Electrolyte) ವನ್ನು ಹಾಕಿ ಜಸದ ಮತ್ತು ತಾಮ್ರ ರೇಖುಗಳನ್ನು ಅದ್ದಿ ಬಾಹ್ಯತಃ ಇವೆರಡಕ್ಕೂ ಲೋಹಸ್ಪರ್ಶ (ತಂತಿಯೋಗ) ಮಾಡಿಸಿದರೆ ವಿದ್ಯುತ್ಪ್ರವಾಹವಾಗುವಂತೆಯೇ ನಮ್ಮ ದೇಹವನ್ನೂ ವಿದ್ಯುತ್ಕೋಶಕ್ಕೆ ಹೋಲಿಸಬಹುದು. ಈ ಕೋಶದಲ್ಲಿ ರಸಾಯನಿಕ ಕಾರ್ಯವು ನಡೆಯುತ್ತಿರುವುದರಿಂದ ಇದಕ್ಕೂ ಜೀವವಿದೆಯೆಂದೂ ಅದರಲ್ಲಿರುವ ವಸ್ತುಗಳು ಶಿಥಿಲವಾದರೆ ಕಾರ್ಯವು ಕಡಿಮೆಯಾಗುತ್ತಾ ಕೊನೆಗೆ ನಿಂತುಹೋಗುವಂತೆಯೇ ಈ ದೇಹಕ್ಕೂ ಹೇಳಬಹುದು. ವಿದ್ಯುಚ್ಛಕ್ತಿಯಿಂದ ಆಶ್ಚರ್ಯಕರವಾದ ಕೆಲಸಗಳನ್ನೆಲ್ಲಾ ನಡೆಸುತ್ತಿರುವುದು ಎಲ್ಲರಿಗೂ ತಿಳಿದಿದೆ. ಹೀಗೆಯೇ ಮನುಷ್ಯನು ಎಂಬುದರೂ ಒಂದು ಹೆಚ್ಚಿನ ವಿಚಾರವಿದೆ. ಮನುಷ್ಯನಿಗೆ ತಿಳುವಳಿಕೆ ಇದೆ. ತಾನು ಮಾಡುವುದರಲ್ಲಿ ವಿವೇಚನೆಯನ್ನಿಟ್ಟುಕೊಳ್ಳುತ್ತಾನೆ. ಹಾಗೆ ವಿದ್ಯುತ್ಕೋಶಕ್ಕೆ ತಿಳುವಳಿಕೆ ಇದೆ ಎಂದು ಯಾರೂ ಸಾಧಿಸಲಾರರು. ತನ್ನಿಂದ ಹೊರಡುವ ಶಕ್ತಿಯಿಂದ ದೀಪವೇ ಉರಿಯುತ್ತಿದೆಯೋ, ಗಂಟೆಯೇ ಶಬ್ದ ಮಾಡುತ್ತಿದೆಯೋ ಅಥವಾ ಯಾವುದಾದರೊಂದು ಯಂತ್ರವೇ ನಡೆಯುತ್ತಿದೆಯೋ ಅದನ್ನು ತಿಳಿದುಕೊಳ್ಳಲಾರದು. ಮನುಷ್ಯನು ತನ್ನ ಬುದ್ಧಿಯಿಂದ ತಾನು ಮಾಡುವುದನ್ನೂ ಇತರರು ಮಾಡುತ್ತಿರುವುದನ್ನೂ ತಿಳಿಯುತ್ತಾನೆ. ಇದು ಹೇಗೆ ? ಇದನ್ನು ಯಾರು ಮಾಡಿಸುವವರು ? ವಿದ್ಯುತ್ಕೋಶವನ್ನು ಮನುಷ್ಯನು ಕಲ್ಪಿಸಿ ಅದರಿಂದ ಕೆಲಸವನ್ನು ಮಾಡಿಸುತ್ತಾನೆ. ಮನುಷ್ಯನಿಗೆ ಯಾರು ಈ ಶಕ್ತಿಯನ್ನು ಕೊಟ್ಟರು ? ಈ ಪ್ರಶ್ನೆಗೆ ಉತ್ತರವೇನೆಂದರೆ ಪ್ರಕೃತಿಧರ್ಮ (Nature's law) ಎನ್ನುವರು. ಈ ಪ್ರಕೃತಿ ಧರ್ಮವನ್ನು ,ಯಾರು ಮಾಡಿದರೆಂದರೆ ಗೊತ್ತಿಲ್ಲವೆಂದು ಉತ್ತರಬರುತ್ತದೆ. ಇದಕ್ಕಾಗಿಯೇ ಆಯುರ್ವೇದದಲ್ಲಿ ಆತ್ಮನು ಇವುಗಳ ಕಾರ್ಯವನ್ನು ನಡೆಸುತ್ತಾನೆಂದು ಹೇಳಿದ್ದಾರೆ. ಮನಸ್ಸಿನ ಶುದ್ಧಸ್ಥಿತಿಗೆ ಸಾತ್ವಿಕವೆಂದೂ, ಕಾರ್ಯಲಾಭ, ಯಾಜಮಾನ್ಯಾದಿಗಳನ್ನು ನಡೆಸುವ ಸ್ಥಿತಿಗೆ ರಾಜಸವೆಂದೂ, ಅಜ್ಞಾನ, ದುರ್ಬುದ್ಧಿಗಳ ಅವಸ್ಥೆಗೆ ತಾಮಸವೆಂದೂ

ಮೂರುಗುಣಗಳನ್ನೂ ನಿರೂಪಿಸಿದ್ದಾರೆ. ಈ ಗುಣಗಳಿಗನುಸಾರವಾಗಿ ಬುದ್ಧಿಯಿರುತ್ತದೆ. ಆದುದರಿಂದ ಮನಸ್ಸಿಗೆ ರಜೋದೋಷ, ತಮೋದೋಷಗಳಿವೆ ಎಂದು ಹೇಳಿರುತ್ತಾರೆ.

ಹಿಂದೂ ಶಾಸ್ತ್ರಗಳೆಲ್ಲವೂ ಆತ್ಮನನ್ನು ಕೊಂಡಾಡುತ್ತವೆ. ಏಕೆಂದರೆ ಈ ದೇಹವು ಪುರುಷಾರ್ಥಸಾಧನೆಗಾಗಿರುವುದೆಂದು ಅವರುಗಳ ಮತ. ಇದರಿಂದ ದೈವ ಭಕ್ತಿ, ಪರೋಪಕಾರ, ಪ್ರಾಮಾಣಿಕತೆ, ಪಾಪಭೀತಿ, ಸಮಾಜಕ್ಕುಪಕಾರ ಮುಂತಾದುವು ಸ್ಥಿರವಾಗಿ ನೆಲೆಸುವುವು. ಈ ಒಂದು ಸ್ಥಿರನಂಬಿಕೆಯಿಂದಲೇ ಭಾರತಭೂಮಿಯಲ್ಲಿ ಋಷಿಗಳ ಕಾಲ ಮೊದಲುಗೊಂಡು ಇಲ್ಲಿಯವರೆಗೂ ಧರ್ಮಪ್ರಚಲಿತವಾಗಿರುವುದು. ಮಧ್ಯೆ ಅನೇಕ ತೊಂದರೆಗಳು ಬಂದಾಗ್ಯೂ ಆತ್ಮನಲ್ಲಿರುವ ನಂಬಿಕೆಯೇ ಧರ್ಮವನ್ನು ಕಾಪಾಡಿರುತ್ತದೆ. ಆತ್ಮನಲ್ಲಿ ನಂಬಿಕೆಯಿಲ್ಲದಿರುವ ವೈಜ್ಞಾನಿಕರಿಗೆ ಧರ್ಮಬುದ್ಧಿ ಎಂದರೆ ಅರ್ಥವೇ ಬೇರೆ. ಈಗಲೀಗ ಕೆಲವು ವೈಜ್ಞಾನಿಕರು ಆತ್ಮನ ಕಡೆಗೆ ಗಮನಕೊಡುತ್ತಿದ್ದಾರೆ.

ಆಯುರ್ವೇದದಲ್ಲಿ ಐದು ಕರ್ಮೇಂದ್ರಿಯಗಳೂ, ಐದು ಜ್ಞಾನೇಂದ್ರಿಯಗಳೂ ಇವೆ ಎಂದೂ ಮನಸ್ಸು ಉಭಯಾತ್ಮಕವಾದುದೆಂದೂ ಆಯಾ ಇಂದ್ರಿಯಕ್ಕೆ ಪ್ರತ್ಯೇಕ ಗುಣವಿದೆ ಎಂದೂ ಹೇಳಿದೆ. ಇದು ವಿಜ್ಞಾನ ಸಮ್ಮತವೇ ಆಗಿದೆ. ಇಂದ್ರಿಯಾರ್ಥಗಳನ್ನೂ ಒಪ್ಪಬೇಕಾದ್ದೇ ಸರಿ. ಶಾರೀರಸ್ಥಾನದಲ್ಲಿ ಬಹುಮಟ್ಟಿಗೆ ವ್ಯತ್ಯಾಸವಿದೆ, ಇದಕ್ಕೆ ಕಾರಣಗಳುಂಟು. ಹಿಂದೆ ಶವಚ್ಛೇದನಮಾಡುತ್ತಿದ್ದ ಕ್ರಮಕ್ಕೂ ಈಗ್ಯೂ ತಾರತಮ್ಯವಿದೆ. ಸಾಧಗಳಲ್ಲೂ ವ್ಯತ್ಯಾಸವಿದೆ. ಈಗ ಬದುಕಿರುವ ಶರೀರದಲ್ಲಿ ಒಳಗಡೆ ನಡೆಯುತ್ತಿರುವ ಕಾರ್ಯಗಳನ್ನು ನೋಡುವುದಕ್ಕೆ ಅನೇಕ ರೀತಿಯ ಯಂತ್ರಗಳಿವೆ. ಶಸ್ತ್ರಗಳು ಶಲ್ಯತಂತ್ರದ ವರ್ಣನೆಯಂತಿದ್ದರೂ ಈಚೆಗೆ ಅವನ್ನು ಬಹುಮಟ್ಟಿಗೆ ವೃದ್ಧಿಪಡಿಸಿರುತ್ತಾರೆ. ಶರೀರದ ಯಾವ ಭಾಗವನ್ನಾದರೂ ಸಂಮೂರ್ಛಿಸಿ ಕೆಲಸಗಳನ್ನು ಆಗಲೂ ಮಾಡುತ್ತಿದ್ದರು. ಈಗ ನಡೆಯುವುದನ್ನು ಇನ್ನೂ ಉತ್ತಮಪಡಿಸಿರುತ್ತಾರೆ. ಶಸ್ತ್ರಚಿಕಿತ್ಸೆಯು ಹಿಂದೆ ಬೀಳುವುದಕ್ಕೆ ಈ ದೇಶದ ಚರಿತ್ರೆಯೇ ಕಾರಣ. ಈಗ ಎಲ್ಲಾ ಕೆಲಸಗಳಲ್ಲೂ ಹೆಚ್ಚುಮಟ್ಟಿಗೆ ವಿದ್ಯುಚ್ಛಕ್ತಿಯು ಸಹಾಯಕವಾಗಿದೆ. ರಸಾಯನ ಶಾಸ್ತ್ರವು ಚೆನ್ನಾಗಿ ಮುಂದುವರಿದಿದೆ ಎಂದಮಾತ್ರಕ್ಕೆ ಹಿಂದೆ ಆ ಶಾಸ್ತ್ರವಿರಲಿಲ್ಲವೆಂದು ತಿಳಿಯಬಾರದು. ಪಾಶ್ಚಾತ್ಯಕ್ರಮವು ಮುಂದುವರಿಯಲು ರಾಜಕಾರಣಗಳಿವೆ. ನಮ್ಮ ಕ್ರಮವು ರಸವಾದ ಮುಂತಾದುವುಗಳಲ್ಲಿ ಉನ್ನತಿಯನ್ನು ಹೊಂದಿದ್ದರೂ ಈಗಿನ ಕ್ರಮವನ್ನು ಅನುಸರಿಸಿರಲಿಲ್ಲ. ಈ ಕ್ರಮ

ವನ್ನು ಅನುಸರಿಸದ ಮಾತ್ರಕ್ಕೆ ವೈಜ್ಞಾನಿಕವಲ್ಲವೆಂದು ಹೇಳುವುದು ಶುದ್ಧತಪ್ಪು. ರಸಾಯನಶಾಸ್ತ್ರವು ಕಡಿಮೆ ಶ್ರೇಣಿಯ ಧಾತುಗಳಾದ ತಾಮ್ರ, ಸೀಸ ಇವುಗಳನ್ನು ಪಾದರಸ ಸಹಾಯದಿಂದ ಚಿನ್ನಮಾಡುವುದಕ್ಕಾಗಿ ಪ್ರಾರಂಭವಾದುದು. ಇದನ್ನು ರಸವಾದವೆನ್ನುತ್ತಿದ್ದರು. ಈ ಕೆಲಸಕ್ಕೆ ಬೇಕಾದಷ್ಟು ರಸಾದಿಗಳ ಜ್ಞಾನವನ್ನಭಿವೃದ್ಧಿ ಮಾಡಿದ್ದರು. ಶೋಧನ, ಮಾರಣ ಅಥವಾ ಸಂಸ್ಕಾರ ಇತ್ಯಾದಿಗಳು ಅವರಿಗೆ ಬೇಕಾದ ಫಲಕ್ಕೆ ತಕ್ಕವುಗಳಾಗಿದ್ದವು. ಪಾಶ್ಚಾತ್ಯ ರಸಾಯನಶಾಸ್ತ್ರವೂ ಚಿನ್ನವನ್ನು ಮಾಡುವ ಆಶೆಯಿಂದಲೇ ಪ್ರಾರಂಭವಾಯಿತು. ಇದಕ್ಕೆ ಆಲ್ಕೆಮಿ ಎಂದೂ ಇದರ ಮೂಲಕ ಅಭಿವೃದ್ಧಿಯಾದ ಶಾಸ್ತ್ರಕ್ಕೆ ಕೆಮಿಸ್ಟ್ರಿ ಎಂದೂ ಹೆಸರು. ಇವರ ರಸಾಯನ ಪದ್ಧತಿಯು ಪ್ರತ್ಯೇಕ ರೀತಿಯಲ್ಲಿ ರೂಪ ಹೊಂದಿತು. ಇದರೊಂದಿಗೆ ಭೌತಿಕ ಶಾಸ್ತ್ರವು ಬೆಳೆಯಿತು. ಇವೆರಡೂ ಒಂದಕ್ಕೊಂದು ಸಹಾಯಕಗಳಾಗಿವೆ. ಆದರೂ ವಾದಿಗಳು ಮಾಡುತ್ತಿದ್ದ ಕ್ರಿಯೆಗಳ ಫಲಗಳಿಗೂ ಈಗಿನವರ ಫಲಗಳಿಗೂ ಬಹು ವ್ಯತ್ಯಾಸವಿದೆ. ವಿಧಿವತ್ತಾಗಿ ಮಾಡಿದ ಲೋಹಭಸ್ಮಕ್ಕೂ ದ್ರಾವಕಾದಿಗಳಿಂದ ಮಾಡಿದ ಅದೇ ಲೋಹದ ಯೌಗಿಕಕ್ಕೂ ಗುಣ ವ್ಯತ್ಯಾಸವಿದೆ. ಅಗ್ನಿಬದ್ಧರಸ, ರಸಲಿಂಗ, ಬುಭುಕ್ಷಿತಪಾರದ ಮುಂತಾದುವು ಆಧುನಿಕರಿಗೆ ಆಶ್ಚರ್ಯವನ್ನುಂಟು ಮಾಡಿವೆ. ವಿಧಿಬದ್ಧವಾದ ಕ್ರಮವು ಪಾಶ್ಚಾತ್ಯರಿಗೆ ವೈಜ್ಞಾನಿಕವಾದರೆ ಪೌರ್ವಾತ್ಯರಿಗೆ ಆಗುವುದಿಲ್ಲವೇ ? ಇಲ್ಲವೆಂದರೆ ಪಕ್ಷಪಾತವೆನ್ನಬೇಕು.

ಇನ್ನು ಚಿಕಿತ್ಸೆಯ ವಿಷಯವನ್ನು ನೋಡೋಣ. ಆಯುರ್ವೇದ ಪ್ರಕಾರ ಶರೀರದ ಕಾರ್ಯಗಳು ತ್ರಿದೋಷಪದ್ಧತಿಯ ಮೇಲಿವೆ. ದಾರ್ಶನಿಕರತತ್ವಗಳಲ್ಲಿ ಅತಿ ಸೂಕ್ಷ್ಮವಾದ ಆಕಾಶ, ಅತಿ ಜಡವಾದ ಪೃಥ್ವೀಗಳನ್ನು ಬಿಟ್ಟು ಉಳಿದ ಮೂರು ತತ್ವಗಳಿಗನುಗುಣವಾಗಿ ವಾತ, ಪಿತ್ತ, ಕಫಗಳನ್ನು ಧಾತುಗಳನ್ನಾಗಿಯೂ ವಿಕೃತಿಯಾದರೆ ದೋಷಗಳನ್ನಾಗಿಯೂ ಪರಿಗಣಿಸಿ ಅದರಂತೆ ಶರೀರಪೋಷಣಕ್ರಮ ಮತ್ತು ಚಿಕಿತ್ಸಾಕ್ರಮಗಳನ್ನು ಸಿದ್ಧಪಡಿಸಿದರು. ಇಲ್ಲಿಯೂ ಸಹ ಶರೀರದಲ್ಲಿ ನಡೆಯುವ ಕಾರ್ಯಗಳನ್ನೆಲ್ಲಾ ಮುಖ್ಯವಾಗಿ ಮೂರು ವಿಭಾಗ ಮಾಡಿದರು. ರೂಕ್ಷ ಶೈತ್ಯ, ಚಲನಕ್ರಿಯೆ ಆದಿಗಳನ್ನು ವಾತವೆಂತಲೂ, ಉಷ್ಣಸ್ನಿಗ್ಧ, ಆಹಾರ ಪಚನ, ಪಿತ್ತರಸ, ರಕ್ತಕಾರ್ಯಗಳನ್ನು ಪಿತ್ತವೆಂತಲೂ, ಉಳಿದುವನ್ನೆಲ್ಲಾ ಕಫವೆಂತಲೂ ಹೇಳುತ್ತಾರೆ. ಹೆಸರು ಯಾವುದಾದರೇನು ? ವಿಭಾಗಮಾಡಿರುವುದು ಬೇರೆಯಾದರೇನು ? ಕೆಲಸಕಾರ್ಯಗಳೂ, ಪರಿಣಾಮವೂ ಒಂದೇ ಅಲ್ಲವೇ ? ಆ ಕಾಲದ ಪರಿಸ್ಥಿತಿ, ಸಾಧನೆ, ಮೇಧಾಶಕ್ತಿಗಳನ್ನು ಅನುಸರಿಸಿ ವೈಜ್ಞಾನಿಕವಾಗಿಯೇ ಸಿದ್ಧಾಂ

ತಮಾಡಿರುತ್ತಾರೆ. ಈರೀತಿ ಮಾಡಿರುವ ಕಾರಣದಿಂದಲೇ ತ್ರಿದೋಷಕಾರ್ಯ ಗಳನ್ನು ಸುಳ್ಳೆನ್ನಲಾಗದು. ಶರೀರದಲ್ಲಿ ಕೆಲಸಮಾಡುತ್ತಿರುವ ವಾತವೆನ್ನಬೇಹೊರತು ಬರೀ ಗಾಳಿ ಅರ್ಥವಾಗುವರೀತಿಯಲ್ಲಿ ವಾತವೆನ್ನಬಾರದು. ಹೀಗೆಯೇ ಪಿತ್ತವನ್ನು ಪಿತ್ತಕೋಶದ ರಸವೆಂದೂ, ಕಫವನ್ನು ಉಗಳಿನಲ್ಲಿರುವ ಲೋಳೆ ಎಂದಾಗಲೀ ಹೇಳಬಾರದು. ಆಯುರ್ವೇದದಲ್ಲಿ ಹೀಗೆ ಹೇಳಿಲ್ಲ. ಈ ಜಿಗೆವ್ಯವಹಾರದಲ್ಲಿ ಜನರು ಉಪಯೋಗಿಸುತ್ತಿದ್ದಾರೆ. ಶಾಸ್ತ್ರದಲ್ಲಿ ಸಪ್ತಧಾತುಗಳನ್ನು ಒಂದೊಂದಾಗಿ ವಿವರಿಸಿದ್ದಾರೆ. ಈಗಿನ ವಿಜ್ಞಾನದಲ್ಲಿ ಅಂಗಗಳ ಪ್ರಕಾರವಿವರಿಸಿದ್ದಾರೆ. ಇವನ್ನು skeletal, respiratory, circulatory ಇತ್ಯಾದಿ ಸಿಸ್ಟಮ್‌ಗಳೆನ್ನುವರು. ಈಚೀಚೆಗೆ ಇವುಗಳಲ್ಲಿ ಅನ್ವೇಷಣವು (researches) ಬಹುವಾಗಿರುತ್ತವೆ. ಋಷಿ ಗಳು ಶರೀರಜರೋಗಗಳ ಉತ್ಪತ್ತಿಯು ದೋಷಗಳ ವಿಷಮಸ್ಥಿತಿ ಅಥವಾ ಕಾರ್ಯ ಗಳ ವ್ಯತ್ಯಾಸದಿಂದಾಗುವುದೆಂದೂ, ಇದರ ಪರಿಣಾಮವಾಗಿ ಆಯಾ ದೋಷಲಕ್ಷಣ ಗಳು ಕಾಣಿಸಿಕೊಳ್ಳುವುವೆಂದೂ ಹೇಳಿರುತ್ತಾರೆ. ಈಗಿನವರು ಕೆಲವು ಮಾತ್ರ ಕಾರ್ಯವ್ಯತ್ಯಾಸದಿಂದಲೂ, ಉಳಿದುವು ಜೀವಾಣುಗಳ ಪ್ರವೇಶದಿಂದಲೂ ಆಗುವು ವೆಂದು ಹೇಳುತ್ತಾರೆ. ಚಿಸ್ಥೆಗಳೆಲ್ಲಾ ಒಂದೇ. ದೋಷವೈಷಮ್ಯದಿಂದ ಜೀವಾಣು ಗಳು ತಮ್ಮ ವೃದ್ಧಿಯನ್ನು ಹೊಂದಲು ಅವಕಾಶ ಪಡೆಯುವುವೋ ಅಥವಾ ಜೀವಾ ಣುಗಳಿಂದಲೇ ದೋಷವೈಷಮ್ಯವಾಗುವುದೋ ಅದನ್ನು ವಿದ್ವಾಂಸರು ಸಂಶೋಧಿಸ ಬೇಕು. ಜೀವಾಣುಗಳ ಅಸ್ಥಿತ್ವವನ್ನಾಗಲೀ, ವಿಟಮಿನ್ನುಗಳ ಅಸ್ತಿತ್ವವನ್ನಾಗಲೀ ಸುಳ್ಳೆನ್ನುವಂತಿಲ್ಲ. ಅವನ್ನು ಪ್ರಯೋಗಶಾಲೆಗಳಲ್ಲಿ ತೋರಿಸಿಕೊಟ್ಟಿರುತ್ತಾರೆ.

ಜೀವಾಣುಗಳನ್ನು ಆಯುರ್ವೇದದಲ್ಲೂ ಅಗದತಂತ್ರದಲ್ಲಿ ವರ್ಣಿಸಿರುತ್ತಾರೆ. ಇದು ಯುಕ್ತಿಯುಕ್ತವಾಗಿದೆ.

ಸರ್ಪಾಣಾಮೇವವಿಣ್ಮೂತ್ರ ಶುಕ್ರಾಂಡಶವಕೋಥಜಾಃ ।<br>
ದೋಷೈರ್ವ್ಯಸ್ತೈಸ್ಸಮಸ್ತೈಶ್ಚಯುಕ್ತಾಃ ಕೀಟಾಶ್ಚತುರ್ವಿಧಾಃ ॥

ಸರ್ಪಗಳ ವಿಣ್ಮೂತ್ರಾದಿಗಳು ಕೊಳೆಯುವುದರಿಂದ ಪೃಥಕ್ದೋಷಯುಕ್ತ ಮತ್ತು ಮೂರು ದೋಷಗಳನ್ನೂ ಉಳ್ಳ ನಾಲ್ಕುಬಗೆಯ ಕೀಟಾಣುಗಳು ಉತ್ಪತ್ತಿಯಾಗುತ್ತ ವೆಂದೂ ಆಯಾ ದೋಷದ ಕೀಟದ ಲಕ್ಷಣಗಳು ಆಯಾ ದೋಷಕ್ಕನುಸಾರವಾಗಿದೆ ಯೆಂದೂ ಹೇಳಿದ್ದಾರೆ. ಕೀಟಾಣುಗಳು ವೃದ್ಧಿಯು ಸ್ಥೂಲಪ್ರಾಣಿಗಳ ವೃದ್ಧಿ ಗಿಂತಲೂ ಸಾವಿರಾರು ಪಾಲು ಹೆಚ್ಚಾದ್ದು. ಲೂತಾವಿಷವು ಕೀಟವಿಷಕ್ಕಿಂತಲೂ ದಾರುಣತರವಾದುದು.

ಕೀಟೇಭ್ಯೋದಾರುಣತರಾ ಲೂತಾಃ ಷೋಡಶತಾಜಗುಃ ।
ಅಷ್ಟಾವಿಂಶತಿರಿತ್ಯೇಕೇ ತತೋಪ್ಯನ್ಯೇತು ಭೂಯಸೀಃ ।
ಸಹಸ್ರರಶ್ಮನುಚರಾವವಂತ್ಯನ್ಯೇ ಸಹಸ್ರಶಃ ॥
ಬಹೂಪದ್ರವರೂಪಾತುಲೂತೈಕೈವವಿಷಾತ್ಮಿಕಾ ।
ರೂಪಾಣಿನಾಮತಸ್ತಸ್ಯಾದುರ್ಜ್ಞೇಯಾನ್ಯತಿಸಂಕಾರಾತ್ ।
ನಾಸ್ತಿಸ್ಥಾವ್ಯವಸ್ಥಾ ಚ ದೋಷತೋಽತಃ ಪ್ರಚಕ್ಷತೇ ॥ (ಅ. ಹೃ. ಉ.)

ಜೀವಾಣುಗಳು ಅನೇಕಬಗೆಯಾಗಿರುವುದರಿಂದಲೂ ಇವನ್ನು ಪೃಥಕ್ಕಾಗಿ ಹೆಸರಿನಿಂದ ತಿಳಿಯಲು ಕಷ್ಟವಾಗುವುದರಿಂದಲೂ, ಇವುಗಳಿಗೆ ಸ್ಥಾನವ್ಯವಸ್ಥೆಯಿಲ್ಲದಿರುವುದರಿಂದಲೂ, ಇವು ಉತ್ಪನ್ನಮಾಡುವ ದೋಷಗಳ ಪ್ರಕಾರ ತಿಳಿಯಲ್ಪಡುತ್ತವೆಂದು ಹೇಳಿದೆ. ಆದುದರಿಂದ ಜೈವೀಪ್ರವೇಶದಿಂದ ದೋಷಬದಲಾವಣೆಯಾಗುವುದೆಂದೂ ಚಿಕಿತ್ಸೆಗೆ ದೋಷವೇ ಪ್ರಧಾನವೆಂದೂ ಸ್ಪಷ್ಟವಾಗುತ್ತದೆ. ಇಲ್ಲಿ ಅಗದ ವಿಚಾರದಲ್ಲಿ ಹೇಳಿದೆಯಾದರೂ ವಿಷೂಚಿಕಾ, ವಿಷಮಜ್ವರ ಮುಂತಾದುವುಗಳಲ್ಲೂ ಇವುಗಳ ಪ್ರಭಾವವಿದೆಯೇ ಎಂಬುದನ್ನು ತೀರ್ಮಾನಿಸಬೇಕು. ದೋಷಹರ ಚಿಕಿತ್ಸೆಯು ಇದರ ಮತ. ಜೈವೀಹರಚಿಕಿತ್ಸೆಯು ಅಧುನಿಕಮತ. ಜೀವಾಣುಗಳು ಸ್ಥಾನವ್ಯವಸ್ಥೆಯನ್ನುಂಟಾಗಿಲ್ಲದಿರುವುದರಿಂದ ಇವು ಎಲ್ಲಿಯಾದರೂ ಇರಬಹುದು. ಶರೀರದ ಕ್ಷಮತಾಶಕ್ತಿ (resisting power)ಯು ಹೆಚ್ಚಾಗಿರುವವರೆಗೂ ಇವು ಬಾಧಿಸಲಾರವು. ವ್ರಣಚಿಕಿತ್ಸೆ ಶಸ್ತ್ರಚಿಕಿತ್ಸೆಗಳಲ್ಲಿ ಇವು ಪ್ರವೇಶಮಾಡದಿರಲು ಲೂತಹರಕ್ರಮವನ್ನು ಪ್ರತ್ಯೇಕವಾಗಿ ಹೇಳದಿದ್ದರೂ ಕ್ರಮವು ಮಾತ್ರ ಆ ರೀತಿಯಲ್ಲೇ ಇದೆ. ಈ ಲೂತರಹಿತಕ್ರಮ (sterlisation) ವನ್ನು ಈಗಿನವರು ವೈಜ್ಞಾನಿಕರೀತ್ಯಾ ಪ್ರಚುರಪಡಿಸಿರುತ್ತಾರೆ. ಇದರಿಂದ ವಿಶದಪಡಿಸಬೇಕಾದ ಒಂದು ವಿಷಯವು ತಿಳಿಯುತ್ತದೆ. ಆಯುರ್ವೇದದ ಕೆಲವು ಪ್ರಯೋಗಗಳು ಹೆಚ್ಚು ಕ್ರಿಮಿಹರಶಕ್ತಿಯನ್ನು ಪಡೆದಿರುವುದರಿಂದ ಲೂತರಹಿತ ಕ್ರಮವನ್ನು ಅನುಸರಿಸದೆ ವ್ರಣಚಿಕಿತ್ಸೆಮಾಡುವ ಕೆಲವರನ್ನು ನೋಡಿ ಆಯುರ್ವೇದದಲ್ಲಿ (sterlisation) ಪದ್ಧತಿ ಇಲ್ಲವೆಂದು ದೂಷಿಸುವರು. ಚಿಕಿತ್ಸಾಭ್ಯಾಸವು ಮೊದಲಿನಿಂದಲೂ ಎಲ್ಲಾ ಜನರಲ್ಲೂ ಹರಡಿದ್ದುದರಿಂದ ಫಲದಾಯಕವಾದ ಹಲಕೆಲವು ಔಷಧಗಳನ್ನು ಪಡೆದವರು ಲೂತರಹಿಪದ್ಧತಿಯನ್ನು ತಿಳಿಯದೆ ಚಿಕಿತ್ಸೆಮಾಡುವರು. ವ್ರಣಕ್ಷಾಳನಕ್ಕೆ ಕ್ವಾಥಗಳೂ, ಶೋಧನರೋಪಣಗಳಿಗೆ ತೈಲಗಳೂ ಚೆನ್ನಾಗಿ ಕುದಿಸಲ್ಪಟ್ಟಿರುವುದರಿಂದಲೂ, ಶಸ್ತ್ರಪಾಯನಮಾಡಿಸಿ ಶುಭ್ರವಾಗಿ ಕೆಲಸವನ್ನು ಮಾಡಿ ವ್ರಣಬಂಧನಗಳನ್ನು

ಮಾಡುವುದರಿಂದಲೂ ಈತರಹ ಚಿಕಿತ್ಸೆ (Antesptic and Aseptic) ಮಾಡಿದಂತಾಯಿತು. ಈ ಪದ್ಧತಿಯೂ ವೈಜ್ಞಾನಿಕವೆನಿಸಲ್ಪಡುತ್ತದೆ.

ಋಷಿಗಳ ಕಾಲದಲ್ಲಿ ಚಿಕಿತ್ಸಾ ಕ್ರಮವಿದ್ದುದಕ್ಕೂ ರಸೌಷಧಗಳು ರೂಢಿಗೆ ಬಂದನಂತರ ಇರುವ ಕ್ರಮಕ್ಕೂ ಸ್ವಲ್ಪ ಪರಿವರ್ತನೆಯಾಗಿದೆ. ಹಿಂದೆ ಜ್ವರಿತನಿಗೆ ಮೊದಲು ಏಳರಿಂದ ಹನ್ನೆರಡು ದಿನಗಳವರೆಗೆ ಲಂಘನವನ್ನು ಮಾಡಿಸಿ ಅನಂತರ ದೋಷಪಾಚನರೇಚನಗಳನ್ನು ಮಾಡಿಸಿ ಕೊನೆಯಲ್ಲಿ ಔಷಧವನ್ನು ಕೊಟ್ಟು ಜ್ವರವನ್ನು ಹೋಗಲಾಡಿಸುತ್ತಿದ್ದರು. ಈಗ ಮೊದಲಲ್ಲೇ ರೇಚನಕವನ್ನು ಕೊಟ್ಟು ಜ್ವರಾಂಕುಶ ಮುಂತಾದುವನ್ನು ಕೊಟ್ಟು ಶೀಘ್ರದಲ್ಲೇಜ್ವರವನ್ನು ನಿಲ್ಲಿಸುತ್ತಾರೆ. ಹಿಂದೆ ಹೇಳಿದ ಕಾಲಾಂತರ ಪರಿವರ್ತನೆಗೆ ಇದು ಉದಾಹರಣೆ. ಕಾಯಚಿಕಿತ್ಸೆಯಲ್ಲಿ ಆತ್ರೇಯರು ಹೇಳಿರುವ ಪದ್ಧತಿಯನ್ನೇ ಆಧುನಿಕರೂ ಮಾಡುತ್ತಿದ್ದಾರೆ.

ಇದಂ ಚೇದಂ ಚ ನಃ ಪ್ರತ್ಯಕ್ಷಂ—ಯದಾತುರೇಣಭೇಷಜೇನಾತುರಂ ಚಿಕಿತ್ಸಾಮಃ, ಕ್ಷಾಮಮಕ್ಷಾಮೇಣ, ಕೃಶಂಚ ದುರ್ಬಲಮಾಪ್ಯಾಯಯಾಮಃ, ಸ್ಥೂಲಂ ಮೇದಸ್ವಿನಮ ತರ್ಪಯಾಮಃ, ಶೀತೇನೋಷ್ಣಾಭಿಭೂತಂ ಉಪಚರಾಮಃ ಶೀತಾಭಿಭೂತಮುಷ್ಣೇನ, ನ್ಯೂನಾನ್ ಧಾತೂ‌ನ್ ಪೂರಯಾಮೋವ್ಯತಿರಿಕ್ತಾನ್ ಹ್ರಾಸಯಾಮಃ, ವ್ಯಾಧೀನ್ ಮೂಲ ವಿಪರ್ಯಯೇಣೋಪಚರಂತಃ ಸಮ್ಯಕ್ ಪ್ರಕೃತೌಸ್ಥಾಪಯಾಮಃ, ತೇಷಾಂ ನಸ್ತಥಾ ಕುರ್ವತಾಮಯಂ ಭೇಷಜಸಮುದಾಯಃ ಕಾಂತತಮೋಭವತಿ || (ಚರಕ. ಸೂ. ಅ ೧೦.)
ರೋಗಲಕ್ಷಣಕ್ಕೆ ವಿರುದ್ಧವಾದ ಚಿಕಿತ್ಸೆಯನ್ನು ಮಾಡಿ ಶರೀರವನ್ನು ರಕ್ಷಿಸಬೇಕೆಂದು ಹೇಳಿರುವ ಆತ್ರೇಯರ ಶಾಸ್ತ್ರವೂ, ವೈಜ್ಞಾನಿಕವೆಂದು ಹೇಳಲ್ಪಡುತ್ತಿರುವ ಆಧುನಿಕ ಚಿಕಿತ್ಸೆಯಂತೆಯೇ ವಿಜ್ಞಾನಸಮ್ಮತವಾದುದು,

ಶಲ್ಯ ಚಿಕಿತ್ಸೆಯಲ್ಲಿ ಹೇಳಿರುವ ಮರ್ಮಸ್ಥಾನಗಳನ್ನು ಗುರ್ತಿಸುವುದು ಈಗಿನ ಜನಾಂಗಕ್ಕೆ ಕಷ್ಟವಾಗಿದೆ. ಕೆಲವು ಘಾಯಗಳು ಸುಲಭವಾಗಿ ಕಂಡರೂ (ವೈಜ್ಞಾನಿಕ ದೃಷ್ಟಿಯಿಂದ) ಗುಣವಾಗಬೇಕಾದರೆ ಕಾಲ ಹಿಡಿಯುವುದು. ಮರ್ದನ (Massaagists) ಬಾಧೆಗೆ ಸಂಬಂಧಿಸಿದ ಕೆಲವು ಕಡೆಗಳಲ್ಲಿ ಜಿಗಟಿದರೆ ಆ ಭಾಗದಲ್ಲಿ ನೋವಾಗುವದಿಲ್ಲ. ಕೆಲವು ಸ್ನಾಯುಗಳನ್ನೆಳೆದರೆ ಸದ್ಯಃ ತಲ್ಲಣ (Shock) ಉಂಟಾಗುವದು. ಪ್ರಾಯಶಃ ಮರ್ಮಸ್ಥಾನದಲ್ಲಿ ಈ ಬೋಧೆಯಾಗುವುದರಿಂದ ಹೀಗಾಗಬಹುದು. ಪೂರ್ವಿಕರಿಗೆ ಈಗಿನಂತೆ ಕಾಗದ, ಅಚ್ಚುಕೂಟಗಳಿರಲಿಲ್ಲ. ಅತಿ ಮುಖ್ಯವಾದುವನ್ನು ತಾಳೇಗರಿಗಳಲ್ಲಿ ಬರೆಯುತ್ತಿದ್ದರು. ಆದುದರಿಂದ ಶಿಷ್ಯೋಪನಯನ ಮಾಡುವಾಗ ಕ್ರಿಯಾತ್ಮಕವಾಗಿ ತಿಳಿಯಬೇಕಾದ (Practical knowledge) ವಿಷಯಗಳನ್ನು ಹೇಳಿಕೊಡುತ್ತಿದ್ದರು. ಹೆಚ್ಚು ಪಾಠವೆಲ್ಲಾ ಬಾಯಿ ಪಾಠವೇ ಆಗುತ್ತಿತ್ತು. ಚೆನ್ನಾಗಿ ಜ್ಞಾಪಕಶಕ್ತಿ, ಶೀಘ್ರಗ್ರಹಣ ಶಕ್ತಿಗಳಿದ್ದುದರಿಂದ ಗ್ರಂಥಗಳನ್ನು ವಿಸ್ತರಿಸುವ ಅವಶ್ಯಕತೆ ಇರಲಿಲ್ಲ. ಪಂಚಕರ್ಮಗಳೆಲ್ಲಾ ಸಮಕ್ಷದಲ್ಲೇ ನಡೆಯುತ್ತಲಿದ್ದುದರಿಂದ ಒಬ್ಬರಿಂದೊಬ್ಬರು ಕಲಿಯುತ್ತಬಂದರು. ಅಂದಿನಂತೆ

ಯೇ ಈಗಲೂ ವಸ್ತಿಕರ್ಮ, ರಕ್ತಮೋಕ್ಷಣಗಳನ್ನು ಇಂದಿನ ವೈದ್ಯರೂ ನಡೆಸು ತ್ತಾರೆ. ಕ್ಷಾರಕರ್ಮ, ಅಗ್ನಿಕರ್ಮಗಳು ಮಾರ್ಪಾಟಾದ ರೀತಿಯಲ್ಲಿ ನಡೆಯುತ್ತಿವೆ. ಒಂದು ಬಗೆ ಇಲ್ಲದಿದ್ದರೆ ಬೇರೊಂದು ಬಗೆಯಲ್ಲಿ ಸ್ವೇದ, ಲೇಪಕ್ರಿಯೆಗಳನ್ನು ಮಾಡುತ್ತಿದ್ದಾರೆ. ಇವೆಲ್ಲವೂ ವೈಜ್ಞಾನಿಕವೆಂದ ಮೇಲೆ ಹಿಂದೆ ನಡೆಯುತ್ತಿದ್ದುವೂ ವೈಜ್ಞಾನಕವೇ ಸರಿ.

ಮೂಲಿಕೆ ಮುಂತಾದುವನ್ನು ಅವುಗಳ ರೋಗ ಹರಗುಣಗಳನ್ನನುಸರಿಸಿ ದೋಷಹರ ಅಥವಾ ದೋಷಕರವೆಂದು ಹೇಳಿ ತಕ್ಕಂತೆ ಉಪಯೋಗಿಸುತ್ತಿದ್ದರು. ಅವುಗಳ ಫಲಗಳನ್ನನುಸರಿಸಿ ಬೃಂಹಣ, ಕರ್ಶನ, ಮೂತ್ರಲ, ಪಾಚಕ, ರೇಚಕ ಇತ್ಯಾದಿ ದ್ರವ್ಯಗಳೆಂದು ಹೇಳುತ್ತಿದ್ದರು. ಇದೇ ಬಗೆಯ ವಿಭಜನೆಯು ಈಗಲೂ ವಾಡಿಕೆಯಲ್ಲಿದೆ. ದೋಷಹರವೆಂದಾಗಲೀ ವ್ಯಾಧಿಹರವೆಂದಾಗಲೀ ಹೇಗೆ ಹೇಳಿದರೂ ಫಲವ್ಯತ್ಯಾಸವಿರಲಾರದು. ಅದೇ ಮೂಲಿಕೆಗಳನ್ನು ಆಧುನಿಕ ಅನುಸಂಧಾನಗಳಿಂದ ವಿಶ್ಲೇಷಣಮಾಡಿ ಅವುಗಳಲ್ಲಿ ರೋಗಹರಭಾಗಗಳು ಯಾವುವು; ಬಾಧಕಭಾಗ, ಅನುಪಯೋಗವಾದುವು ಯಾವುವೆಂದು ಕಂಡುಹಿಡಿದಿದ್ದಾರೆ. ಫಲಕಾರಿಭಾಗವನ್ನೇ ಬೇರ್ಪಡಿಸುವ ಉಪಾಯಗಳನ್ನು ಕಂಡುಹಿಡಿದಿದ್ದಾರೆ. ಹಿಂದೆ ಕ್ವಾಥ, ರಸಕ್ರಿಯೆಗಳೆಂದು ಮಾಡುತ್ತಿದ್ದರು. ಸ್ವಲ್ಪಕಾಲದನಂತರ ಅರ್ಕಗಳನ್ನು ಮಾಡಿದರು. ಫಲಭಾಗವನ್ನು ಕ್ವಾಥಸ್ಥಿತಿಯಲ್ಲೇ ರಕ್ಷಿಸಲು ಆಸವಗಳನ್ನು ಮಾಡುತ್ತಿದ್ದರು. ಹೀಗೆ ಅವರು ಸದಾ ಎಲ್ಲಾ ಕೆಲಸಗಳನ್ನೂ ಕ್ರಮಬದ್ಧವಾಗಿಯೇ ಮಾಡುತ್ತಿದ್ದುದರಿಂದ ಅವೆಲ್ಲವೂ ಈಗಿನಂತೆಯೇ ವೈಜ್ಞಾನಿಕವಾಗಿದ್ದುದರಲ್ಲಿ ಸಂದೇಹವಿಲ್ಲ.

ಆಧುನಿಕ ವೈದ್ಯದ ಹೆಚ್ಚು ಭಾಗಗಳೆಲ್ಲಾ ಹಿಂದೆ ಆಯುರ್ವೇದದಲ್ಲಿದ್ದುವಂತೆಯೇ ಇರುವುವು. ವಿಜ್ಞಾನಶಾಸ್ತ್ರವು ದಿನೇ ದಿನೇ ಹೆಚ್ಚುತ್ತಿರುವುದರಿಂದ ಅದರಿಂದ ಉಪಯುಕ್ತವಾದ ಭಾಗಗಳನ್ನು ಆಧುನಿಕರು ತಮ್ಮ ವೈದ್ಯಕ್ಕೆ ಸೇರಿಸಿಕೊಂಡಿರುತ್ತಾರೆ. ಆಯುರ್ವೇದಕ್ಕೆ ವಿಜ್ಞಾನಶಾಸ್ತ್ರದ ಯಾವ ಭಾಗಗಳು ಅವಶ್ಯವಾಗಿವೆ ಎಂಬುದು ಚರ್ಚಾಸ್ಪದವಾದುದು. ಈ ಕಾಲಕ್ಕೆ ತಕ್ಕಂತೆ ಬೇಕಾದ ಸಾಧನಗಳನ್ನೂ, ರೋಗ ವಿಮರ್ಶಕ ರೀತಿಯನ್ನೂ, ವ್ಯವಹಾರಕ್ಕೆ ಬೇಕಾದ ವಿಷಯಗಳನ್ನೂ (medical jurisprudence) ಎಷ್ಟರಮಟ್ಟಿಗೆ ಹೊಂದಿರಬೇಕೆಂಬುದರ ಆವಶ್ಯಕತೆಯನ್ನೂ ವಿದ್ವಾಂಸರು ವಿಶಾಲಹೃದಯದಿಂದ ತೀರ್ಮಾನಿಸಬೇಕು.

29-12-1941

ಮೋಟಗಾನಹಳ್ಳಿ ಮಹಾದೇವಶಾಸ್ತ್ರಿ.

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

## 1941ನೆ ಡಿಸೆಂಬರ್ 28, 29 & 30ನೆ ತಾರೀಖುಗಳಲ್ಲಿ ಮೈಸೂರಲ್ಲಿ ನಡೆದ 12ನೆ ನಿಖಿಲಕರ್ಣಾಟಕಾಯುರ್ವೇದಸಮ್ಮೇಳನದಲ್ಲಾದ

# ನಿರ್ಣಯಗಳು

---

1. "ಕಳೆದ ಸಮ್ಮೇಳನದಿಂದೀಚೆಗೆ ಈ ಕೆಳಗೆಕಂಡ ಕರ್ಣಾಟಕದ ವೈದ್ಯ ಮಹಾಶಯರುಗಳು ತಮ್ಮಗಳ ಮಧ್ಯವಯಸ್ಸಿನಲ್ಲೆ ವಿಧಿವಶರಾದ ಬಗ್ಗೆ ಈ ಸಭೆಯು ತನ್ನ ಅಪಾರವಾದ ದುಃಖವನ್ನು ವ್ಯಕ್ತಪಡಿಸುತ್ತದೆ. ಮತ್ತು ಅವರುಗಳ ಆತ್ಮಕ್ಕೆ ಚಿರಶಾಂತಿಯುಂಟಾಗಲೆಂದೂ ಶ್ರೀಧನ್ವಂತರಿಯನ್ನು ಪ್ರಾರ್ಥಿಸುತ್ತದೆ."

ಸೂಚಕರು—ಅಧ್ಯಕ್ಷರಿಂದ—

1. ಶ್ರೀ|| ಎಚ್. ಶ್ರೀನಿವಾಸಯ್ಯಂಗಾರ್, ಜಾಫ್ನಾ.
2. ,, ಎಸ್. ಜೆ. ಹುಳ್ಳಳ್ಳಿ, ಬೆಳಗಾಂ.
3. ,, ಎಚ್. ನರಸಿಂಹಶಾಸ್ತ್ರಿಗಳು, ಬೆಂಗಳೂರು.
4. ,, ನರಸಿಂಭಟ್ಟ ಜೋಸಿ, ರಟ್ಟೀಹಳ್ಳಿ. ಸರ್ವಾನುಮತ.

2. ಮಂಡಳದ ಸೆಕ್ರಿಟೆರಿಯವರಿಂದ ಓದಿ ಒಪ್ಪಿಸಲ್ಪಟ್ಟ ಮಂಡಳದ ವರದಿಯನ್ನು ವಿಮರ್ಶಿಸಿ ಒಪ್ಪಿ ರಿಕಾರ್ಡುಮಾಡಲಾಯಿತು.

3. ಕರ್ಣಾಟಕಾಯುರ್ವೇದ ಮಂಡಳದ ಸ್ಥಾಪಕರಾದ ಡಾ|| ಹನುಮಂತ ರಾವ್ ಸವಣೂರ್, ಬೆಳಗಾಂರವರ ಷಷ್ಟ್ಯಬ್ದಿ ಉತ್ಸವದ ನಿಮಿತ್ತ ಮಂಗಳೂರು ಸ್ಥಾಯಿಸಮಿತಿಯ ತೀರ್ಮಾನವನ್ನನುಸರಿಸಿ, ಅಲ್ಲಿಂದ ಮುಂದಕ್ಕೆ ಮೊದಲು ನಡೆಯುವ ಸಮ್ಮೇಳನವಾದ ಈ ಮೈಸೂರು ಅಧಿವೇಶವು ಶ್ರೀ ಹನುಮಂತರಾಯ ಸವಣೂರರವರಿಗೆ ಆಯುರಾರೋಗ್ಯ ಐಶ್ವರ್ಯಗಳನ್ನು ಕೋರುತ್ತದೆ.

ಈ ಸಂತೋಷದ ಜ್ಞಾಪಕಾರ್ಥವಾಗಿ ಸ್ವಾಗತಸಮಿತಿಯವರು ಕೊಟ್ಟ ಔತಣವನ್ನು ಈ ಸಭೆಯು ಅಂಗೀಕರಿಸುತ್ತದೆ. ಇವರ ಭಾವಚಿತ್ರವೊಂದನ್ನು ಮಂಡಳದ ಆಫೀಸಿನಲ್ಲಿಡಲು ಈ ಸಭೆಯು ನಿರ್ಧರಿಸುತ್ತದೆ.

ಸೂ.—ಡಾ|| ವೈ. ಲ. ಶಾಸ್ತ್ರಿ, ಮೈಸೂರು.
ಅನು.—ಪಂ. ಟಿ. ಸಿ. ಸುಬ್ಬಣ್ಣಾಚಾರ್, ನಂದಿ. ಸರ್ವಾನುಮತ.

4. ಮಂಡಳದ ಯಜಮಾನಿಕೆಯ ಮೇಲೆ ಕರ್ಣಾಟಕಕ್ಕೆಲ್ಲಾ ಸೇರುವ ಕರ್ಣಾಟಕ ಸೆಂಟ್ರಲ್ ಆಯುರ್ವೇದಿಕ್ ಫಾರ್ಮಸಿಯನ್ನು ಕ್ಷಿಪ್ರದಲ್ಲೆ ಮೈಸೂರಲ್ಲಿ ಸ್ಥಾಪಿಸತಕ್ಕದ್ದು ಇದಕ್ಕೆ ತಗಲುವ ಪ್ರಾರಂಭದ ಖರ್ಚನ್ನು ಮಂಡಲವು ವಹಿಸಿದ್ದು ನಂತರ ವಾಪಸ್ ತೆಗೆದುಕೊಳ್ಳತಕ್ಕದ್ದು. ಇದರಲ್ಲಿ ವೈದ್ಯರಿಗೆ ಹೆಚ್ಚಿನ ರಿಯಾಯತಿಯಿರತಕ್ಕದ್ದು. ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳ ನೇತೃತ್ವದಲ್ಲಿ ಶ್ರೀ|| ಕೆ. ಪಿ.

ಪುರಾಣೀಕ್ ಮೈಸೂರು, ಮತ್ತು ತಮಗೆ ಬೇಕಾದ ಮೂವರನ್ನು ಸೇರಿಸಿಕೊಂಡು ಒಂದು ಉಪಸಮಿತಿಯನ್ನು ನಿರ್ಮಿಸಿ ಇದಕ್ಕೆ ತಕ್ಕ ವ್ಯವಸ್ಥೆಗಳನ್ನು ನಿರ್ಧರಿಸಿ ಆದಷ್ಟುಬೇಗ ತಮ್ಮ ವರದಿಯನ್ನು ಮಂಡಳದ ಸ್ಥಾಯಿಸಮಿತಿಯ ಮುಂದಿನ ಅಧಿವೇಶನಕ್ಕೆ ಒಪ್ಪಿಸತಕ್ಕದ್ದು. ಈ ವರದಿಯನ್ನು ವಿಮರ್ಶಿಸಿ ಕಾರ್ಯಕಾರಿಯನ್ನಾಗಿ ಮಾಡಲು ಸ್ಥಾಯಿಸಮಿತಿಗೆ ಅಧಿಕಾರವಿರತಕ್ಕದ್ದು.

ಸೂ.—ಪಂ|| ನಂಜುಂಡಯ್ಯ, ದಾವಣಗೆರೆ.

ಪಂ|| ಹನುಮಂತಾಚಾರ್, ವೆಲ್ಲೂರು. ಸರ್ವಾನುಮತ.

5. ಮಂಗಳೂರಲ್ಲಿ ನಡೆದ ಸ್ಟ್ಯಾಂಡಿಗ್ ಕಮಿಟಿಯಲ್ಲಿ ಗೊತ್ತಾದ ಸಬ್ ಕಮಿಟಿಯವರು ಮಂಡಳದ ರಿಜಿಸ್ಟ್ರೇಷನ್ ಸಲುವಾಗಿ ತಯಾರಿಸಿದ ಡ್ರಾಪ್ಟನ್ನು ಈ ಸಭೆಯು ಒಪ್ಪುತ್ತದೆ. ಆದರಂತೆ ಮಂಡಳವನ್ನು ಮೈಸೂರು, ಹೈದರಾಬಾದ್ ಮತ್ತು ಬ್ರಿಟಿಷ್ ಸರಕಾರಗಳಲ್ಲಿ ಮಂಡಳದ ಖರ್ಚಿನಿಂದ ಕೂಡಲೆ ರಿಜಿಸ್ಟರ್ ಮಾಡಿಸಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

ಸೂ—ಪಂ|| ಬಿ. ಆರ್. ಹರಿದಾಷ್, ಮಂಗಳೂರು.

ಅನು—ಪಂ|| ಜಯರಾಮಾಚಾರ್, ಗದಗ. ಸರ್ವಾನುಮತ.

6. ಮಂಡಳದ ಅಧ್ಯಕ್ಷರ ಬದಲಾವಣೆಯು ಪ್ರತಿ ಸಮ್ಮೇಳನದಲ್ಲೂ ಆಗುತ್ತಿರುವುದರಿಂದ ಮಂಡಳದ ಕಾರ್ಯವು ನಿರೀಕ್ಷಿಸಲ್ಪಟ್ಟ ಮಟ್ಟಿಗೆ ಸಾಧ್ಯವಾಗುವುದಿಲ್ಲವಾಗಿ ಕಂಡುಬರುತ್ತಿರುವುದರಿಂದ, ಕಾರ್ಯದಕ್ಷರಾಗಿಯೂ ಅನುಭವಿಗಳಾಗಿಯೂ ಇರತಕ್ಕ ಒಬ್ಬ ಮಾನ್ಯ ಸದಸ್ಯರನ್ನು ಮಂಡಳದ ಗೌರವ ಸಂಚಾಲಕ (Organiser) ರನ್ನಾಗಿ ನೇಮಿಸತಕ್ಕದ್ದು. ಇವರು ಮಂಡಳದ ವಿಶ್ವಾಸ ಗೌರವಗಳಿಗೆ ಪಾತ್ರರಾಗಿ ಮೂರು ವರ್ಷಗಳವರೆಗೆ ಅಧಿಕಾರದಲ್ಲಿರತಕ್ಕದ್ದು. ಮತ್ತು ಸ್ಥಾಯಿ ಸಮಿತಿಯ ತೀರ್ಮಾನಗಳನ್ನತಿಕ್ರಮಿಸದಂತೆ ಅಧ್ಯಕ್ಷರ ಅನುಮತಿ ಪಡೆದು ಪ್ರಚಾರ ಕಾರ್ಯವನ್ನೂ ಆಫೀಸಿನ ಮೇಲ್ವಿಚಾರಣೆಯ ವ್ಯವಸ್ಥೆಯನ್ನೂ ನಿರ್ವಹಿಸತಕ್ಕದ್ದು. ಇವರ ಪ್ರವಾಸದ ಮಾರ್ಗ ವ್ಯಯ ಮತ್ತು ಊಟವುಪಚಾರಗಳ ವ್ಯಯಗಳನ್ನು ಮಂಡಳವು ವಹಿಸತಕ್ಕದ್ದು.

ಸೂ—ಪಂ|| ಬಿ. ಆರ್. ಹರಿದಾಸ್, ಮಂಗಳೂರು.

ಅನು—ಪಂ|| ನಾ. ಶ್ರೀ|| ರಟ್ಟೀಹಳ್ಳಿ, ಹುಬ್ಬಿ. ಸರ್ವಾನುಮತ.

7. ಕಳೆದ ಸಮ್ಮೇಳನದಲ್ಲಿ ನಿರ್ಮಿತವಾದ ಕಾಲೇಜ್ ಕಮಿಟಿಗೆ ಶ್ರೀ|| ಪಂ|| ಎಂ. ವಿ. ಬುರ್ಲಿಯವರನ್ನು ಹೆಚ್ಚಿಗೆ ಸೇರಿಸಿಕೊಂಡು ಅವರಿಗೆ ಆ ಕಮಿಟಿಯ

ಕಾರ್ಯದರ್ಶಿತ್ವವನ್ನು ವಹಿಸತಕ್ಕದ್ದು. ಇವರು ತಮಗೆ ಅವಶ್ಯಕವೆಂದು ತೋರುವ ಮತ್ತಿಬ್ಬರನ್ನು ಕಮಿಟಿಗೆ ಸೇರಿಸಿಕೊಂಡು, ಕಾಲೇಜನ್ನು ಆದಷ್ಟು ಬೇಗ ಹುಬ್ಬಳ್ಳಿಯಲ್ಲಿ ತೆರೆಯುವ ಪ್ರಯತ್ನಮಾಡತಕ್ಕದ್ದು.

ಸೂ—ಡಾ|| ವೈ. ಲಕ್ಷ್ಮೀನರಸಿಂಹಸಾಸ್ತ್ರಿಗಳು, ಮೈಸೂರು.

ಅನು—ಪಂ|| ಗುಂಡಾಚಾರ್ ಸವಣೂರ್, ಹುಬ್ಬಳ್ಳಿ. ಬಹುಮತ.

8. ಶಿರ್ಶಿ ಸಮ್ಮೇಳನದಲ್ಲಾದ ಠರಾವಿನಂತೆ ಪತ್ರಿಕೆಯನ್ನು ಡೆಮ್ಮಿ 1/8 ರ ಆಕಾರಕ್ಕೆ ಬದಲಾಯಿಸುವುದರಿಂದ ತಮಗೆ ತೊಂದರೆಯಾಗುತ್ತದೆಂತಲೂ, ಅದಕ್ಕೆ ಬದಲು ಮೊದಲೇ ಒಪ್ಪಂದವಾಗಿರುವ ಪ್ರಕಾರ ಡೆಮ್ಮಿ 1/8 ರ ಬದಲು ಈಗಿರುವ ಸೈಜಿನಲ್ಲೆ ಹದಿನಾರು ಪುಟಗಳವರಿಗೂ ಪ್ರತಿ ಪತ್ರಿಕೆಯಲ್ಲೂ ಮಂಡಳದ ಸಂಬಂಧಿ ಸ್ಥಾಯಿಸಮಿತಿಯಿಂದ ಬರುವ ಎಲ್ಲ ವಿಚಾರಗಳನ್ನೂ ಪ್ರಕಟಿಸುವುದಕ್ಕೂ, ಮಂಡಳದ ವಾರ್ಷಿಕ ವರದಿಯನ್ನೂ ಮತ್ತು ಸ್ಥಾಯಿಸಮಿತಿಯು ಠೆಜಿಲ್ಯೂಷನ್‌ಗಳನ್ನೂ ಪ್ರಿಂಟುಮಾಡಿಸಿ ಅವಶ್ಯಕವಾದಷ್ಟು ಕಾಪಿಗಳನ್ನು ಮಂಡಳದ ಸದಸ್ಯರ ಪಟ್ಟಿಯಂತೆ ಎಲ್ಲರಿಗೂ ಟಪಾಲ್ ಮೂಲಕ ಕಳುಹಿಸುವುದಕ್ಕೂ ಪತ್ರಿಕಾ ಸಂಪಾದಕರಾದ ಶ್ರೀ|| ಆದ್ಯ ಅನಂತಾಚಾರ್ಯರವರು ಕೊಟ್ಟ ಆಶ್ವಾಸನವನ್ನು ಈ ಸಭೆಯು ಅಂಗೀಕರಿಸುತ್ತದೆ.

ಮಂಡಳಕ್ಕೆ ಬೇಕಾಗುವ ವರದಿಯ ಹೆಚ್ಚು ಕಾಪಿಗಳಿಗಾಗಿ ತಗಲುವ ಕಾಗದದ ಖರ್ಚನ್ನೂ ಪತ್ರಿಕೆಗೆ ಚಂದಾದಾರರಲ್ಲದ ಮಂಡಳದ ಸದಸ್ಯರಿಗೆ ಕಳುಹಿಸಿ ಕೊಡಲು ತಗಲುವ ಟಪಾಲು ಖರ್ಚನ್ನೂ ಮಂಡಳವು ವಹಿಸತಕ್ಕದ್ದು.

ಸೂ—ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿ, ಮೈಸೂರು.

ಅನು—ಪಂ|| ಡಿ. ವಿ. ರಾಮರಾಯರು, ಗದಗ್ ಮತ್ತು ಹರಿಬಲ್, ಹುಬ್ಳಿ.

ಬಹುಮತದಿಂದ ಒಪ್ಪಲಾಯಿತು.

9. ಮುಂಬಯಿ ಪೋದ್ದಾರ ಕಾಲೇಜ್ ರುಗ್ಣಾಲಯದಲ್ಲಿ ಕಲ್ಪದನೊಂದು (Compounder) ಕೆಲಸಮಾಡಲು ಮಾನ್ಯವಿದ್ಯಾಲಯ:ದ ಪದವೀಧರ ವೈದ್ಯರು ಬೇಕಾಗಿದ್ದಾರೆಂದು ಪ್ರಕಟಣೆ ಕೊಟ್ಟು ವೈದ್ಯಜನರ ಹಾಗೂ ಆಯುರ್ವೇದ ಪ್ರೇಮಿಗಳ ಮನಸ್ಸನ್ನು ನೋಯಿಸಿದ್ದಕ್ಕಾಗಿ ಪೋದ್ದಾರ ಕಾಲೇಜ್ ಪ್ರಿನ್‌ಸಿಪಾಲರಾದ ಡಾ|| ಆಶಾನಂದರವರನ್ನು ಈ ಸಮ್ಮೇಳನವು ನಿಷೇಧಿಸುತ್ತದೆ; ಮತ್ತು ಆ ಪ್ರಕಟಣೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಡಾ|| ಆಶಾನಂದರಿಗೆ ಸೂಚಿಸುತ್ತದೆ.

ಸೂ—ಶ್ರೀ ಪಂ|| ಜಯದೇವ ಕುಲಕರ್ಣಿ, ಬೆಳಗಾಂ.

ಅನು—ಶ್ರೀ ಪಂ|| ಬಿ. ಯಂ. ಹರಿಬಲ್, ಹುಬ್ಳಿ. ಸರ್ವಾನುಮತ.

10. ಪುಣೆಯಲ್ಲಿ ಜರುಗಿದ ಕರ್ಣಾಟಕ ಮಹಾರಾಷ್ಟ್ರೀಯ ಪಾಶ್ಚಾತ್ಯ ವೈದ್ಯರ ಪರಿಷತ್ತಿನ ಅಧ್ಯಕ್ಷರಾದ ಡಾ|| ಮುಳೆಯವರು ತಮ್ಮ ಭಾಷಣದಲ್ಲಿ ಆಯುರ್ವೇದದ ಬಗ್ಗೆ ಅನಾದರ ಹುಟ್ಟಿಸುವ ಪ್ರಯತ್ನ ಮಾಡಿದ್ದಕ್ಕಾಗಿಯೂ, ಮತ್ತು ಆಯುರ್ವೇದಕ್ಕೆ ಮಾನ್ಯತೆ ಕೊಟ್ಟ ಮುಂಬಾಯಿ ಸರಕಾರವನ್ನು ಕಟುತರವಾಗಿ ಟೀಕಿಸಿದ ಬಗ್ಗೆಯೂ, ಈ ಸಮ್ಮೇಳನವು ಅವರ ಕೃತಿಯನ್ನು ನಿಷೇಧಿಸುತ್ತದೆ. ಇನ್ನುಮುಂದೆ ಅವರು ಈ ತರಹದ ಅಪಪ್ರಚಾರ ಮಾಡುವುದನ್ನು ಬಿಡಬೇಕೆಂದು ಅವರಿಗೆ ಎಚ್ಚರಿಕೆ ಕೊಡುತ್ತದೆ.

ಸೂ.—ಪಂ|| ಜಯದೇವ ಕುಲಕರ್ಣಿ, ಬೆಳಗಾಂ.
ಅನು.—ಪಂ|| ಜಯರಾಮಾಚಾರ್, ಗದಗ್.
ಶ್ರೀ ಆದ್ಯ ಅನಂತಾಚಾರ್ಯರು, ಬೆಳಗಾಂ. ಸರ್ವಾನುಮತ.

11. ಮೈಸೂರು ಸರ್ಕಾರವು ಮುಂಬಾಯಿ ಸರಕಾರದಂತೆಯೇ ವೈದ್ಯರ ರಿಜಿಷ್ಟ್ರೇಷನ್‌ಬಿಲ್ಲನ್ನೂ, ಬೋರ್ಡ್ ಆಫ್ ಇಂಡಿಯನ್‌ಮೆಡಿಸಿನ್ ಸಂಸ್ಥೆಯನ್ನೂ ಕೂಡ್ಲೆ ಜಾರಿಗೆ ತರಬೇಕೆಂದು ಮೈಸೂರು ಸರ್ಕಾರವನ್ನು ಪುನಃ ಈ ಸಮ್ಮೇಳನವೂ ಸಹ ಪ್ರಾರ್ಥಿಸಿಕೊಳ್ಳುತ್ತದೆ.

ಸೂ—ಪಂ|| ಡಿ. ಆರ್. ಹನುಮಂತಾಚಾರ್ಯರು, ಮೇಲೂರು.
ಅನು—ಪಂ|| ಕೆ. ಪಿ. ಪುರಾಣೀಕರು, ಮೈಸೂರು.
ಬಹುಮತದಿಂದ ಒಪ್ಪಲಾಯಿತು.

12. ಮೈಸೂರು ಗೌ|| ಆಯುರ್ವೇದಿಕ್ ಕಾಲೇಜಿನಲ್ಲಿ ಪೂರ್ಣ ವ್ಯಾಸಂಗ ಮಾಡಿ ಉತ್ತೀರ್ಣರಾದವರ ವಿನಹ ಇನ್ನಾರೂ "ಆಯುರ್ವೇದ ವಿದ್ವಾನ್"ಎಂಬ ಪದವಿಯನ್ನು ಹಾಕಿಕೊಳ್ಳಕೂಡದೆಂದೂ ನಿರ್ಬಂಧಿಸಲು ಮೈಸೂರು ಸರಕಾರವನ್ನು ಈ ಸಭೆಯು ಪ್ರಾರ್ಥಿಸುತ್ತದೆ.

ಸೂ—ಪಂ|| ಗೋಪಾಲಕೃಷ್ಣಾವಧಾನಿ, ಮೈಸೂರು.
ಅನು—ಪಂ|| ಲಕ್ಷ್ಮೀನಾರಾಯಣಶಾಸ್ತ್ರಿ, ಮೈಸೂರು.
ಪಂ|| ಎಂ. ಮಹದೇವಶಾಸ್ತ್ರಿ, ಬೆಂಗಳೂರು. ಬಹುಮತ.

13. ಅಖಿಲಭಾರತ ಆಯುರ್ವೇದಮಂಡಳದವತಿಯಿಂದ ನಡೆಸತಕ್ಕ ವೈದ್ಯಕೀ ಪರೀಕ್ಷೆಗಳನ್ನು ಮೈಸೂರು ನಗರದಲ್ಲಿ (ಕೇಂದ್ರವಾಗಿ) ನಡೆಸುವಂತೆ ಅ. ಭಾ. ಆ. ಮಹಾಮಂಡಳವನ್ನು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂ—ಪಂ|| ಕೆ. ಪಿ. ಪುರಾಣೀಕ, ಮೈಸೂರು.
ಅನು—ಪಂ|| ಎನ್. ನರಸಿಂಹಯ್ಯ, ಮೈಸೂರು. ಸರ್ವಾನುಮತ.

14. ಮುಂಬಯಿ ಪ್ರಾಂತದಲ್ಲಿ ಬರುವ ವರ್ಷದ ದೇಶೀಯ ವೈದ್ಯಕ ಬೋರ್ಡಿನ ನೇಮಣಾತಿಗೆ (nomination) ಮಂಡಳದಿಂದ ಆರಿಸಲ್ಪಟ್ಟ ವೈದ್ಯ ರೊಬ್ಬರನ್ನು ತೆಗೆದುಕೊಳ್ಳಬೇಕೆಂದು ಬೊಂಬಾಯಿ ಸರಕಾರವನ್ನು ಪ್ರಾರ್ಥಿಸತಕ್ಕದ್ದು.

ಸೂ—ಪಂ|| ನಾ-ಶ್ರೀ-ರಟ್ಟೀಹಳ್ಳಿ, ಹುಬ್ಬಿ.

ಅನು—ಜಯರಾಮಾಚಾರ್, ಗದಗ. ಸರ್ವಾನುಮತ.

15. ಸಮ್ಮೇಳನೋದ್ಘಾಟನಮಾಡಿದ ಮಾನ್ಯಸಚಿವರಾದ ಶ್ರೀ ಹೆಚ್. ಬಿ. ಗುಂಡಪ್ಪಗೌಡರು ಪ್ರಸ್ತಾವಿಸಿರುವ (ಮಲೇರಿಯಾ) ವಿಷಮಜ್ವರ, ಶ್ರೀ ಪಾರ್ಥ ನಾರಾಯಣ ಪಂಡಿತರು ಸೂಚಿಸಿರುವ ಮಕ್ಕಳ ಯಕೃದೋದರಗಳ ಶಾಸ್ತ್ರೀಯ ವಿಮರ್ಶಾತ್ಮಕ ಚರ್ಚೆ ಮತ್ತು ನಿರ್ಧಾರಿಕ ಚಿಕಿತ್ಸೆಗಳು ಅತ್ಯವಶ್ಯವಿರುವುದರಿಂದ, ಆಗಾಗ್ಯೆ ಕೂಡುವ ಸ್ಥಾಯಿಸಮಿತಿಗಳು ಈ ವಿಚಾರಗಳನ್ನು ಗಮನದಲ್ಲಿಟ್ಟು ತಜ್ಞ ರಿಂದ ತಕ್ಕ ವಿಷಯಸಂಗ್ರಹದೊಡನೆ ಆಗಾಗ್ಯೆ ಚರ್ಚಿಸಿ ಮುಂದಿನ ಸಮ್ಮೇಳನಕ್ಕೆ ವರದಿಯನ್ನು ಒಪ್ಪಿಸತಕ್ಕದ್ದು.

ಸೂ—ಪಂ|| ಎ. ಕೆ. ರಾಯ ಬಾಗ್‌ಕರ್, ಹುಬ್ಬಳ್ಳಿ.

ಅನು—ಪಂ|| ಟಿ. ಸಿ. ಸುಬ್ಬಣ್ಣಾಚಾರ್‍ಯರು, ನಂದಿ.

ವಿಮರ್ಶೆಯೊಡನೆ ಬಹುಮತ.

16. ಮೈಸೂರು ದೇಶದಲ್ಲಿಯೂ ಮತ್ತು ಇತರ ಕರ್ಣಾಟಕ ಪ್ರಾಂತಗಳಲ್ಲಿ ಯೂ ಆಯುರ್ವೇದ ವೃದ್ಧಿಗಾಗಿ ದುಡಿಯುತ್ತಾ, ಸ್ವಪ್ರಯೋಜನಗಳ ಕಡೆಗೆ ಲಕ್ಷ್ಯ ಕೊಡದೆ ತಮ್ಮ ಸಹೋದರರ ಶ್ರೇಯಸ್ಸನ್ನೇ ಮುಖ್ಯಧ್ಯೇಯವಾಗಿಟ್ಟು ಕೊಂಡು, ನಿಖಿಲ ಕರ್ಣಾಟಕಾಯುರ್ವೇದ ಮಂಡಳಕ್ಕೆ ಒಂದೇ ಸಮನೆ ಎರಡು ವರ್ಷಗಳು ಅಧ್ಯಕ್ಷತೆಯನ್ನು ಚುನಾವಣೆಯ ಮೂಲಕ ಪಡೆದು ವೈದ್ಯರ ಅಭಿ ವೃದ್ಧಿಗಾಗಿ ಸರ್ವ ರೀತಿಯಿಂದಲೂ ದುಡಿದಿರುವ ಮತ್ತು ದುಡಿಯುತ್ತಿರುವುದರ ಜೊತೆಗೆ ಮೈಸೂರಿನ ರಾಜಕೀಯ ಆಯುರ್ವೇದ ಕಾಲೇಜು ಮತ್ತು ಆಸ್ಪತ್ರೆ ಯಲ್ಲೂ ಇತರ ವೈದ್ಯ ಸಂಸ್ಥೆಗಳಲ್ಲೂ ಗಣನೀಯ ಸೇವೆ ಸಲ್ಲಿಸಿರುವುದಲ್ಲದೆ, ಈಗ ವಿಶ್ರಾಂತರಾದಾಗಲೂ ತದೇಕ ವ್ಯವಸಾಯಿಗಳಾಗಿರುವ ಭಿಷಕ್ಚೂಡಾಮಣಿ ಆಯು ರ್ವೇದ ವಿದ್ವಾನ್ ವೈ. ಲಕ್ಷ್ಮೀನರಸಿಂಹಶಾಸ್ತ್ರಿ ಎಲ್.ಎಂ.ಪಿ. (ರಿ|| ಸೂಪರಿಂಟೆಂ ಡೆಂಟ್, ಗೌ||ಆಯುರ್ವೇದಿಕ್ ಆಸ್ಪತ್ರೆ, ಮೈಸೂರು.) ಇವರ ಆಯುರ್ವೇದ ಸೇವೆಯನ್ನು ಈ ಸಭೆಯು ನಮ್ರತೆಯಿಂದ ರಿಕಾರ್ಡುಮಾಡುತ್ತದೆ.

ಇಂತಹ ಕಾರ್ಯದಕ್ಷರಾದ ಸಾರ್ವಜನಿಕ ಸೇವಾತತ್ಪರರಿಗೆ ಮೈಸೂರು ಸಂಸ್ಥಾನದ ರಾಜಮನ್ನಣೆಯು ದೊರೆಯುವಂತೆ ಇವರಿಗೂ ಅರ್ಹವಾದ ಮನ್ನಣೆಯನ್ನು ದಯಪಾಲಿಸಬೇಕೆಂದು ಮೈಸೂರು ಸಂಸ್ಥಾನಾಧಿಪತಿಗಳಾದ ಶ್ರೀಮನ್ಮಹಾರಾಜರಲ್ಲಿ ರಾಜಭಕ್ತಿಪೂರ್ವಕವಾಗಿ ಈ ಸಭೆಯು ಬಿನ್ನವಿಸಿಕೊಳ್ಳುತ್ತದೆ.

ಸೂ—ಪಂ॥ ವೈ. ಜಯದೇವರಾವ್ ಕುಲಕರ್ಣಿ, ಆಯುರ್ವೇದ ವಿಶಾರದ (ಬೊಂಬಾಯಿನ ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್‌ನ ಸದಸ್ಯರು) ಬೆಳಗಾಂ.

ಅನು—ಆಯುರ್ವೇದತೀರ್ಥ ಆದ್ಯಅನಂತಾಚಾರ್ಯರು, ನಿಖಿಲ ಕರ್ಣಾಟಕ ಆಯುರ್ವೇದ ಮಂಡಳದ ಮಾಜಿ ಅಧ್ಯಕ್ಷರು. ಮತ್ತು ನಿ. ಕ. ಆಯುರ್ವೇದ ಸಮ್ಮೇಳನದ ಪತ್ರಿಕಾ ಎಡಿಟರ್, ಬಿಜಾಪುರ.

ಈ ವಿಚಾರದಲ್ಲಿ ಶ್ರೀ ಶಾಸ್ತ್ರಿಗಳ ವಿರೋಧವನ್ನು ಅಂಗೀಕರಿಸದೆ ಜಯಕಾರದೊಡನೆ ಸರ್ವಾನುಮತದಿಂದ ಅಂಗೀಕೃತವಾಯಿತು.

17. (a) ಸ್ವಾಗತ ಸಮಿತಿಯ ಆಹ್ವಾನದಂತೆ ಬಂದಿದ್ದ ಕಾರ್ಯಕ್ರಮ ಮತ್ತು ಮೈ. ಸಂ. ವೈದ್ಯ ಸಹಾಯ—ಈ ಎರಡು ಮುಖ್ಯ ವಿಚಾರಗಳ ಮೇಲೆ ಬಂದಿರುವ ಲೇಖನಗಳನ್ನು ವಿಮರ್ಶಿಸಿ, ಸರ್ವಸಮನ್ವಯವಾದ ಕ್ರಮಗಳನ್ನು ಕ್ರೋಢೀಕರಿಸಿ, ನಿರ್ಧರಿಸಲು ಒಂದು ಸ್ಪೆಷಲ್ ಕಮಿಟಿಯನ್ನು ನಿರ್ಮಿಸತಕ್ಕದ್ದು. ಈ ಸಮಿತಿಯು ತನ್ನ ನಿರ್ಧಾರವನ್ನು ಮಂಡಳದ ಪರವಾಗಿ ಪ್ರಕಟಣೆಗಾಗಿ ಕೂಡ್ಲೆ ಸಿದ್ಧಪಡಿಸತಕ್ಕದ್ದು. ಮತ್ತು ನಾಳೆಯೇ ಅಂದರೆ 31 ನೇ ತಾರೀಖು ಪ್ರಾತಃಕಾಲವೇ ಸಭೆ ಸೇರಿಸತಕ್ಕದ್ದು.

ಸೂ—ಅಧ್ಯಕ್ಷರಿಂದ. ಸರ್ವಾನುಮತ.

(b) ಈ ಉಪಸಮಿತಿಗೆ ಈ ಕೆಳಗೆಕಂಡ ಮಹಾಶಯರು ಸದಸ್ಯರಾಗಿರತಕ್ಕದ್ದು—

1. ಅಧ್ಯಕ್ಷರು. (ಶ್ರೀಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳು)
2. ಡಾ॥ ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳು.
3. ಪಂ॥ ಡಿ. ವಿ. ರಾಮರಾಯರು.
4. ಶ್ರೀ॥ ಪಾರ್ಥನಾರಾಯಣ ಪಂಡಿತರು.
5. ಪಂ॥ ವಿ. ಬಿಳಿಗಿರಿ ಅಯ್ಯಂಗಾರ್ಯರು.

ಸೂ—ಅಧ್ಯಕ್ಷರು. ಸರ್ವಾನುಮತ

18. ಮಂಡಳದ ಸ್ಥಾಯಿಸಮಿತಿಗೆ ಅಧಿಕಾರವರ್ಗದ ಚುನಾವಣೆ.

(a) ಸೂ—ಅಧ್ಯಕ್ಷರಿಂದ.

1. ನಿಯಮದಂತೆ ಸಮ್ಮೇಳನಾಧ್ಯಕ್ಷರೇ ಮುಂದಿನ ಸಮ್ಮೇಳನದವರಿಗೆ ಮಂಡಳದ ಅಧ್ಯಕ್ಷರಾಗಿರುತ್ತಾರೆ.

2. ಉಪಾಧ್ಯಕ್ಷರು—ಶ್ರೀಯುತ ಪಾರ್ಥನಾರಾಣಪಂಡಿತರು, ಶಿವಮೊಗ್ಗ.

3. ಸೆಕ್ರಿಟೆರಿಯವರು—ಈಗಿರುವ ಸೆಕ್ರಿಟೆರಿಯವರ ಅಧಿಕಾರಾವಧಿಯು (ಮೂರುವರ್ಷಗಳಾದ್ದರಿಂದ) ಪೂರೈಸಿರುವುದರಿಂದ ಪುನಃ ಚುನಾವಣೆ ನಡೆದು ಸರ್ವಾನುಮತದಿಂದ ಶ್ರೀ|| ಪಂ|| ಎ.ಕೆ. ರಾಯಬಾಗ್‌ಕರ್‌ರವರೇ ಚುನಾಯಿತರಾಗಿರುತ್ತಾರೆ.

4. ಸ್ಥಾ. ಸದಸ್ಯರು—ಜಿಲ್ಲಾವಾರು (ಒಬ್ಬರಿಗೆ ಕಮ್ಮಿಯಿಲ್ಲದಂತೆ)

ಧಾರ್‍ವಾಡ—ಪಂ|| ಗುರುನಾಥರಾವ್, ನರೇಗಲ್.
ಬೆಳಗಾಂ— ,, ಶ್ರೀ ಜಯದೇವಕುಲಕರ್ಣಿ, ಬೆಳಗಾಂ.
ಬಿಜಾಪುರ— ,, ಮ. ದಾ. ಬುರ್ಲಿ, ಬಾಗಲಕೋಟೆ.
ಬಳ್ಳಾರಿ— ,, ಎ. ವೆಂಕೋಬರಾವ್, ಎಲ್. ಐ ಎಮ್.
ಮ್ಯು|| ಆ|| ಡಿಸ್ಪೆನ್‌ಸರಿ, ಬಳ್ಳಾರಿ.
ಮಂಗಳೂರು—,, ಬಿ. ಆರ್. ಹರಿದಾಸ್, ಮಂಗಳೂರು.
ಕೊಡಗು— ,, ವೆಂಕಟರಂಗಾಚಾರ್ ಎಲ್.ಎ.ಎಂ.ಎಸ್. ಮಡಕೇರಿ,
C/o ಶ್ರೀ ನಂಜುಂಡೇಶ್ವರ.
ಶಿವಮೊಗ್ಗ— ,, ಕೆ. ಆರ್. ತ್ಯಾವಣಗಿ, ಶಿಕಾರಿಪುರ.
ತುಂಕೂರು— ,, ಎಲ್. ನರಸಿಂಹಮೂರ್ತಿ, ತುಂಕೂರು.
ಕೋಲಾರ— ,, ಡಿ. ಆರ್. ಹನುಮಂತಾಚಾರ್, ಮೇಲೂರು.
ಬೆಂಗಳೂರು— ,, ಯಲ್ಲಪ್ಪ, ಶ್ಯಾದ್ವಾದವೈದ್ಯಶಾಲಾ, ಬೆಂಗಳೂರು.
ಮೈಸೂರು— ,, ಎಂ. ಜಿ. ಶಿಂಗ್ರಯ್ಯಂಗಾರ್, ಮೈಸೂರು.
ಮಂಡ್ಯ— ,, ಸಿ. ಎಚ್. ನಾರಾಯಣರಾವ್, ಮಂಡ್ಯ.
ಚಿತ್ರದುರ್ಗ—,, ಶಿವಾನಂದಶಾಸ್ತ್ರಿ, ಚಿತ್ರದುರ್ಗ.

ಉಳಿದ ಜಿಲ್ಲಾಗಳಿಗೆ ಬೇಕಾದ ಸದಸ್ಯರನ್ನು ಆಯಾ ಜಿಲ್ಲೆಯ ಸೂಚನೆಯಂತೆ ಸೇರಿಸಿಕೊಳ್ಳಲು ಸ್ಥಾ. ಸಮಿತಿಗೆ ಅಧಿಕಾರ ವಹಿಸಿದೆ.

(b) ಮಂಡಳದ ಸಂಚಾಲರಾಗಿ (organiser) ಕೆಲಸಮಾಡಲು ಶ್ರೀಯುತ ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳನ್ನು ಕೋರತಕ್ಕದ್ದು.

ಸೂ.—ಶ್ರೀ|| ಬಿ. ಆರ್. ಹರಿದಾಸ್, ಮಂಗಳೂರು.

ಅನು.—ಶ್ರೀ|| ರಾಯಬಾಗ್‌ಕರ್, ಹುಬ್ಬಿ.

ಸರ್ವಾನುಮತದಿಂದ ಅವರನ್ನು ಚುನಾಯಿಸಲಾಯಿತು.

19. ಇದುವರಿಗೆ ಮಂಡಳದ ಅಧಿಕಾರ ವರ್ಗದಲ್ಲಿದ್ದು ನಿವೃತ್ತರಾಗುವ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ಸಲ್ಲಿಸಿದ ಸೇವೆಗಾಗಿ ಈ ಸಭೆಯು ಅವರುಗಳನ್ನು ಅಭಿನಂದಿಸುತ್ತದೆ.

20. ನಿಖಿಲ ಭಾರತಾಯುರ್ವೇದ ಮಹಾಮಂಡಳದ ಮುಂದಿನ ಅಧಿವೇಶನ ವನ್ನು ಕರ್ಣಾಟಕದಲ್ಲಿ (ಮಂಗಳೂರಲ್ಲಿ) ಕೂಡಿಸಲು ಮಹಾಮಂಡಲಕ್ಕೆ ಈ ಸಭೆಯು ವಿನಂತಿ ಮಾಡಿಕೊಳ್ಳುತ್ತದೆ.

ಸೂ.—ಶ್ರೀ ಬಿ. ಆರ್. ಹರಿದಾಸ್, ಮಂಗಳೂರು.

ಅನು—ಶ್ರೀ ಎ. ಕೆ. ರಾಯಬಾಗಕರ್, ಹುಬ್ಬಳ್ಳಿ.

ಶ್ರೀ ಗುಂಡಾಚಾರ್ ಸವಣೂರ್, ಹುಬ್ಬಳ್ಳಿ. ಸರ್ವಾನುಮತ.

ಈ ವಿಷಯದಲ್ಲಿ ತಕ್ಕ ಪ್ರಯತ್ನ ಮಾಡಲು ಶ್ರೀ ಬಿ. ಆರ್. ಹರಿದಾಸ್, ಮಂಗಳೂರು, ಮತ್ತು ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿ, ಮೈಸೂರು, ಇವರಿಬ್ಬ ರಿಗೆ ಅಧಿಕಾರವಹಿಸಿದೆ.

ಸೂ.—ಅಧ್ಯಕ್ಷರಿಂದ. ಸರ್ವಾನುಮತ.

21. ನಿ.ಕ.ಆ. ಮಂಡಳದ ಮುಂದಿನಸಮ್ಮೇಳನಕ್ಕೆ ಬಿಜಾಪುರ ಜಿಲ್ಲಾ ಬಾಗ ಲ್ಕೋಟೆಯ ಶ್ರೀ ಎಂ.ವಿ. ಬುರ್ಲಿಯವರಿಂದ ಆಹ್ವಾನಬಂದು, ಶ್ರೀ ಅನಂತಾಚಾರ್ಯ ಆದ್ಯರಿಂದ ಅನುಮೋದಿತವಾದ್ದನ್ನೂ ಸರ್ವಾನುಮತದಿಂದ ಅಂಗೀಕರಿಸಲಾಯಿತು.

22. ಈ ಸಮ್ಮೇಳನವನ್ನು ಸುವ್ಯವಸ್ಥಿತವಾಗಿಯೂ ಯಶಸ್ವಿಯಾಗಿಯೂ ನಿರ್ವಹಿಸಿದ ಸ್ವಾಗತಸಮಿತಿಯವರಿಗೆ ಈ ಸಭೆಯು ತನ್ನ ಹೃತ್ಪೂರ್ವಕಧನ್ಯವಾದ ಗಳನ್ನು ಅರ್ಪಿಸುತ್ತದೆ.

ಸೂ.—ಅಧ್ಯಕ್ಷರಿಂದ. ಜಯಜಯಕಾರದೊಡನೆ ಅಂಗೀಕೃತವಾಯಿತು.

ದೇವತಾಪ್ರಾರ್ಥನೆ, ಮಂಗಳ ಮತ್ತು ಶ್ರೀಮನ್ಮಹಾರಾಜರವರ ಶ್ರೇಯಃ ಪ್ರಾರ್ಥನೆಯೊಡನೆ ಸಭೆಯು ಬರಖಾಸ್ತಾಯಿತೆಂದು ಅಧ್ಯಕ್ಷರಿಂದ ಘೋಷಿಸಲ್ಪಟ್ಟಿತು.

(Sd.) ಶ್ರೀ ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿ,
ಅಧ್ಯಕ್ಷ.

ಮೈಸೂರು,
ತಾ|| 30-12-1941.

ವೈ. ಲಕ್ಷ್ಮೀನರಸಿಂಹಶಾಸ್ತ್ರೀ,
ಜ|| ಸೆಕ್ರೆಟರಿ.

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.



ಶ್ರೀ॥ ಪಂ. ಎ. ಕೆ. ರಾಯಬಾಗಕರ್,
ಆಯುರ್ವೇದಿಕ್ ಪ್ರಾಕ್ಟೀಷನರ್
ನಿಖಿಲಕರ್ಣಾಟಕಾಯುರ್ವೇದ ಮಂಡಳದ ಸೆಕ್ರಿಟೆರಿ.



ಶ್ರೀ॥ ಆ॥ ವಿ॥ ಪಂ॥ ಗೋಪಾಲಕೃಷ್ಣಾವಧಾನಿಗಳು,
ಪ್ರೊ॥ ಶ್ರೀ ಗಣೇಶ ಫಾರ್ಮಸಿ, ಮೈಸೂರು.
ಸ್ವಾಗತಸಮಿತಿಯ ಆರ್ಥಿಕಶಾಖಾ ಸೆಕ್ರಿಟೆರಿ.

## ಸಮ್ಮೇಳನಗಳ ಉಪಸಂಹಾರ ಸಮಾರಂಭ

ತರುವಾಯ ಅಧ್ಯಕ್ಷರು ತಮ್ಮ ಆಸನದಿಂದೆದ್ದು ತಮ್ಮ ಹಿತೋಕ್ತಿಗಳನ್ನು ಕೊಡಲು ಪ್ರಾರಂಭಿಸಿದರು. ಇದರಿಂದ ಅನೇಕ ವೈದ್ಯರು ಸ್ಫೂರ್ತಿಗೊಂಡು ತಮ್ಮ ತಮ್ಮ ಉದ್ಯಮದಲ್ಲಿ ದೃಢಪ್ರತಿಜ್ಞೆಮಾಡಿಕೊಳ್ಳುವಂತಿತ್ತು. ಸ್ವಾಗತಸಮಿತಿಯ ಪರವಾಗಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಈ ರೀತಿಯಾಗಿ ಅಪ್ಪಣೆಕೊಡಿಸಿದರು.

**ಸ್ವಾಗತಸಮಿತಿಯ ಅಧ್ಯಕ್ಷರೇ, ತತ್ಸಂಘಸಭ್ಯಮಹಾಶಯರೇ, ಪ್ರತಿನಿಧಿಗಳೇ—**

ಇಲ್ಲಿಗೆ ಈ ಸಾರಿಯ ಸಮ್ಮೇಳನದ ಮುಕ್ತಾಯ ಸಮಯ. ನಿಮ್ಮೆಲ್ಲರ ಸಹಕಾರದಿಂದ ಸಮ್ಮೇಳನವು ಯಶಸ್ವಿಯಾಗಿ ಜರುಗಿತೆಂದು ಹೇಳಲು ಸಂತೋಷಿಸುತ್ತೇನೆ. ವಿವಿಧಪರಿಷತ್ತುಗಳೂ ಪ್ರದರ್ಶನಶಾಲೆಗಳೂ ವ್ಯವಸ್ಥಿತವಾಗಿದ್ದುವಲ್ಲದೆ ಬೋಧಪ್ರದವಾಗಿದ್ದುವು. ಮೈಸೂರು ದೇಶದ ಹಾಗೂ ಕರ್ನಾಟಕದ ವಿವಿಧಭಾಗಗಳಿಂದ ಅನೇಕರು ಸಶಾಸ್ತ್ರೀಯವಾದ ಔಷಧಗಳನ್ನು ತಯಾರಿಸಿ ಪ್ರದರ್ಶನ ಶಾಲೆಯಲ್ಲಿ ಪ್ರದರ್ಶಿಸಿದ್ದಾರೆ. ಕೆಲವು ಮುಖ್ಯವಾದ ಮೂಲಿಕೆಗಳೂ ಪ್ರದರ್ಶಿತವಾಗಿವೆ. ಮೂಲಿಕೆಗಳು ಇನ್ನೂ ಹೆಚ್ಚು ಸಂಖ್ಯೆಯಲ್ಲಿಯೂ, ಇನ್ನೂ ವ್ಯವಸ್ಥಿತರೀತಿಯಲ್ಲಿಯೂ ಪ್ರದರ್ಶಿಸಲ್ಪಡಬಹುದಾಗಿದ್ದಿತು. ಆದರೆ ಸಮ್ಮೇಳನದ ಸ್ಥಳವು ನಗರವಾದ್ದರಿಂದ ಹೆಚ್ಚು ಸಂಖ್ಯೆಯಲ್ಲಿ ಮೂಲಿಕೆಗಳನ್ನು ಪ್ರದರ್ಶಿಸಲು ಅವಕಾಶವಾಗಲಿಲ್ಲವೆಂದು ತೋರುತ್ತದೆ. ಒಟ್ಟನಲ್ಲಿ ಉತ್ಸಾಹವೂ, ಶಾಸ್ತ್ರೀಯರೀತಿಯಲ್ಲಿ ಕೆಲಸ ಮಾಡಬೇಕೆಂಬ ಭಾವವೂ ವೈದ್ಯರಲ್ಲಿ ಮೂಡುತ್ತಿವೆಯೆಂದು ಸಮ್ಮೇಳನದ ಚಟುವಟಿಕೆಗಳಿಂದ ಊಹಿಸಬಹುದಾಗಿದೆ.

ಚಿಕಿತ್ಸಾಸಂಭಾಷಾಪರಿಷತ್ತಿನಲ್ಲಿಯೂ ರಸಾಯನಸಂಭಾಷಾಪರಿಷತ್ತಿನಲ್ಲಿಯೂ, ದ್ರವ್ಯಸಂಭಾಷಾಪರಿಷತ್ತಿನಲ್ಲಿಯೂ ಕಂಡುಬಂದ ಒಂದು ಅಂಶವನ್ನು ಹೇಳುತ್ತೇನೆ. ಅದಾವುದೆಂದರೆ ಹೆಚ್ಚುಮಂದಿ ಸದಸ್ಯರು ತಮ್ಮ ಪ್ರಬಂಧಗಳನ್ನು ಓದಬೇಕೆಂದೂ, ಭಾಷಣಗಳನ್ನು ಮಾಡಿ ತಮ್ಮ ಅನುಭವಗಳನ್ನು ತಿಳಿಸಬೇಕೆಂದೂ, ಇರುವ ಉತ್ಸಾಹ. ಈ ಆಶೆ ಈಗ ಇರುವುದಕ್ಕೆ ಇಮ್ಮಡಿಯಾಗಿ ಬೆಳೆಯಬೇಕು.

ಪರಿಷತ್ತುಗಳಲ್ಲಿ ಅನೇಕರು ಬಹು ಉತ್ತಮವಾದ ಪ್ರಬಂಧಗಳನ್ನು ಓದಿ ಅಮೋಘವಾದ ವಿಷಯಗಳನ್ನು ಚರ್ಚಿಸಿದ್ದಾರೆ. "ಅಂತ್ರಕ್ರಿಮಿ"ಯ ವಿಷಯವಾಗಿ ಭಾಷಣಮಾಡಿದ ಶ್ರೀ|| ಡಾ|| ಸುಬ್ರಹ್ಮಣ್ಯಶಾಸ್ತ್ರಿ, ಎಲ್.ಎಂ.ಪಿ. ಆಯುರ್ವೇದ

ವಿದ್ವಾನ್ ಇವರು ತಮ್ಮ ಭಾಷಣದಲ್ಲಿಯೂ ಮತ್ತು ಪ್ರದರ್ಶನದಲ್ಲಿಯೂ ತ್ರಿದೋಷತತ್ವಗಳ ಪಥಕವನ್ನು ಸಶಾಸ್ತ್ರೀಯವಾಗಿ ವ್ಯಕ್ತಪಡಿಸಿ ಆಯುರ್ವೇದದ ಮಹತ್ವವನ್ನು ತೋರಿಸಿರುತ್ತಾರೆ. ಈ ಬಗೆಯ ಶಾಸ್ತ್ರದೃಷ್ಟಿಯು ಎಲ್ಲಾ ವೈದ್ಯರಲ್ಲಿಯೂ ಕಂಡು ಬರಲೆಂದು ನನ್ನ ಹಾರೈಕೆ.

ಯಾವ ಶಾಸ್ತ್ರವೇ ಆಗಲಿ ಹಲವು ಮುಖವಾಗಿ ಬೆಳೆಯಬೇಕಾದರೆ ಸಶಾಸ್ತ್ರೀಯವಾಗಿ ಮಡಿಯುವ ಶ್ರದ್ಧಾಳುಗಳು, ಅಗತ್ಯವು. ಎರಡನೆಯದಾಗಿ ಶಾಸ್ತ್ರಾಭಿವೃದ್ಧಿಯನ್ನು ಕೋರುವವರು ವಿಚಾರವಿನಿಮಯಮಾಡಿ ಸೌಹಾರ್ದದಿಂದಲೂ, ಉದಾರಬುದ್ಧಿಯಿಂದಲೂ ತಮ್ಮ ಅನುಭವಗಳನ್ನೂ, ಪ್ರಯೋಗಗಳನ್ನೂ ಮುಚ್ಚಿಡದೆ ತಿಳಿಸಬೇಕು. ಮುಚ್ಚಿಟ್ಟರೆ ಶಾಸ್ತ್ರವು ಬೆಳೆಯಲಾರದು. ಋಷಿಗಳು ತಮ್ಮ ದಿವ್ಯದೃಷ್ಟಿಯಿಂದಲೂ, ಅನುಭವಪೂರ್ವಕವಾಗಿಯೂ ಬರೆದಿಟ್ಟಿರುವ ಅನೇಕ ವಿಷಯಗಳು ನಮ್ಮ ಅನುಭವಕ್ಕೆ ಬಂದಿಲ್ಲ. ಅನೇಕ ಅಂಶಗಳು ಬಗೆ ಹರಿಯದೆ ಇವೆ. ಇವುಗಳ ಸತ್ಯವನ್ನು ಅರಿಯಲು ಹಲವರು ಸತ್ಯಾನ್ವೇಷಕರು ನಿಸ್ವಾರ್ಥರಾಗಿ ಕೆಲಸಮಾಡಬೇಕು. ಇಂತಹ ಕೆಲಸಗಳಿಗೆ ಪಾಶ್ಚಾತ್ಯವಿಜ್ಞಾನಶಾಸ್ತ್ರಪದ್ಧತಿಯು ಅನುಕೂಲವಾಗುವಾಗ ಅದನ್ನೂ ಅನುಸರಿಸೋಣ. ತಪ್ಪಿಲ್ಲ. ಇಲ್ಲಿ ನಮ್ಮ ಶಾಸ್ತ್ರಪದ್ಧತಿಯಿಂದಲೇ ಸಿದ್ಧಾಂತಮಾಡುವುದು ಬಹು ಪ್ರಶಸ್ತವಾಗಿರುವುದು. ಅಂದರೆ ಇದೆಲ್ಲಾ ಬೇಗ ಬೇಗ ನಡೆಯಬೇಕು. ವಿಳಂಬಕ್ಕೆ ಕಾಲವಿಲ್ಲ. ಈ ಕೆಲಸಕ್ಕೆ ನಮ್ಮ ನಾಡಿನ ಜನರು ಸೌಹಾರ್ದ್ರಭಾವದಿಂದ ಶಾಸ್ತ್ರದ ಬೆಳವಣಿಗೆಗೆ ಸಹಕರಿಸಿ ಕೆಲಸಮಾಡಲೆಂದು ಹಾರೈಸುತ್ತೇನೆ.

ಸ್ವಾಗತಸಮಿತಿಯ ಅಧ್ಯಕ್ಷರೇ, ಮತ್ತು ಸದಸ್ಯರೇ,—ಈ ನಿಮ್ಮ ಆದರ ಸತ್ಕಾರಗಳನ್ನು ಎಂದಿಗೂ ಮರೆಯಲಾರೆನು. ಇದನ್ನು ಕುರಿತು ವಾಕ್ಯರಚನೆಯಿಂದ ಸ್ಪಷ್ಟಪಡಿಸಿದರೆ ಅದನ್ನು ಸಹೃದಯರು ಹೊಗಳಿಕೆ ಎನ್ನುವರೆ.? ಅಂತಃಕರಣ ಪ್ರವೃತ್ತಿಯು ಪ್ರಮಾಣವಾಗಿರುವಲ್ಲಿ ಸತ್ಯವು ಸತ್ಯವೇ ಹೊರತು ಅಸತ್ಯವಾಗಲಾರದು. ಮನೋಕ್ಷೇತ್ರದಲ್ಲಿ ಅಂಕುರಿಸಿ ಬೆಳೆದ ಆನಂದವೃಕ್ಷದಲ್ಲಿನ ಕುಸುಮವು ಸುಗಂಧವನ್ನು ದಶೆದಶೆಗಳಲ್ಲಿ ಪಸರಿಸದೇ ಹೋಗುವುದೇ ?

ಮಹಾಶಯರೇ, ಕಲಾಕ್ಷೇತ್ರವಾದ ಈ ಮಹಿಶೂರ ರಾಜ್ಯದಲ್ಲಿ ನಮ್ಮ ನಿಖಿಲಕರ್ಣಾಟಕಾಯುರ್ವೇದಮಂಡಲಕ್ಕೆ ಸುಸ್ವಾಗತವನ್ನು ಕೊಟ್ಟುದುದಕ್ಕೆ ಪುನಃ ನಿಮ್ಮೆಲ್ಲರಿಗೂ ಧನ್ಯವಾದಗಳನ್ನು ಸಮರ್ಪಿಸುವೆನು. ಸ್ವಾಗತಾಧ್ಯಕ್ಷರಿಗೂ, ಪ್ರಧಾನ

ಕಾರ್ಯದರ್ಶಿಗಳಿಗೂ, ಇನ್ನೂ ಇಂತಹ ಕಾರ್ಯಗಳನ್ನು ಮಾಡಲು ಆಯುವನ್ನು ಕೊಡಲೆಂದು ಧನ್ವಂತರಿಯನ್ನು ಪ್ರಾರ್ಥಿಸುವೆನು.

ಮಹಿಶೂರ ಮಹಾರಾಜ್ಯಕ್ಕೆ ಆರೋಗ್ಯಶಾಖಾ ಮಂತ್ರಿಗಳಾದ ಶ್ರೀ|| ಹೆಚ್. ಬಿ. ಗುಂಡಪ್ಪಗೌಡರು ತಮ್ಮ ಉದಾರವಾದ ಆರಂಭೋತ್ಸವ ಭಾಷಣದಲ್ಲಿ ತಮಗೆ ಆಯುರ್ವೇದದಲ್ಲಿರುವ ಅಭಿಮಾನವನ್ನು ಹೃತ್ಪೂರ್ವಕವಾಗಿ ತೋರಿಸಿ, ಇದರ ಅಭಿವೃದ್ಧಿಯನ್ನು ಮಾಡುವುದಕ್ಕೆ ಹೆಚ್ಚಾದ ಕೆಲಸವನ್ನು ನಿರ್ವಹಿಸಬೇಕಾಗಿ ಎಲ್ಲರಿಗೂ ಪ್ರಬೋಧನೆಯನ್ನು ಮಾಡಿರುವರು. ಅವರ ಅಭಿಮಾನವು ಅಮೋಘವಾದುದು. ಇದಕ್ಕೆ ನಾವೆಲ್ಲರೂ ಕೃತಜ್ಞರಾಗಿರಬೇಕು. ಅವರು ಇದರ ಅಭಿವೃದ್ಧಿಗಾಗಿ ನಮ್ಮೆಲ್ಲರಿಗೂ ಸಹಾಯಕರಾಗಿರಬೇಕೆಂದು ಅಭ್ಯರ್ಥಿಸುವೆನು.

ಎಷ್ಟೋ ದೂರದಿಂದ ಈ ಸಮ್ಮೇಳನಕ್ಕೆ ಆಗಮಿಸಿರುವ ಪ್ರತಿನಿಧಿಗಳಿಗೂ, ಪ್ರೇಕ್ಷಕರಿಗೂ, ವೈದ್ಯಮಹಾಶಯರಿಗೂ, ಈ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿರುವುದಕ್ಕೆ ನನ್ನ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಸಮರ್ಪಿಸುವೆನು.

ಶ್ರೀಮನ್ಮಹಾರಾಜರವರಿಗೂ ರಾಜಕುಟುಂಬಕ್ಕೂ ಆಯುವನ್ನೂ ಬಲವನ್ನೂ ದಯಪಾಲಿಸಲೆಂದೂ, ಸತ್ಯಕ್ಕೆ ಜಯವಾಗಲೆಂದೂ ಶ್ರೀಧನ್ವಂತರಿಯನ್ನು ಪ್ರಾರ್ಥಿಸುತ್ತೇನೆ.

ನನ್ನನ್ನು ಇಲ್ಲಿ ರಾಜಅತಿಥಿಯನ್ನಾಗಿ ಅಂಗೀಕರಿಸಿ ನನಗೂ, ನಾನು ಯಾವ ಸಂಸ್ಥೆಯನ್ನು ಪ್ರತಿಪಾದಿಸುವೆನೋ ಅಂತಹ ವೈದ್ಯವೃಂದಕ್ಕೂ ಸನ್ಮಾನವನ್ನೆಸಗಿದ ಮೈಸೂರು ಸರ್ಕಾರಕ್ಕೆ ನನ್ನ ಪರವಾಗಿಯೂ, ನಿ. ಕ. ಆಯುರ್ವೇದ ಮಂಡಳದ ಪರವಾಗಿಯೂ ಅನಂತ ವಂದನೆಗಳು.

ಸಮ್ಮೇಳನದ ಪ್ರಧಾನಕಾರ್ಯದರ್ಶಿಯವರ ಆಭಾರಮನ್ನಣೆಯಾದನಂತರ ಈ ಅಧಿವೇಶನವು ಯಶಸ್ವಿಯಾಗಿ ಪೂರ್ತಿಯಾದಂತಾಯಿತೆಂದು ಉದ್ಘೋಷಿಸಿ ತಮ್ಮೆಲ್ಲರಿಗೂ ಮತ್ತೊಮ್ಮೆ ವಂದನೆಯನ್ನರ್ಪಿಸಿ ವಿರಮಿಸುತ್ತೇನೆ.

ಇತಿ ಶಿವಮ್ !

ಮೈಸೂರು, (Sd.) ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿ,

ತಾ|| 30-12-1941. ಸಮ್ಮೇಳನಾಧ್ಯಕ್ಷ.

ಎಂದು ಅಪ್ಪಣೆಕೊಡಿಸಿ ತಮ್ಮ ಭಾಷಣವನ್ನು ಮುಗಿಸಿದರು.



ಇದರಿಂದ ಈ ಮಹಾಶಯರಿಗೆ ಆಯುರ್ವೇದ ರಹಸ್ಯವನ್ನು ಹೊರಗೆಡಹಿ ಪ್ರಜಾಸಾಮಾನ್ಯಕ್ಕೆ ಹೇಗೆ ಉಪಯೋಗಪಡಿಸಬಹುದೆಂಬ, ಮತ್ತು ಆಯುರ್ವೇದ ವೈದ್ಯರೂ ಬೇಗ ಏಳಿಗೆಗೆ ಬರಬಹುದೆಂಬ ವಿಚಾರದಲ್ಲಿ ಎಷ್ಟರಮಟ್ಟಿಗೆ ಅಭಿಲಾಷೆ ಯಿರುವುದೆಂಬುದೂ ಸರ್ವವಿದಿತವಾಗುವಂತಿತ್ತು. ಈ ಆಯುರ್ವೇದ ಕ್ಷೇತ್ರದಲ್ಲಿ ತಮ್ಮ ಸೇವೆಯನ್ನು ಧಾರಾಳವಾಗಿ ಸಲ್ಲಿಸಲು ಪೂರ್ಣ ಸಹಾನುಭೂತಿಯುತವಾದ ವಾಕ್ಯಗಳಿಂದ ಸಭಾಸದರನ್ನು ಹುರಿದುಂಬಿಸಿದರು.

ನೆರೆದಿದ್ದ ಅನೇಕ ಪ್ರಮುಖ ಪ್ರತಿನಿಧಿಗಳು ಸ್ವಾಗತ ಸಮಿತಿಯ ಸೇವೆ ಯನ್ನೂ ಕಾರ್ಯದಕ್ಷತೆಯನ್ನೂ ಬಹುಮಟ್ಟಿಗೆ ಅಂಗೀಕರಿಸಿದ್ದಾಗಿಯೂ, ಅದರಲ್ಲೂ ಸ್ವಾಗತ ಸಮಿತಿಯ ಜನರಲ್ ಸೆಕ್ರಿಟರಿಯವರಾದ ಶ್ರೀ ಡಾ|| ವೈ. ಲಕ್ಷ್ಮೀನರ ಸಿಂಹಶಾಸ್ತ್ರಿಗಳ ಕಾರ್ಯತತ್ಪರತೆಯೂ ವಿಚಾರಶೀಲತೆಯೂ ತಮಗೆಲ್ಲಾ ಹೊಸದಲ್ಲ ವೆಂಬುದಾಗಿಯೂ, ತಮ್ಮ ಆಂತರಿಕ ವಿಶ್ವಾಸಪೂರ್ವಕ ಪ್ರಶಂಸಾ ವಾಕ್ಯಗಳನ್ನು ತಮ್ಮ ತಮ್ಮ ಜಿಲ್ಲೆಗಳ ಪರವಾಗಿ ಅತ್ಯುತ್ಸಾಹದಿಂದ ವ್ಯಕ್ತಪಡಿಸುತ್ತಿದ್ದುದು ಅವರು ಗಳ ದೊಡ್ಡತನವನ್ನೂ, ವಿಶಾಲದೃಷ್ಟಿಯನ್ನೂ, ಮೇಲಾಗಿ ಆಯುರ್ವೇದಾಭಿಮಾನ ವನ್ನೂ ಸ್ಪಷ್ಟಪಡಿಸುತ್ತಿದ್ದವಲ್ಲದೆ ಕರ್ಣಾಟಕ ನಾನಾ ಭಾಗದ ವೈದ್ಯ ಸಹೋದರ ರಲ್ಲಿ ಐಕಮತ್ಯವನ್ನೂ ಸಮತಾಭಾವನೆಯನ್ನೂ ತೋರಿಸಿಕೊಡುತ್ತಿದ್ದವು. ವಿಶ್ರಾಂತ ಅಧ್ಯಕ್ಷರಾದ ಶ್ರೀ ಆಯುರ್ವೇದತೀರ್ಥ ಆವ್ವಅನಂತಾಚಾರ್ಯರವರು, ವಿಶ್ರಾಂತ ಉಪಾಧ್ಯಕ್ಷರಾದ ಶ್ರೀ ಎಂ. ವಿ. ಬುರ್ಲಿಯವರು, ಮಂಡಳದ ಸೆಕ್ರಿಟರಿಯವರಾದ ಶ್ರೀ ಎ. ಕೆ. ರಾಯ್‌ಬಾಗ್‌ಕರರವರು, ರಾಣಿಬೆನ್ನೂರಿನ ಶ್ರೀ ರಂಗನಾಥನಾಯ ಕರು, ನಂದಿಯ ಶ್ರೀ ಸುಬ್ಬಣ್ಣಾಚಾರ್ಯರೂ, ಬೆಳಗಾಂವದ ಶ್ರೀ ಜೆ. ಜಿ. ಕುಲಕರ್ಣಿ ಯವರು, ಶಿವಮೊಗ್ಗೆಯ ಶ್ರೀ ಸೂರ್ಯನಾರಾಯಣಶಾಸ್ತ್ರಿಗಳು ಮುಂತಾಗಿ ಅನೇಕ ಮಾನ್ಯ ಪ್ರತಿನಿಧಿಗಳು ಈ ಉಪಚಾರೋಕ್ತಿಗಳಲ್ಲಿ ಭಾಗಿಗಳಾಗಿದ್ದರು.

ನಂತರ ಸ್ವಾಗತ ಸಮಿತಿಯ ಜನರಲ್ ಸೆಕ್ರಿಟರಿಯವರಾದ ಡಾ|| ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳು ಸಭಿಕರ ಉತ್ಸಾಹಮಧ್ಯದಲ್ಲಿ ಎದ್ದುನಿಂತು ಸ್ವಾಗತ ಸಮಿತಿಯ ಪರವಾಗಿ ಆ ಸಮ್ಮೇಳನದ ಸರ್ವ ಮಾನ್ಯಪ್ರತಿನಿಧಿಗಳಿಗೂ ಯಥಾ ಶಕ್ತಿ ಯುಕ್ತವಾದ ಪ್ರತ್ಯುಪಚಾರೋಕ್ತಿಗಳ ಮೂಲಕ ಅವರುಗಳನ್ನೆಲ್ಲಾ ಅವರು ಗಳ ಹಿರಿಮೆಗಾಗಿಯೂ, ಮನ ಬಿಚ್ಚಿದ ಅಭಿಪ್ರಾಯಗಳಿಗಾಗಿಯೂ ತಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳನ್ನರ್ಪಿಸಿ, ಈ ಸಮ್ಮೇಳನವು ನಿಬಂಧನೆ ಗಳಿಗನುಸಾರವಾಗಿ ಯಥಾಶಕ್ತಿ ಇಷ್ಟುಮಟ್ಟಿಗಾದರೂ ವ್ಯವಸ್ಥಿತವಾಗಿ ನಡೆ

ಯಲು ಇದುವರಿಗೂ ಮಂಡಲದ ಅಧ್ಯಕ್ಷರಾಗಿದ್ದ ಆಯುರ್ವೇದತೀರ್ಥ ಶ್ರೀ ಆದ್ಯ ಅನಂತಾಚಾರ್ಯರವರ, ಮಂಡಳದ ಸೆಕ್ರಿಟೆರಿಯವರಾದ ಶ್ರೀ ಎ. ಕೆ. ರಾಯ ಬಾಗ್‌ಕರ್‌ರವರ ಕಾಲೋಚಿತ ಸಹಕಾರವೇ ಅತಿ ಮುಖ್ಯವಾದುವೆಂದು ತಿಳಿಸಿ, ಈ ಸಮ್ಮೇಳನವು ಜಯಪ್ರದವಾಗಿಯೂ ಉಪಯುಕ್ತ ರೀತಿಯಿಂದಲೂ ಜರುಗಿಸಲು ಕಾರಣರಾದ ಮಹನೀಯರಿಗೆಲ್ಲ ಸ್ವಾಗತಸಮಿತಿಯ ಪರವಾಗಿ ತಮ್ಮ ಆಭಾರಮನ್ನಣೆ ಮಾಡುತ್ತಾ ಈ ರೀತಿ ವಿಜ್ಞಾಪಿಸಿಕೊಂಡರು.

**" ಮಾನ್ಯ ಅಧ್ಯಕ್ಷರವರೇ, ವೈದ್ಯ ಸೋದರ ಸೋದರಿಯರೇ, ಮಾನ್ಯ ಪ್ರತಿನಿಧಿಗಳೇ, ಮಹಿಳೆಯರೇ, ಅಭಿಮಾನಿ ಮಹಾಶಯರೇ ಮತ್ತು ಸ್ವಾಗತಸಮಿತಿಯ ವೈದ್ಯ ಮತ್ತು ವೈದ್ಯೇತರ ಸದಸ್ಯರೆ—**

ಈ ನಿಖಿಲ ಕರ್ಣಾಟಕದ 12 ನೆಯ ಆಯುರ್ವೇದ ಸಮ್ಮೇಳನದ ಕಾರ್ಯ ಕಲಾಪಗಳು ಈ ನನ್ನ ಆಭಾರಮನ್ನಣೆಯಾದನಂತರ ಇಂದಿಗೆ ಕೊನೆಗಾಣುವುವೆಂದು ಮಾನ್ಯ ಅಧ್ಯಕ್ಷರು ತಮ್ಮ ಅಧಿಕಾರವಾಣಿಯಿಂದ ಉಚ್ಚರಿಸಿದುದು—ಈ ಕಾರ್ಯ ನಿರ್ವಾಹದಲ್ಲಿ ತೊಡಗಿದ್ದ ಸ್ವಾಗತ ಸಮಿತಿಯವರಿಗೆ ಸ್ವಲ್ಪಮಟ್ಟಿಗೆ ಕೃತಕೃತ್ಯತೆಯ ಶಾಂತಿಯನ್ನುಂಟುಮಾಡುವುದಾದರೂ, ಇನ್ನು ತಾವೆಲ್ಲರೂ ನಮ್ಮನ್ನು ಬಿಟ್ಟು ಹೊರಟುಹೋಗುವಿರೆಂಬ ಆಲೋಚನೆಯು ನಮ್ಮನ್ನು ನಿಶ್ಚೇತನರನ್ನಾಗಿ ಮಾಡಿದೆ. ಇಡೀ ಕರ್ಣಾಟಕದ ಸುಪ್ರಸಿದ್ಧ ವೈದ್ಯಶ್ರೇಷ್ಠರೂ, ವೈದ್ಯಾಭಿಮಾನಿಗಳಾದ ಅತಿಥಿ ಗಳೂ ಆದ ನಿಮ್ಮೊಡನೆ ಇಲ್ಲಿ ಒಂದೆಡೆಯಲ್ಲಿ ಈಗ್ಗೆ 3-4 ದಿನಗಳಿಂದ ಕಲೆತು, ಕೆಲವು ಸಮಯದಲ್ಲಿ ಸ್ನೇಹಪೂರಿತವಾದ ಸರಸಸಲ್ಲಾಪಗಳಿಂದಲೂ, ಅನೇಕ ವೇಳೆ ಸಮ್ಮೇಳ ನದ ಕಾರ್ಯಕಲಾಪಗಳಲ್ಲಿ ಪಕ್ಷ ಪ್ರತಿಪಕ್ಷಗಳನ್ನು ವಹಿಸಿ ಶಾಸ್ತ್ರಾರ್ಥವಿಚಾರಗಳಲ್ಲೂ ಪ್ರಸ್ತಾವಗಳ ಸಮರ್ಥನೆಯಲ್ಲೂ ನಿರ್ವಾತ್ಸರ್ಯಯುತರಾಗಿ ಚರ್ಚೆಗಳನ್ನು ನಡೆಸಿ ನಮ್ಮಗಳ ಕಾಲವನ್ನೆಲ್ಲಾ ಅತ್ಯುಪಯುಕ್ತವಾಗಿಯೇ ಕಳೆದೆವು. ಆ ಉತ್ಸಾಹ ಭರ ದಲ್ಲಿ ಸ್ವಾಗತಸಮಿತಿಯವರಾದ ನಮ್ಮಿಂದ ಏನಾದರೂ ಒಂದಲ್ಲ ಒಂದು ರೀತಿಯಲ್ಲಿ ಅಪಚಾರಗಳು ನಡೆದಿರಬಹುದೆಂಬುದು ಅಸಂಭವವಲ್ಲ. ತಮ್ಮಗಳ ವಸತಿಯಲ್ಲಿಯೂ ಊಟಉಪಚಾರಗಳ ವಿಚಾರದಲ್ಲೂ ಅನೇಕ ಲೋಪಗಳೂ ಬಂದಿರಬಹುದೆಂಬುದೂ ಉಪಚಾರದ ಮಾತಲ್ಲ. ಎಲ್ಲಕ್ಕಿಂತಲೂ ಮುಖ್ಯವಾಗಿ ಪರಸ್ಥಳದಿಂದ ಎಷ್ಟೋ ಕಷ್ಟನಷ್ಟಗಳನ್ನೂ ದೇಹ ಶ್ರಮವನ್ನೂ ಸಹಿಸಿ ಇಷ್ಟು ದೂರ ದಯಮಾಡಿಸಿರುವ ತಮ್ಮಲ್ಲಿ ಪ್ರತಿಯೊಬ್ಬರನ್ನೂ ವ್ಯಕ್ತಿಶಃ ಪೂರ್ಣ ಪರಿಚಯ ಮಾಡಿಕೊಳ್ಳುವುದಕ್ಕೆ ತಕ್ಕಷ್ಟು ಅವಕಾಶವು ಪರಸ್ಪರ ಉಂಟಾಗಲಿಲ್ಲವೆಂಬುದು ಒಂದು ಹಳೆಯ ಕೊರತೆ.

ಈ ಕೊರತೆಯನ್ನು ಈ ಸಮ್ಮೇಳನದಲ್ಲಿ ಆದಷ್ಟುಮಟ್ಟಿಗಾದರೂ ನೀಗಿಸುವೆವೆಂಬ ಧೈರ್ಯವು ನಮಗೆ ತುಂಬಾ ಇತ್ತು. ಆದರೆ ಮಾಮೂಲಿನಂತೆ ನಮ್ಮ ಈ ಸಮ್ಮೇಳನದಲ್ಲೂ ನಡೆದುದರಿಂದ ಅದು ಅನಿವಾರ್ಯವೆಂದೆನ್ನಿಸಿತು.

ನಮ್ಮ ಆಹ್ವಾನಕ್ಕೆ ಮನ್ನಣೆಕೊಟ್ಟು ತಮ್ಮ ಎಷ್ಟೆಷ್ಟೋ ಜರೂರಿ ಕಾರ್ಯಗಳಿದ್ದರೂ ವಿರಾಮ ಮಾಡಿಕೊಂಡು ದಯಮಾಡಿಸಿ ಈ ಸಮ್ಮೇಳನಗಳಿಗೆ ಒಂದು ಅಪೂರ್ವ ಗೌರವವನ್ನುಂಟುಮಾಡಿಕೊಟ್ಟ ನಮ್ಮ ಮಾನ್ಯ ಮಂತ್ರಿವರ್ಯರ ದಯಾರ್ದ್ರತೆಯನ್ನು ನಾವೆಷ್ಟು ಸ್ಮರಿಸಿಕೊಂಡರೂ ಸಾಲದು. ಬಹು ದೂರದಲ್ಲಿರುವ ಪನವೇಲದಿಂದ ಮೈಸೂರಿಗೆ ದಯಮಾಡಿಸಿ, ಇಲ್ಲಿನ ಆಯುರ್ವೇದ ವಸ್ತು ಪ್ರದರ್ಶನೋದ್ಘಾಟನ ಸಮಾರಂಭವನ್ನು ಸಂತೋಷದಿಂದ ನೆರವೇರಿಸಿ, ತಮ್ಮ ಅಮೂಲ್ಯವಾದ ಅನುಭವಗಳ ಮೂಲಕ ಈ ನಮ್ಮ ಕಾರ್ಯಕ್ಕೆ ಸಹಾನುಭೂತಿಯನ್ನು ತೋರಿಸಿದ ಶ್ರೀಮಾನ್ ಗಂಗಾಧರವಿಷ್ಣುಶಾಸ್ತ್ರಿ ಪುರಾಣೀಕರ ನಯವಿನಯಗಳು ನಮ್ಮೆಲ್ಲರಿಗೂ ಅನುಕರಣೀಯವಾದವುಗಳೆಂದರೆ ಅತಿಶಯೋಕ್ತಿಯಲ್ಲ. ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಕಾರ್ಯನಿರ್ವಾಹಮಾಡಿದ ಮತ್ತು ಮುಂದು ಮಾಡಬೇಕಾದ ಭಾರವನ್ನು ವಹಿಸಿರುವ ಶ್ರೀಯುತ ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳ ಸೌಹಾರ್ದ್ರತೆ ಮತ್ತು ಸರಳತೆಯಿಂದ ಕೂಡಿದ ಪ್ರೇಮಪೂರ್ಣತೆಯನ್ನೂ ಎಂದೂ ನಾವುಗಳು ಮರೆಯುವಂತಿಲ್ಲ. ತಮ್ಮ ವೃದ್ಧಾಪ್ಯದಲ್ಲಿ, ಅದರಲ್ಲೂ ತಮ್ಮ ದೇಹಸ್ಥಿತಿಯು ಸರಿಯಾಗಿಲ್ಲದಿದ್ದಾಗ್ಯೂ ನಮ್ಮ ಪ್ರಾರ್ಥನೆಯನ್ನು ಅಲಕ್ಷಿಸದೆ ದಯಮಾಡಿಸಿ ನಮ್ಮ ಮೈಸೂರು ಸಂಸ್ಥಾನದ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಸಾಂಗಗೊಳಿಸಿದ ಶ್ರೀಮಾನ್ ಭಿಷಗ್ರತ್ನ ಪಾಳ್ಯಂ ವೆಂಕಟಾಚಲಪಂಡಿತರ ವಿಷಯದಲ್ಲಿ ನಮ್ಮಗಳಿಗಿರುವ ಗೌರವ ಮರ್ಯಾದೆಗಳನ್ನು ಅವರು ನೂರ್ಮಡಿಯಾಗಿ ಹೆಚ್ಚಿಸಿದರು. ಈ ಸಮ್ಮೇಳನಗಳು ಯಶಸ್ವಿಯಾಗಿ ಜರುಗಲೆಂದು ತಮ್ಮ ಶುಭಸಂದೇಶಗಳನ್ನು ಕಳುಹಿಸಿದ ಮಹನೀಯರ ಶುಭಾಶಯಗಳು ಈ ಕಾರ್ಯದ ಯಶಸ್ಸಿಗೆ ಕಾರಣವಾಗಿವೆ. ಪರಿಷತ್ತುಗಳ ಅಧ್ಯಕ್ಷರುಗಳೂ, ಆರಂಭಭಾಷಣಕಾರರೂ ನಮ್ಮ ಪ್ರಾರ್ಥನೆಯನ್ನು ಮನ್ನಿಸುವುದರಲ್ಲಿ ತೋರಿಸಿದ ನಿರ್ವ್ಯಾಜ ಪ್ರೀತಿ ವಿಶ್ವಾಸಗಳು ನಮ್ಮನ್ನು ಚಿರಋಣಿಗಳನ್ನಾಗಿ ಮಾಡಿದವು. ಈ ಆರ್ಥಿಕ ದುಸ್ಥಿತಿಯ ಕಾಲದಲ್ಲಿ ಈ ಸಮ್ಮೇಳನವು ಹೇಗೆ ಜರುಗೀತೆಂಬ ನಮ್ಮ ಕಳವಳವನ್ನರಿತು ಈ ಮೇಲಿನ ಮಹಾಶಯರೆಲ್ಲರೂ ತಮ್ಮ ಸ್ವಂತವಾದ ವೆಚ್ಚದಿಂದಲೇ ಸಂತೋಷದಿಂದ ದಯಮಾಡಿಸಿ ಕಾರ್ಯನಿರ್ವಾಹದಲ್ಲಿ ಬದ್ಧಕಂಕಣರಾದದ್ದು, ಆಯುರ್ವೇದೋದ್ಧಾರದಲ್ಲೂ ತಮ್ಮ ವೈದಸಹೋ

ದರರ ಹಿತಸಾಧನೆಯಲ್ಲೂ ಅವರುಗಳಿಗೆ ಇರುವ ಅಭಿಮಾನವನ್ನು ವ್ಯಕ್ತಪಡಿಸತಕ್ಕ ದ್ದಾಗಿವೆ. ಶ್ರೀಮಾನ್ ಪುರಾಣೀಕರೂ ಶ್ರೀಮಾನ್ ಪಾಳ್ಯದ ವೆಂಕಟಾಚಲಪಂಡಿ ತರೂ, ಶ್ರೀಮಾನ್ ಆಯುರ್ವೇದಭೂಷಣ ಎಂ. ವಿ. ಶಾಸ್ತ್ರಿಗಳವರೂ ತಮ್ಮ ಭಾಷಣಗಳನ್ನು ತಮ್ಮ ತಮ್ಮ ಸ್ವಂತಖರ್ಚಿನಿಂದಲೇ ಪ್ರಿಂಟುಮಾಡಿಸಿ ಕಳಿಸಿದ್ದು ಸ್ವಾಗತಸಮಿತಿಗೆ ಎಷ್ಟೋ ಸಹಾಯವಾಯಿತು. ಆದಕ್ಕಾಗಿ ಅವರುಗಳಿಗೆಲ್ಲಾ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು. ಅನೇಕ ಪಂಡಿತರು ಉತ್ತಮವಾದ ಪ್ರಬಂಧಲೇಖನ ಪಠನಗಳಿಂದಲೂ ಭಾಷಣಗಳಿಂದಲೂ ಈ ಸಮ್ಮೇಳನಕ್ಕೆ ಕಳೆಗೂಡಿ ಸಿದರು. ವಸ್ತುಪ್ರದರ್ಶನಕಾರರ ಉತ್ಸಾಹಪೂರಿತ ಸಹಕಾರವಿಲ್ಲದಿದ್ದರೆ ಈ ಸಮ್ಮೇ. ಳನವು ತೀರ ಸಪ್ಪೆಯಾಗಿಹೋಗುತ್ತಿತ್ತು. ಅನೇಕ ನಾಗರಿಕರು ಮತ್ತು ವೈದ್ಯರು ಎಷ್ಟೋವಿಚಾರಗಳನ್ನು ಗ್ರಹಿಸಲು ಮತ್ತು ವೈದ್ಯರ ಕಾರ್ಯದಕ್ಷತೆ ಮುಂತಾದು ವುಗಳನ್ನು ಗಮನಿಸಲು ಈ ನಮ್ಮ ಚಲನವಲನಗಳು ಅಣಿಯಾದವು.

ಪ್ರಬಂಧಗಳ ಮತ್ತು ಪ್ರದರ್ಶನ ವಸ್ತುಗಳ ಯೋಗ್ಯತಾವಿಮರ್ಶೆಗಾಗಿ ನಿಷ್ಪಕ್ಷಪಾತಿಗಳಾದ ವ್ಯಕ್ತಿಗಳನ್ನೊಳಗೊಂಡ ಕಮಿಟಿಗಳನ್ನು ಏರ್ಪಡಿಸಲಾಗಿದೆ ಯೆಂದೂ, ಅವರ ತೀರ್ಮಾನಗಳು ನಿರಾಕ್ಷೇಪಕರಗಳಾಗಿರುತ್ತವೆಂದೂ ನಾನು ತಮ್ಮ ಗಳಿಗೆ ಭರವಸೆಯನ್ನು ಕೊಡಬಲ್ಲೆನು. ಅಂತಹ ತೀರ್ಮಾನದ ಪಟ್ಟಿಯನ್ನು ಶ್ರೀಮಾನ್ ಎನ್. ನಾಗೇಶರಾಯರವರು ಈಗ ತಮ್ಮ ಮುಂದೆ ಓದಿ ತಿಳಿಸಿದ್ದಾರೆ. (ಈ ಪಟ್ಟಿಯನ್ನು ಮುಂದೆಕೊಟ್ಟಿದೆ.).

ಪ್ರಬಂಧಗಳು ಮತ್ತು ಭಾಷಣಗಳ ವಿಚಾರದಲ್ಲಿ ಉತ್ಸಾಹಪೂರಿತರಾಗಿ ಬರುವ ವೈದ್ಯರುಗಳಿಗೆ ಅವಕಾಶ ದೊರೆಯಲಿಲ್ಲವೆಂಬ ಕೊರತೆಯಿಂದ ಮನ ನೋಯು ದಂತೆ ಹೆಚ್ಚು ಜನರಿಗೆ ಅವಕಾಶಗಳನ್ನು ಕಲ್ಪಿಸುವ ಸದುದ್ದೇಶದಿಂದಲೇ ಪ್ರತಿಯೊ ಬ್ಬರಿಗೂ ಕೊಡಬೇಕಾದ ಕಾಲವನ್ನು ಲಂಬಿಸದಂತೆ ಹತೋಟಿಮಾಡಿಕೊಳ್ಳ ಬೇಕಾಗಿ ಬಂದಿತು. ಆದಕ್ಕಾಗಿ ಕೆಲವರಿಗೆ ಕೊಂಚ ಅಸಮಾಧಾನವಾಗುವುದೂ ಅಸಂಭವವಲ್ಲ. ಆದರೂ ಬಹು ಜನರ ಹಿತದೃಷ್ಟಿಯಿಂದ ಮಾಡಿದ ಏರ್ಪಾಡಾದ್ದ ರಿಂದ ತಾವೆಲ್ಲರೂ ಆದಕ್ಕಾಗಿ ಮನ್ನಿಸುವಿರಾಗಿ ಆಶಿಸುತ್ತೇವೆ. ವೈದ್ಯರು ಈ ಪ್ರಬಂಧ ಕ್ರಮದಲ್ಲೂ ಪ್ರತ್ಯಕ್ಷ ಪ್ರದರ್ಶನ ಕ್ರಮದಲ್ಲೂ ಇನ್ನೂ ಹೆಚ್ಚಿನ ಉತ್ಸಾಹಗಳನ್ನು ಮುಂದಿನ ಸಮ್ಮೇಳನದಲ್ಲಿ ತೋರಿಸಬೇಕೆಂಬ ಅಧ್ಯಕ್ಷರ ಆಶೋತ್ತರವೂ ನಮ್ಮಗಳ ಏಳಿಗೆಗೆ ಅತ್ಯಗತ್ಯವೆಂದು ತಾವೆಲ್ಲರೂ ಮನ್ನಿಸುವಿರಾಗಿ ನನ್ನ ನಂಬಿಕೆಯಿದೆ.

ವಸ್ತುಪ್ರದರ್ಶನಕಾರರು ಅನೇಕರು ಉತ್ಸಾಹದಿಂದ ಭಾಗವಹಿಸಿದುದೂ ಅದಕ್ಕೆ ತಕ್ಕಂತೆ ಈ ಭವ್ಯವಾದ ಪ್ರದರ್ಶನ ಶಾಲೆಯು ನಮಗೆ ದೊರೆತದ್ದೂ ಈ

ಸಮ್ಮೇಳನಕ್ಕೆ ಪೂರ್ಣ ಕಳೆಕೊಟ್ಟಿತೆಂದು ಪುನಃ ಪುನಃ ಹೇಳುವ ಆಶೆ ಉಂಟಾಗುತ್ತದೆ. ಪ್ರದರ್ಶನವನ್ನು ನೋಡಲು ದಯಮಾಡಿಸಿದ್ದ ಮಹಿಳೆಯರ ಮತ್ತು ನಾಗರಿಕ ಮಹಾಶಯರ ಸಂಖ್ಯೆಯು ಒಟ್ಟು ನಾಲ್ಕು ಸಾವಿರಕ್ಕಿಂತ ಹೆಚ್ಚಾಗಿತ್ತೆಂದು ಆ ಶಾಖೆಯ ವಾಲಂಟಿಯರ್ ಮತ್ತು ಅಧಿಕಾರಿಗಳಿಂದ ತಿಳಿಯಲು ಸಂತೋಷವಾಗುತ್ತದೆ. ಇವರ ಪೈಕಿ ಬಹು ಸಂಖ್ಯೆಯವರು ಕೇವಲ ವಿದ್ಯಾವಂತರಾದ ನಾಗರಿಕರೇ ಎಂಬುದಂತೂ ಆನಂದದ ವಿಷಯವಾಗಿದೆ.

ಈ ಸಮ್ಮೇಳನಕ್ಕೆಂದು ನಾವು ಕೈಹಚ್ಚಿದ 2—3 ತಿಂಗಳೊಳಗಾಗಿ ಈ ಕಾರ್ಯವು ಇಷ್ಟು ಸುಸೂತ್ರವಾಗಿ ಜರುಗುವುದೆಂದು ನಾವು ನಂಬುವಷ್ಟು ಧೈರ್ಯವು ನಮಗೆ ಸುತರಾಂ ಇರಲಿಲ್ಲ. ಪ್ರಪಂಚದ ಆರ್ಥಿಕ ಸ್ಥಿತಿಯು ಹದಗೆಟ್ಟು ಅಲ್ಲೋಲಕಲ್ಲೋಲವಾಗಿರುವಾಗ, ಈ ಮಹಾಕಾರ್ಯಕ್ಕೆ ಶ್ರೀ ಧನ್ವಂತರಿಯ ಕೃಪೆಯಿಂದ ಸಾಕಾದಷ್ಟು ಸಹಾಯವು ಒದಗಿದ್ದು ನಮ್ಮ ಪುಣ್ಯ.

ಮುಖ್ಯವಾಗಿ ನಮ್ಮನ್ನಾಳುವ ಮೈಸೂರು ಮಹಾಪ್ರಭುಗಳು ಮಾಡಿದ ಪರಮಾನುಗ್ರಹವೇ ನಮಗೆ ಪ್ರಾರಂಭದ ಬೀಜವಾಯಿತು. ಮೈಸೂರು ಸರ್ಕಾರದವರು, ಮೈಸೂರು, ಬೆಂಗಳೂರು, ತುಂಕೂರು ಮತ್ತು ಇತರಶಕ್ತವಾದ ಮ್ಯುನಿಸಿಪಾಲಿಟಿಗಳೂ, ಕೋಲಾರ, ಮೈಸೂರು, ಬೆಂಗಳೂರು, ತುಂಕೂರು ಮತ್ತು ಹಾಸನದ ಡಿ|| ಬೋರ್ಡ್‌ಗಳೂ ಕೆಲವು ಕೋ-ಆಪರೇಟೀವ್ ಸೊಸೈಟಿಗಳೂ ನಮ್ಮ ಸಹಾಯಕ್ಕೆ ಬಂದು ನಮ್ಮ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಿದುವು. ಶ್ರೀ ಶ್ರೀ ರಾಘವೇಂದ್ರಸ್ವಾಮಿಗಳವರು ಮತ್ತು ಶ್ರೀ ಶ್ರೀ ಪರಕಾಲಸ್ವಾಮಿಗಳವರಿಂದ ಬಂದ ಮಂತ್ರಾಕ್ಷತಾ ಪೂರ್ವಕವಾದ ಆಶೀರ್ವಾದಾನುಗ್ರಹವು ನಮ್ಮನ್ನು ಚೇತನಗೊಳಿಸಿದವು. ಶ್ರೀತೋಂಟದಾರ್ಯಸ್ವಾಮಿಗಳ ಮಠದ ವಿಶ್ವಾಸಪೂರ್ವಕ ಧನಸಹಾಯಕ್ಕಾಗಿ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಈ ರಾಜಧಾನಿಯ ಗಣ್ಯರಾದ ಶ್ರೀಮಂತರ ಮತ್ತು ಅಭಿಮಾನಿಗಳ ಉದಾರ ಸಹಾಯವೂ ಈ ಕಾರ್ಯನಿರ್ವಾಹಕ್ಕೆ ಆಣಿಯಾದವು. ಇವರುಗಳಿಗೆಲ್ಲಾ ಸ್ವಾಗತ ಸಮಿತಿಯ ಪರವಾಗಿ ನನ್ನ ಅನಂತವಂದನೆಗಳು.

ಸರಕಾರದ ಸಹಾಯದಿಂದ ಒದಗಿದ ದಸರಾ ಎಗ್ಜಿಬಿಷನ್ ಕಟ್ಟಡವು ಅದರ ಸ್ಥಳೀಯ ಅಧಿಕಾರಿಗಳ ಸೌಹಾರ್ದ್ರ ಸೌಜನ್ಯತೆಗಳಿಂದ ನಮಗೆ ಕೇವಲ ಸ್ವಂತದಂತೆ ಉಪಯೋಗವಾಗಲು ಅವಕಾಶವುಂಟಾಯಿತು. ಆದಕ್ಕಾಗಿ ಶ್ರೀ ಎಂ. ರಾಮಸ್ವಾಮಯ್ಯಂಗಾರ್ಯರಿಗೂ ಅವರ ಸ್ಟಾಫಿಗೂ ನಾವು ಚಿರಋಣಿಗಳಾಗಿದ್ದೇವೆ.

ಮೈಸೂರು ಸಿಟಿ ಮ್ಯುನಿಸಿಪಾಲಿಟಿಯವರ ಸಹಾಯವಿಲ್ಲದಿದ್ದರೆ ನಮ್ಮ ಕಾರ್ಯಗಳು ನಡೆಯುತ್ತಲೇ ಇರಲಿಲ್ಲ. ಟೌನ್‌ಹಾಲ್‌ನ ಏರ್ಪಾಡು, ನೀರಿನ ಅನುಕೂಲ, ನೈರ್ಮಲ್ಯದ ಸಹಾಯ ಇವುಗಳಲ್ಲದೆ ವಿಶೇಷವಾದ ಧನ ಸಹಾಯವೂ ಸಹ ಅವರಿಂದ ಒದಗಿದ್ದು ನಮ್ಮನ್ನು ಕೃತಕೃತ್ಯರನ್ನಾಗಿ ಮಾಡಿತು. ಅದಕ್ಕಾಗಿ ಅಧ್ಯಕ್ಷರಿಗೂ ಇಂಜಿನಿಯರಿಗೂ, ಹೆಲ್ತ್ ಆಫೀಸರ್‌ರವರಿಗೂ ಮತ್ತು ಎಲ್ಲಾ ಮ್ಯುನಿಸಿಪಲ್ ಕೌನ್ಸಿಲರ್‌ಗಳಿಗೂ ನನ್ನ ಅನಂತ ಧನ್ಯವಾದಗಳು.

ನಮ್ಮ ಕಾರ್ಯಗಳಿಗೆಲ್ಲಾ ದಿವ್ಯಜ್ಯೋತಿಯನ್ನು ಒದಗಿಸಿಕೊಟ್ಟು ಸಹಕರಿಸಿದ ಎಲೆಕ್ಟ್ರಿಕ್ ಇಲಾಖೆಗೂ, ನಿರ್ಮಲವಾದ ನೀರನ್ನು ಯಥೇಚ್ಛವಾಗಿ ಒದಗಿಸಿಕೊಟ್ಟು ಪ್ರತಿನಿಧಿಗಳ ಸ್ನಾನಪಾನಗಳಿಗೆ ಅನುಕೂಲಪಡಿಸಿದ ನೀರಿನ ಇಲಾಖಾ ಅಧಿಕಾರಿಗಳಿಗೂ ನಮ್ಮ ಅನಂತ ಧನ್ಯವಾದಗಳು.

ಪ್ರದರ್ಶಿತ ವಸ್ತುಗಳಿಗೆಲ್ಲಾ ಯೋಗ್ಯತಾನುಸಾರ ಪ್ರಶಸ್ತಿಗಳನ್ನು ಕೊಡುವ ಹಳೆಯ ಪದ್ಧತಿಯನ್ನೇ ಬಹು ಮಟ್ಟಿಗೆ ನಾವೂ ಅನುಸರಿಸಬೇಕಾಯಿತೆನ್ನಲು ಸಂಕೋಚವಾಗುತ್ತಿದೆ. ಹಠಾತ್ತನೆ ಪೂರ್ಣ ಪರಿವರ್ತನೆಯು ಹಿತಕರವಲ್ಲವೆಂದು ತೋರಿದ್ದರಿಂದ ಈ ವಿಚಾರದಲ್ಲಿ ನಾವು ಪ್ರಾರಂಭದಲ್ಲಿ ನಿರ್ಧರಿಸಿಕೊಂಡಷ್ಟುಮಟ್ಟಿನ ಕಠಿಣ ಮಾರ್ಗವನ್ನು (ಅದು ನ್ಯಾಯವಾದುದೇ ಆಗಿದ್ದಾಗ್ಯೂ) ಅನುಸರಿಸಲು ಸಾಧ್ಯವಾಗದಿದ್ದರೂ, ನಮ್ಮ ಅನುಭವವನ್ನು ಮುಂದಿನ ಸಮ್ಮೇಳನಗಳಲ್ಲಾದರೂ ಇನ್ನೂ ಹೆಚ್ಚು ಶಿಸ್ತಿನಿಂದ ಆಚರಿಸುವ ಚಳುವಳಿ ನಡಿಸಲು ಪ್ರಯತ್ನ ಪಡದಿರಲಾರೆವು.

ನಮಗೆ ಸ್ಥಳದ ಅಲಂಕಾರಕ್ಕೆ ನೆರವಾದ ಹಾರ್ಟಿಕಲ್ಚರ್ ಇಲಾಖಾದವರು ವಿಶ್ವಾಸದಿಂದ ಬಂದು ಮಾಡಿಕೊಟ್ಟ ಏರ್ಪಾಡುಗಳಿಗಾಗಿ ನಮ್ಮ ಕೃತಜ್ಞತೆಗಳು. ಕೊಂಚವಾದರೂ ಗಲಾಟೆಗೂ ನಷ್ಟಕ್ಕೂ ಅವಕಾಶವಾಗದಂತೆ ಉಸ್ತುವಾರಿ ನಡೆಸಿ ಈ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡಿಸಿದ ಪೋಲೀಸ್ ಸಹಾಯಕ್ಕಾಗಿಯೂ, ಅಂಚೆಯ ಅನುಕೂಲಕ್ಕಾಗಿ ಇಲ್ಲಿಯೇ ಪೋಷ್ಟಾಫೀಸನ್ನು ಇಟ್ಟು ಉಪಕಾರ ಮಾಡಿದ ಆ ಇಲಾಖಾಧಿಕಾರಿಗಳಿಗೂ ನಮ್ಮ ಅನಂತ ವಂದನೆಗಳು. ಸ್ಕೌಟ್‌ಗಳ ಸಹಾಯವನ್ನು ವದಗಿಸಿಕೊಟ್ಟ ಡಿ|| ಸ್ಕೌಟ್ ಕಮಿಷನ್ನರಿಗೆ ನಮ್ಮ ಧನ್ಯವಾದಗಳು. ಗೌ|| ಆಯುರ್ವೇದಿಕ್ ಕಾಲೇಜಿನ ಕೆಲವು ವಿದ್ಯಾರ್ಥಿಗಳು ತಾವಾಗಿ ಉತ್ಸಾಹದಿಂದ ಬಂದುನಿಂತು ನಮ್ಮೊಡನೆ ಸೇವಾಕಾರ್ಯದಲ್ಲಿ ನಿರತರಾಗಿದ್ದುದು ಪ್ರಶಂಸನೀಯವು. ಅದಕ್ಕಾಗಿ ಅವರಿಗೆ ನಮ್ಮ ವಂದನೆಗಳು. ಇತರ ಆಯುರ್ವೇದ ಸಮ್ಮೇಳನ

ಗಳಿಂದಲೂ ಹೆಚ್ಚು ಹೆಚ್ಚಾಗಿ ಈ ಸಮ್ಮೇಳನಕ್ಕೆ ಮಾನ್ಯ ಮಹಿಳೆಯರೂ ಅನೇಕರು ಪರಸ್ಥಳದಿಂದಲೂ ದಯಮಾಡಿಸಿದ್ದುದು ಒಂದು ಸಂತೋಷದ ಸಂಗತಿ. ಅವರುಗಳ ಯೋಗಕ್ಷೇಮವನ್ನು ವಿಚಾರಿಸಲು ಆತುರದ ಸಮಯಕ್ಕೆ ನಾವು ಮಾಡಿಕೊಂಡ ಪ್ರಾರ್ಥನೆಯನ್ನು ಮನ್ನಿಸಿ ಬಂದುನಿಂತು, ಸಮ್ಮೇಳನವು ಮುಗಿಯುವ ವರೆಗೂ ಮಹಿಳೆಯರ ಉಪಚಾರದಲ್ಲಿ ಸಹಕರಿಸಿದ ರಾಜಧಾನಿಯ ವನಿತಾ ಸದನದ ಸೆಕ್ರೆಟರಿಯವರಾದ ಶ್ರೀಮತಿ ಸುಶೀಲಾಬಾಯಿಯವರಿಗೂ ಅವರ ಅನುಯಾಯಿಗಳಿಗೂ ನಮ್ಮ ಅನಂತ ವಂದನೆಗಳು.

ಈ ಸಮಾರಂಭದಲ್ಲಿ ನಾನಾಬಗೆಯಲ್ಲಿ ದುಡಿದು ಕಾರ್ಯಸಾಧನೆಯನ್ನು ಮಾಡಿದ ಸ್ಥಳೀಯ (ಮೈಸೂರಿನ ಮತ್ತು ಮೈಸೂರು ಜಿಲ್ಲೆಯ) ವೈದ್ಯ ಮಹಾಶಯರುಗಳ ಉಪಕಾರಗಳನ್ನು ಸ್ಮರಿಸುತ್ತ ಹೋಗುವುದು ಅಪ್ರಕೃತವು. ಏಕೆಂದರೆ ಈ ಕಾರ್ಯವೆಲ್ಲಕ್ಕೂ ಅವರುಗಳೇ ಜವಾಬ್ದಾರರಾಗಿದ್ದುಕೊಂಡು ಮಾನಾಪಮಾನಗಳಿಗೆ ದೀಕ್ಷೆವಹಿದವರಾದ್ದರಿಂದ, ಅವರುಗಳ ಆಭಾರಮನ್ನಣೆಯು ನಮ್ಮನ್ನೇ ನಾವು ಉಪಕಾರ ಸ್ಮರಣಮಾಡಿಕೊಂಡಂತಾಗುತ್ತೆ. ಅದನ್ನು ಬಿಟ್ಟು, ನಮಗೆ ಸಹಾಯ ಮಾಡಿದ ವೈದ್ಯೇತರ ಮಹಾಶಯರಿಗೆ ನಮ್ಮ ಕೃತಜ್ಞತೆಯನ್ನು ಅರ್ಪಿಸುವುದು ತಮ್ಮ ಕಡೆಯ ಕರ್ತವ್ಯ.

ವೃದ್ಧರಾಗಿಯೂ ಪ್ರಭಾವಶಾಲಿಗಳಾಗಿಯೂ ಪರೋಪಕಾರವೇ ತಮ್ಮ ಧ್ಯೇಯವಾಗಿಯೂ ಉಳ್ಳ ಶ್ರೀಅಂಬ್ಲೆಸುಬ್ರಹ್ಮಣ್ಯಯ್ಯರವರ ಹೆಸರು ಸ್ವಾಗತಾಧ್ಯಕ್ಷಸ್ಥಾನದಲ್ಲಿ ಕಾಣಿಸಿಕೊಳ್ಳದಿದ್ದರೆ ಈ ಕಾರ್ಯವು ನೆರವೇರುತಿತ್ತೋ ಎಂಬುದೆ ಸಂಶಯಾಸ್ಪದವಾದ ವಿಷಯ. ಶ್ರೀ ಧನಕೋಟಿಶೆಟ್ಟರು ಧನಸಂಗ್ರಹಕ್ಕಾಗಿ ನಮ್ಮೊಡನೆ ಅವಿಶ್ರಾಂತವಾಗಿ ಕಷ್ಟಪಟ್ಟುದೂ, ಶ್ರೀ ಎನ್. ನಾಗೇಶರಾಯರವರು ಪ್ರದರ್ಶನ ವ್ಯವಸ್ಥೆಯಲ್ಲೂ, ಮಿಕ್ಕ ತುರ್ತಾಪ ವ್ಯವಸ್ಥೆಗಳು ಮತ್ತು ಸರ್ವ ವಿಚಾರಗಳಲ್ಲಿ ಶ್ರೀ ಕೆ. ಶ್ರೀಪದಾಚಾರ್ಯರೂ, ಶ್ರೀವೆಂಕಟಸುಬ್ಬರಾಯರೂ, ಶ್ರೀಸುಬ್ರಹ್ಮಣ್ಯಯ್ಯನವರೂ, ಶ್ರೀ ಬಿ. ಆರ್. ರಾಮಕೃಷ್ಣಯ್ಯನವರೇ ಮುಂತಾದ ಅನೇಕ ಮಹನೀಯರು ತಮ್ಮ ದೇಹ ಸುಖವನ್ನು ಲಕ್ಷಿಸದೆ ಈ ಸಮ್ಮೇಳನಾವಸರದಲ್ಲಿ ಶ್ರಮಪಟ್ಟುದ್ದೂ ವೈದ್ಯರಾದ ನಮ್ಮೆಲ್ಲರನ್ನೂ ಎಂದೆಂದೂ ಋಣಿಗಳನ್ನಾಗಿ ಮಾಡಿವೆ.

ಊಟಉಪಚಾರ ಶಾಖೆಗಳಲ್ಲಿ ಶ್ರೀ ಎಂ. ಜಿ. ಶಿಂಗ್ರಯ್ಯಂಗಾರ್ಯರ, ಶ್ರೀ ನರಸಿಂಹಯ್ಯನವರ, ಶ್ರೀ ಚನ್ನಕೇಶವಶಾಸ್ತ್ರಿಗಳ ಮತ್ತು ವೆಂಕಟರಾಮ ಪಂಡಿತರ ಮೊಹನತ್ತಿಗೂ, ಸಭಾ ಕಾರ್ಯನಿರ್ವಾಹಗಳಲ್ಲಿ ಅಹರ್ನಿಶಿಯೂ ದುಡಿದ

ಶ್ರೀ ಕೆ. ಪಿ. ಪುರಾಣಿಕರು, ಶ್ರಿ ಎನ್. ಎಸ್. ನಾಗೇಶರಾಯರು, ಶ್ರಿ ಲಕ್ಷ್ಮೀನಾರಾಯಣಶಾಸ್ತ್ರಿಗಳು ಮುಂತಾದವರಿಗೂ, ಆ ಸಮಯದಲ್ಲಿ ಸಮ್ಮೇಳನಾವರಣದಲ್ಲಿ ವೈದ್ಯಶಾಲೆಗಳನ್ನು ನಡೆಸಿದ ಶ್ರಿ ಕೆ. ಜಿ. ರಾಮಭದ್ರ ಆ|| ವಿ|| ಮತ್ತು ಪಂ|| ಡಿ|| ಶ್ರೀಕಂಠಯ್ಯ ಇವರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳು.

ಪ್ರಬಂಧಶಾಖೆಯಲ್ಲಿ ಬಹುಶ್ರಮವಹಿಸಿದ ಆ|| ವಿ|| ಶ್ರಿ ವಿ. ಬಿಳಿಗಿರಯ್ಯಂಗಾರ್ಯರಿಗೂ ಅವರ ಕಮಿಟಿಯವರಿಗೂ ನನ್ನ ಧನ್ಯವಾದಗಳು.

ಮೊದಲಿನಿಂದಲೂ ಧೈರ್ಯವಾಗಿ ನಿಂತು ತಮ್ಮ ನಿತ್ಯಗಟ್ಲೆಯ ವೈದ್ಯಕೀವೃತ್ತಿಯನ್ನೆಲ್ಲಾ ಬದಿಗಿಟ್ಟು, ಸಮ್ಮೇಳನಕ್ಕೆ ಸಂಬಂಧಪಟ್ಟ ಆಫೀಸಿನ ಎಲ್ಲಾ ಕಾರ್ಯಗಳನ್ನೂ ನಿರ್ವಹಿಸಿ, ಲೇಶವಾದರೂ ಇತರರ ಸಂಶಯಕ್ಕೆ ಎಡೆಗೊಡದಂತೆ ಆರ್ಥಿಕ ಜಮಾಖರ್ಚುಗಳನ್ನು ಇರಿಸಿ, ನನಗೆ ಸಹಾಯಮಾಡಿದ ನನ್ನ ಸಹಕಾರ್ಯದರ್ಶಿಗಳಾದ ಶ್ರೀಯುತ ಗೋಪಾಲಕೃಷ್ಣಾವಧಾನಿಗಳ ಉಪಕಾರಸ್ಮರಣೆಯನ್ನು ಮರೆತರೆ ನಾನು ಕೃತಘ್ನನಾದೇನು.

ಕಾರ್ಯಕಲಾಪಗಳಿಂದ ಬೇಸತ್ತಿದ್ದ ನಿಮ್ಮಗಳಿಗೆಲ್ಲಾ ಸಶಾಸ್ತ್ರೀಯವೂ, ಸಯುಕ್ತಿಕವೂ ಆದ ಯೋಗಸಾಧನೆಗಳನ್ನು ಅವುಗಳಿಗೆ ಉಚಿತವಾದ ಉಪನ್ಯಾಸಗಳೊಡನೆ ಪ್ರದರ್ಶಿಸಿ, ಆನಂದವನ್ನುಂಟುಮಾಡಿದ ಹೆಡತಲೆಯ ಶ್ರೀಯುತ ಶ್ರೀರಂಗರವರಿಗೂ, ಯೋಗ ಪ್ರೊಫೆಸರ್ ಶ್ರೀಯುತ ಕೃಷ್ಣಮಾಚಾರ್ಯರಿಗೂ ಅವರ ಶಿಷ್ಯರಿಗೂ ನಮ್ಮ ಅನಂತ ಧನ್ಯವಾದಗಳು.

ಈ ನಮ್ಮ ಕಾರ್ಯದಲ್ಲಿ ಸ್ವಲ್ಪವಾಗಿಯಾಗಲಿ, ಹೆಚ್ಚಾಗಿಯಾಗಲಿ, ಪ್ರತಿಫಲ ಪಡೆದಾಗಲಿ, ಪಡೆಯದೆ ಆಗಲಿ ನಮ್ಮೊಡನೆ ಸಹಕರಿಸಿ ಏಕಮನಸ್ಕರಾಗಿ ಸಹಾಯ ಮಾಡಿದ ಸರ್ವರಿಗೂ ಸ್ವಾಗತಸಮಿತಿಯ ಪರವಾಗಿಯೂ ನನ್ನ ಸ್ವಂತವಾಗಿಯೂ ವಂದನೆಗಳನ್ನರ್ಪಿಸುವುದು ನನ್ನ ಕರ್ತವ್ಯ.

ಸಂಸ್ಕೃತದ ಸ್ವಾಗತ ಪದ್ಯಗಳನ್ನು ದಯೆಯಿಟ್ಟು ಮಾಡಿಕೊಟ್ಟ ವಿದ್ವಾನ್ ಎಸ್. ರಾಮಸ್ವಾಮಯ್ಯಂಗಾರ್ಯರಿಗೂ, ಕನ್ನಡದಲ್ಲಿ ಮಾಡಿಕೊಟ್ಟ ಆಸ್ಥಾನ ವಿದ್ವಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಗೂ ಮತ್ತು ಅವುಗಳನ್ನು ಪಠಿಸಿದವರಿಗೂ ನಮ್ಮ ಅನಂತ ವಂದನೆಗಳು.

**ಮಾನ್ಯಮಹಾಶಯರೆ,** ತಾವೆಲ್ಲರೂ ಎಷ್ಟೋ ದೇಹಶ್ರಮ ಧನವ್ಯಯ ಮತ್ತು ಸ್ವಕಾರ್ಯಗಳ ಅನುಕೂಲಗಳನ್ನು ನಿರ್ಲಕ್ಷಿಸಿ ಶ್ರಮಪಟ್ಟು ದಯಮಾಡಿಸಿದಿರಿ— ನಮ್ಮ ನಮ್ಮಗಳಲ್ಲಿ ಪರಸ್ಪರ ಏನೇ ಅಲ್ಪಸ್ವಲ್ಪ ಅನುಚಿತಗಳು ನಡೆದಿದ್ದರೂ ಮರೆತು ತಾವೆಲ್ಲರೂ ಪರಸ್ಪರ ಮೈತ್ರಿಯಿಂದಲೂ ಸಂತೋಷದಿಂದಲೂ ತಮ್ಮ ಸ್ಥಳಗಳಿಗೆ ಸುಖಪ್ರಯಾಣ ಬೆಳಸಬೇಕೆಂತಲೂ, ತಮ್ಮ ತಮ್ಮ ಸ್ಥಳಗಳನ್ನು ತಲುಪಿದ ಬಗ್ಗೆ

ತಮ್ಮ ಶುಭಾಶಯಗಳನ್ನು ಕಳುಹಿಸಬೇಕೆಂತಲೂ ಅಭ್ಯರ್ಥಿಸಿ ತಮ್ಮೆಲ್ಲರೊಡನೆ ಸೇರಿ ನಮ್ಮನ್ನಾಳುವ ಮಹಾಸ್ವಾಮಿಯವರಿಗೂ ರಾಜಮನೆತನಕ್ಕೂ ಶ್ರೀಧನ್ವಂತರಿಯು ಆಯುರಾರೋಗ್ಯಾದಿಸಮಸ್ತ ಸನ್ಮಂಗಳಗಳನ್ನೂ ಉಂಟುಮಾಡಲೆಂದೂ, ಈಗ ನಡೆಯುತ್ತಿರುವ ಈ ಕರಾಳಯುದ್ಧದಲ್ಲಿ ನಮ್ಮ ಚಕ್ರಾಧಿಪತಿಗಳಿಗೆ ಅಖಂಡ ಜಯವುಂಟಾಗಲೆಂದೂ ಹಾರೈಸಲು ತಮ್ಮನ್ನು ಪ್ರಾರ್ಥಿಸುತ್ತೇನೆ.

ಭಗವಂತನು ಸರ್ವರಿಗೂ ಸನ್ಮಂಗಳವನ್ನುಂಟುಮಾಡಲಿ. **ಇತಿ ಶಿವಂ.**

ಎಂಬದಾಗಿ ತಮ್ಮ ಭಾಷಣವನ್ನು ಪೂರೈಸಿದರು.

ಅನಂತರ ಸರ್ವರಿಗೂ ಕ್ರಮವಾಗಿ ಪುಷ್ಪಹಾರಗಳನ್ನೂ ಪುಷ್ಪಗಳನ್ನೂ ಅರ್ಪಿಸಲಾಯಿತು.

ಜನರಲ್ ಸೆಕ್ರೆಟರಿಗಳಾದ ಶ್ರೀ ಲಕ್ಷ್ಮೀನರಸಿಂಹಶಾಸ್ತ್ರಿಗಳಲ್ಲಿ ತಮಗಿರುವ ಪ್ರೀತಿವಿಶ್ವಾಸಗಳನ್ನು ಪ್ರದರ್ಶಿಸುವುದಕ್ಕಾಗಿ ಪ್ರತಿನಿಧಿಗಳ ಪರವಾಗಿ ಶ್ರೀ ಆದ್ಯ ಅನಂತಾಚಾರ್ಯರವರು ಅವರಿಗೆ ತಮ್ಮ ಆಶೀರ್ವಾದಪೂರ್ವಕವಾದ ಪುಷ್ಪಮಾಲಿಕೆಯನ್ನು ಹಾಕಿದರು. ಈ ರೀತಿಯಾದ ಪರಸ್ಪರ ವಿಶ್ವಾಸಪ್ರದರ್ಶನಗಳಾದ ಮೇಲೆ ನಮ್ಮನ್ನಾಳುವ ಶ್ರೀಮನ್ಮಹಾರಾಜರವರ, ಅವರ ಸರ್ಕಾರದ ಮತ್ತು ರಾಜಕುಟುಂಬದವರ ಶ್ರೇಯಃಪ್ರಾರ್ಥನೆಯಲ್ಲಿ ಸಭೆಯಾದ್ಯಂತವೂ ಭಾಗವಹಿಸಿತು.

ವಾಲೆಂಟರುಗಳು, ಸ್ಕೌಟುಗಳು ಮತ್ತು ಬಾಲಕಿಯರು—ಇವರಿಂದ ರಾಷ್ಟ್ರಗೀತೆಯಾದನಂತರ ಆ **ಸಭೆಯು ಸಾಂಗವಾಗಿ ಮುಕ್ತಾಯವಾಯಿತು.**

ಇದಾದಮೇಲೆ ರಾತ್ರಿ **೬-೩೦ ರಿಂದ ೮** ಗಂಟೆಯವರಿಗೆ ಮೈಸೂರಿನ ಸುಪ್ರಸಿದ್ಧ ಯೋಗಶಾಲಾಧ್ಯಕ್ಷರಾದ ವೇ||ಬ್ರ||**ಶ್ರೀ ಟಿ. ಕೃಷ್ಣಮಾಚಾರ್ಯರು**ತಮ್ಮ ಶಿಷ್ಯರ ಸಮೇತ ದಯಮಾಡಿಸಿ ಸಮ್ಮೇಳನಾವರಣದಲ್ಲಿ ತಮ್ಮ ಯೋಗಾಸನಗಳನ್ನು ಪ್ರದರ್ಶಿಸಿ, ಆಯುರ್ವೇದಕ್ಕೂ, ಯೋಗಶಾಸ್ತ್ರಕ್ಕೂ ಇರುವ ನಿಕಟಸಂಬಂಧವನ್ನು ತಮ್ಮ ಅಮೋಘವಾದ ಭಾಷಣದಿಂದಲೂ, ಪ್ರತ್ಯಕ್ಷನಿದರ್ಶನಗಳಿಂದಲೂ ಸಭಿಕರಿಗೆ ಮನದಟ್ಟುಮಾಡಿಕೊಟ್ಟರು. ನಂತರ ವಂದನಾಸಮರ್ಪಣೆಯೊಂದಿಗೆ ಇವರ ಪ್ರದರ್ಶನಗಳು ಕೊನೆಗಂಡವು.

ರಾತ್ರಿ ಭೋಜನಾನಂತರ **ಸ್ವಾಗತಸಮಿತಿಯ ವಾಲೆಂಟಿಯರುಗಳು** ವಿವಿಧ ವಿನೋದಾವಳಿಗಳನ್ನು ಏರ್ಪಡಿಸಿ, ರಾತ್ರಿ 12 ಗಂಟೆಯವರಿಗೂ ಪ್ರೇಕ್ಷಕರನ್ನೂ, ಪ್ರತಿನಿಧಿಗಳನ್ನೂ ಉಲ್ಲಾಸದಲ್ಲಿ ಮಗ್ನರನ್ನಾಗಿ ಮಾಡಿ, ನಾಲ್ಕುದಿನಗಳಿಂದಲೂ ಅವರುಗಳು ಪಟ್ಟಿದ್ದ ಶ್ರಮವನ್ನೆಲ್ಲಾ ನೀಗಿಸಲು ಪ್ರಯತ್ನಿಸಿ ಬಹುಮಟ್ಟಿಗೆ ಯಶಸ್ವಿಗಳಾದರು.

ಇಲ್ಲಿಗೆ ಸಮ್ಮೇಳನಗಳ ಕಾರ್ಯಕಲಾಪಗಳೆಲ್ಲಾ ಮುಗಿದು ಪರಸ್ಥಳದಿಂದ ದಯ ಮಾಡಿದ್ದ ಪ್ರತಿನಿಧಿಗಳು ತಮ್ಮ ತಮ್ಮ ಊರುಗಳಿಗೆ ಪ್ರಯಾಣಮಾಡುವ ಪ್ರಯತ್ನ ದಲ್ಲಿ ನಿರತರಾದರು. ವಾಲೆಂಟರುಗಳೂ, ಸ್ವಾಗತಕಾರ್ಯನಿರ್ವಾಹಕ ಸದಸ್ಯರುಗಳೂ ಯಥಾಶಕ್ತಿ ಅವರುಗಳ ಪ್ರಯಾಣ ಸೌಕರ್ಯಗಳಲ್ಲಿ ಅಣಿಯಾಗಿ ಅವರುಗಳನ್ನೆಲ್ಲಾ ಬೀಳ್ಕೊಟ್ಟರು.

ಕೆಲವರು ಸುತ್ತಮುತ್ತಿನ ಪ್ರೇಕ್ಷಣೀಯ ದೃಶ್ಯಗಳನ್ನು ನೋಡುವ ಸಲುವಾಗಿ ಬೃಂದಾವನ, ಚಾಮುಂಡಿಬೆಟ್ಟ, ಶ್ರೀರಂಗಪಟ್ಟಣ, ನಂಜನಗೂಡು ಮುಂತಾದ ಸ್ಥಳ ಗಳಿಗೆ ಹೋಗಲಪೇಕ್ಷಿಸಿದವರಿಗೆಲ್ಲಾ ಸಾಧ್ಯವಾದ ವಾಹನಸೌಕರ್ಯ ಮುಂತಾದವು ಗಳ ವ್ಯವಸ್ಥೆಯು ಸ್ವಾಗತಮಂಡಳಿಯಿಂದ ಏರ್ಪಟ್ಟಿದ್ದುದರಿಂದ, ಅನೇಕರು ಅವುಗಳ ಸೌಲಭ್ಯಗಳನ್ನು ಹೊಂದಿದರೆಂಬುದು ಸಂತೋಷದ ಸಂಗತಿಯಾಗಿದೆ.

**31-12-42ನೇ ದಿವಸ ಪ್ರಾತಃಕಾಲ** ಕೆಲವು ಉಪಸಮಿತಿಗಳುಸೇರಿ ಹಿಂದಿನ ದಿವಸದಲ್ಲಿ ನಿಯುಕ್ತವಾಗಿದ್ದ ಕಾರ್ಯನಿರ್ವಾಹದಲ್ಲಿ ತೊಡಗಿದ್ದವು.

ಅಧ್ಯಕ್ಷರೇ ಮೊದಲಾಗಿ ಸರ್ವ ಪರಸ್ಥಳದ ಮಹಾಶಯರೂ, ಪ್ರತಿನಿಧಿಗಳೂ, ಸ್ವಾಗತ ವೈದ್ಯ ಸದಸ್ಯರೂ ಪರಸ್ಪರ ಅನುಜ್ಞೆಗಳನ್ನು ಪಡೆದು ತಮ್ಮ ತಮ್ಮ ಸ್ಥಳಗ ಳನ್ನು ಸುರಕ್ಷಿತವಾಗಿ ತಲುಪಿದ ಬಗ್ಗೆ ಅನೇಕರಿಂದ ಶುಭಸಂದೇಶಗಳೂ, ಕುಶಲ ಪತ್ರಗಳೂ, ತಲುಪಿ ಸ್ವಾಗತ ಸಮಿತಿಯವರಿಗೆ ಆನಂದವನ್ನುಂಟುಮಾಡಿದವು. ಅವುಗಳಲ್ಲಿ ಮಾನ್ಯ ಅಧ್ಯಕ್ಷರಾದ ಶ್ರೀ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿ ಗಳವರು ಬಳ್ಳಾರಿ, ಪನವೇಲದ ಶ್ರೀ ಗಂಗಾಧರವಿಷ್ಣುಶಾಸ್ತ್ರಿ ಪುರಾಣೀಕರವರು, ಶ್ರೀ ಎಂ. ವಿ. ಶಾಸ್ತ್ರಿಗಳವರು ಮಂಗಳೂರು, ಶ್ರೀ ಬಿ. ಆರ್. ಹರಿದಾಸ್‌ರವರು ಮಂಗಳೂರು, ಶ್ರೀ ಎಂ. ವಿ. ಬುರ್ಲಿಯವರು ಬಾಗಲಕೋಟೆ, ಶ್ರೀ ಆದ್ಯ ಅನಂತಾಚಾರ್ಯರು ಬಿಜಾಪುರ ಇವರುಗಳವು ಮುಖ್ಯವಾದವು.

ಇದೆಲ್ಲವೂ ಯಶಸ್ವಿಯಾಗಿ ಮುಗಿದಮೇಲೆ ಇನ್ನು ಈ ಸ್ವಾಗತ ಸಮಿತಿಯ ಆದಾಯ ವೆಚ್ಚಗಳನ್ನು ಪ್ರಕಟಿಸುವುದು ನಮ್ಮ ಮುಖ್ಯ ಜವಾಬ್ದಾರಿಯಾಗಿದೆ.

**ಇದರ ಆಡಳಿತದ ತಃಖ್ತೆಯನ್ನು ಮುಂದೆ ಕೊಡಲಾಗಿದೆ.**

ಈ ಸಮ್ಮೇಳನಗಳ ಮತ್ತು ಪ್ರದರ್ಶನಕ್ಕಾಗಿ ನಾನಾ ಜಮಾ ಬಾಬುಗಳಿಂದ ಬಂದಒಟ್ಟುಮೊಬಲಗು **3162-14-10**ರೂಗಳು. ಇದಕ್ಕಾಗಿಆಗಿರುವಒಟ್ಟು ಖರ್ಚು ಮೊಬಲಗು **3055-9-4** ರೂಗಳು. ಜಾತಾ ಬಾಕಿನಿಲ್ಲುವ ಮೊಬಲಗು **107-5-6** ರೂಗಳನ್ನು ರಿಸೆಪ್ಷನ್ ಕಮಿಟಿಯ ಜನರಲ್ ಬಾಡಿಯ ತೀರ್ಮಾನದಂತೆ ಮೈಸೂರು

ಸಮ್ಮೇಳನದ ಮೂಲ ಸಂಸ್ಥೆಯಾದ ಮೈಸೂರು ವೈದ್ಯ ಸಂಘದ ಕಟ್ಟಡದ ಮೂಲ ನಿಧಿಗಾಗಿ ಈ ಸಮ್ಮೇಳನದ ಹೆಸರಿನಲ್ಲಿ ಕೊಡಲಾಗಿದೆ.

ಪ್ರತಿನಿಧಿ ಶುಲ್ಕದ ¼ ಭಾಗವಾದ 82ರೂ ವನ್ನು ನಿಖಿಲ ಕರ್ಣಾಟಕಾಯುರ್ವೇದ ಮಂಡಲಕ್ಕೆ ಕೊಟ್ಟದ್ದೂ, ಹಾಗೆಯೇ ಮೈಸೂರು ಪ್ರಥಮ ಸಮ್ಮೇಳನಮಾತ್ರದ ಪ್ರತಿನಿಧಿಗಳ ಶುಲ್ಕದ ¼ ಭಾಗವಾದ 12 ರೂ ಗಳನ್ನು ಮೂಲ ಸಂಸ್ಥೆಯಾದ ಮೈಸೂರು ವೈದ್ಯ ಸಂಘಕ್ಕೆ ಕೊಟ್ಟದ್ದೂ ಸಹ ಈ ಸ್ವಾಗತ ಸಮಿತಿಗೆ ಒಂದು ವೈಶಿಷ್ಟ್ಯವೆಂದು ಹೇಳಲು ಅಡ್ಡಿ ಇಲ್ಲ. ಇದುವರಿಗಿನ 11 ಸಮ್ಮೇಳನಗಳಲ್ಲೂ, ಈ ರೀತಿಯಾಗಿ ನಡೆದಂತೆ ಕಾಣದಿದ್ದಾಗ್ಯೂ, ಇದರಲ್ಲಿ ಆದರಂತೆ ನಡೆಸಲು ಸಾಧ್ಯವಾದದ್ದು ಸ್ವಾಗತ ಸಮಿತಿಗೆ ಪೂರ್ಣ ಸಂತೋಷಪ್ರದವಾಗಿದೆ.

ಜಮಾ ಖರ್ಚು ಲೆಕ್ಕಗಳೆಲ್ಲವೂ ಸರ್ಟಿಫೈಡ್ ಆಡಿಟರ್ ಶ್ರೀಮಾನ್ ಎ. ಎಲ್. ನರಸಿಂಹಯ್ಯನವರಿಂದ ತನಿಖೆ ಮಾಡಲ್ಪಟ್ಟು ಒಪ್ಪಲ್ಪಟ್ಟಿದೆ. ಅದಕ್ಕಾಗಿ ಅವರಿಗೆ ಅನೇಕ ವಂದನೆಗಳು. ಅವರು ಒಪ್ಪಿಸಿರುವ ಆಡಿಟ್ ವರದಿಯನ್ನು ಸ್ವಾಗತ ಸಮಿತಿಯ ಜನರಲ್ ಬಾಡೀ ಮೀಟಿಂಗಿನಲ್ಲಿ ಅಂಗೀಕರಿಸಲಾಗಿದೆ.

ಪ್ರತಿನಿಧಿಗಳಿಂದ ತಲಾ 3 ರೂ ಗಳಂತೆಯೂ ಪ್ರೇಕ್ಷಕರಿಂದ ತಲಾ 2 ರೂ ಗಳಂತೆಯೂ ಮೊಬಲಗು ವಸೂಲಾಗಿ ಜಮಾ ಆಗಿರುತ್ತೆ. ಜಮಾ-ಖರ್ಚು-ಶಿಲ್ಕು ವಗೈರೆಗಳನ್ನು ಬಾಬುವಾರಾಗಿ ಕೊಟ್ಟಿರುವ ತಖ್ತೆಯಿಂದ ಎಲ್ಲವೂ ವಿಶದ ಪಡುವದು.

ಜಮಾ ಬಾಬಿನ ಪಟ್ಟಿ, ಪ್ರದರ್ಶಕರ ಪಟ್ಟಿ, ಪ್ರಶಸ್ತಿಗಳನ್ನು ಪಡೆದವರ ಪಟ್ಟಿ, ಮೆಡಲುಗಳನ್ನು ಸ್ವಂತ ತಮ್ಮ ಹಣದಿಂದ ತೆಗೆದುಕೊಂಡವರ ಪಟ್ಟಿ ವಗೈರೆ ವಿವರಗಳನ್ನೆಲ್ಲಾ ಪರಿಶಿಷ್ಟದಲ್ಲಿ ಕೊಟ್ಟಿರುತ್ತೆ.

ಜಮಾಬಾಬಿನ ಪ್ರತಿ ಐಟಂಗೂ ಕ್ರಮವಾದ ಆಫೀಸಿನ ರಶೀತಿಯನ್ನು ಕೊಟ್ಟು ಆ ಬಾಬುಗಳನ್ನು ಜಮಾಕ್ಕೆ ತೆಗೆದುಕೊಂಡಿದೆ. ಮತ್ತು ಮೇಲಿನ ಪಟ್ಟಿಗಳಲ್ಲಿ ಆಯಾಯ ಬಾಬಿನ ಎದುರಿನಲ್ಲಿ ಅದರದರ ರಶೀತಿಯ ಸಂಖ್ಯೆಯನ್ನು ಕೊಟ್ಟಿರುವುದರಿಂದ ಸರ್ವರ ಪರಿಶೀಲನೆಗೂ ಸುಲಭವಾಗಿರುತ್ತೆ.

ಇಷ್ಟಾದರೂ ಪ್ರಮಾದವಶದಿಂದ ಯಾವ ಬಾಬಿನಲ್ಲಿಯಾದರೂ ಏನಾದರೂ ವ್ಯತ್ಯಾಸಗಳು ಉಂಟೆಂದು ಈ ಆಫೀಸಿನ ಗಮನಕ್ಕೆ ತರಲ್ಪಟ್ಟರೆ ಅವನ್ನು ಕೃತಜ್ಞತಾಪೂರ್ವಕ ಅಂಗೀಕರಿಸಿ ತಿದ್ದಿಕೊಳ್ಳಲಾಗುವದು.

ನಮ್ಮ ಆಫೀಸಿನ ರಸೀತಿಯನ್ನು ಪಡೆಯದ ಯಾವ ಹಣಕ್ಕೂ ಸ್ವಾಗತ ಸಮಿತಿಯವರು ಜವಾಬ್ದಾರರಲ್ಲವೆಂದು ಹಿಂದೆಯೇ ಪ್ರಕಟಿಸಿದ್ದುದನ್ನು ಈಗ ಪುನಃ ಸರ್ವರ ಅವಗಾಹನೆಗೂ ತರಲಿಚ್ಛಿಸುತ್ತೇವೆ.

ನಿಖಿಲಕರ್ಣಾಟಕದ ೧೨ ನೆಯ ಮತ್ತು ಮೈಸೂರು ಸಂಸ್ಥಾನದ ೧ ನೆಯ
ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ—೧೯೪೧



ಆಯುರ್ವೇದವಿದ್ವಾನ್, ಭಿಷಕ್ಚೂಡಾಮಣಿ,

ಡಾ॥ ವೈ. ಲಕ್ಷ್ಮೀನರಸಿಂಹಶಾಸ್ತ್ರೀ, L.M.P.,

ರಿ॥ ಸೂಪರಿಂಟೆಂಡೆಂಟ್,

(ಗಾ॥ ಆಯುರ್ವೇದಿಕ್ ಹಾಸ್ಪಿಟಲ್ ಮತ್ತು ಫಾರ್ಮಸಿ, ಮೈಸೂರು.)

ಸ್ವಾಗತಸಮಿತಿಯ ಜನರಲ್ ಸೆಕ್ರೆಟರಿ.

ಪಂ|| ವಾಗೋಜಿರಾವ್-ವನಸ್ಪತಿ ಮೆಡಿಕಲ್ ಡಿಪೋ, ಚಿತ್ರದುರ್ಗ ಎಂಬುವರಿಗೆ ಪ್ರದರ್ಶನ ಸಂಬಂಧದಲ್ಲೂ, ಪಂ|| ಕೆ. ಪಿ. ಶರ್ಮ ಎಂಬುವರಿಗೆ ಪುಸ್ತಕದ ಪ್ರದರ್ಶನಕ್ಕಾಗಿಯೂ, ಪಂ|| ಶ್ರೀಧರಗೋವಿಂದಜೋಷಿ, ರಬಕವಿ ಇವರಿಗೆ ಪ್ರಬಂಧಕ್ಕಾಗಿಯೂ ರಜತಪದಕ ಪ್ರಶಸ್ತಿಗಳು ಬಂದಿದ್ದಾಗ್ಯೂ, ಇವರುಗಳು ನಿಯಮದ ಪ್ರಕಾರ ಸ್ವಾಗತಸದಸ್ಯರಾಗಲಿ, ಪ್ರತಿನಿಧಿಗಳಾಗಲಿ ಆಗಿರದಿದ್ದುದರಿಂದ ಅವುಗಳನು ಕೊಡದೆ ನಿಲ್ಲಿಸಲಾಗಿದೆ (ಸ್ವಾ. ಸ. ಯ ಜನರಲ್ ಬಾಡಿಯ ತೀರ್ಮಾನದಂತೆ). ಸುಖಾನಂದಕರ ವೈದ್ಯಶಾಲಾ, ದಾವಣಗೆರೆ. ಎಂಬುದರ ಸರಿಯಾದ ಮಾಲೀಕರ್ಯಾರೆಂದು ತಿಳಿಯಲಿಲ್ಲವಾಗಿ ಅದನ್ನು ನಿಲ್ಲಿಸಿದೆ. ಮಿಕ್ಕ ಸರ್ಟಿಫಿಕೇಟುಗಳನ್ನೂ ಮೆಡಲುಗಳನ್ನೂ ಅವರವರಿಗೆ ಹಂಚಿ, ಅವರುಗಳಿಂದ ತಕ್ಕ ದಾಖಲೆ ಪಡದಿದೆ.

ನಾವು ಮೊದಲೆ ಪ್ರಕಟಿಸಿದ್ದಪ್ರಕಾರ, ಸ್ವರ್ಣಪದಕಪ್ರಶಸ್ತಿಗಳನ್ನು ಪಡೆದ 40 ಜನರ ಪೈಕಿ 6 ಜನರು ತಲಾ 50 ರೂ. ನಂತೆಯೂ, ರಜತಪದಕ ಪ್ರಶಸ್ತಿಗಳನ್ನು ಪಡೆದ 51 ಜನರ ಪೈಕಿ 22 ಜನರು ತಲಾ 5 ರೂ. ನಂತೆಯೂ, ಸ್ವಾಗತ ಸಮಿತಿಗೆ ಕಳುಹಿಸಿ ತಮ್ಮ ತಮ್ಮ ಸ್ವರ್ಣ ಮತ್ತು ರಜತ ಪದಕಗಳನ್ನು ಸ್ವಾಗತ ಸಮಿತಿಯಿಂದ ಪಡೆದುಕೊಂಡಿರುತ್ತಾರೆ. ಮತ್ತು ಡಾ|| ಎ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳೆಂಬುವರಿಗೆ ಸಮ್ಮೇಳನಾಧ್ಯಕ್ಷರೇ ತಮ್ಮ ಸ್ವಂತದಿಂದ ಸ್ವರ್ಣಪದಕವನ್ನು ಕಳುಹಿಸುವವರಾಗಿದ್ದಾರೆ.

ಕಾರಣಾಂತರದಿಂದ ಕೆಲವು ಸಂದರ್ಭಗಳಲ್ಲಿ ಈ ರಿಪೋರ್ಟಿನಲ್ಲಿ ಕ್ರಮವಾದ ಪುಟ ಸಂಖ್ಯೆ ಸಿಕ್ಕದಿದ್ದಾಗ್ಯೂ ಆಯಾಯಾ ಸಂದರ್ಭಗಳಲ್ಲೇ ಅಲ್ಲಲ್ಲಿಗೆ ಸಂಬಂಧಿಸಿದ ಭಾಷಣಗಳನ್ನು ಸೇರಿಸಿರುವುದರಿಂದ ಪಾಠಕರಿಗೆ ಹೆಚ್ಚು ತೊಂದರೆಯಾಗಲಾರದೆಂದು ಊಹಿಸಬಹುದಾಗಿದೆ.

ಈ ಮಹತ್ಕಾರ್ಯದ ನಿರ್ವಾಹದ ವಿಚಾರದಲ್ಲಿ ನನ್ನಲ್ಲಿ ನಂಬಿಕೆಯಿಟ್ಟು ಮುಖ್ಯಭಾರವನ್ನು ನನ್ನಮೇಲೆ ಹೊರಿಸಿ, ಅದನ್ನು ಯಶಸ್ವಿಯಾಗಿ ಕೊನೆಗಾಣುವಂತೆ ಮಾಡಿದ ನನ್ನ ಹಿರಿಯರಿಗೂ ಮಿತ್ರರಿಗೂ ಮತ್ತೊಮ್ಮೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನರ್ಪಿಸಿ ಈ ವರದಿಯನ್ನು ಮುಗಿಸುತ್ತೇನೆ.

(ಸ್ವಾಗತಸಮಿತಿಯ ಅಪ್ಪಣೆಯಪ್ರಕಾರ)

ಮೈಸೂರು,

ತಾ|| 12—7—1942.

ಇತಿ ತಮ್ಮಗಳ ವಿಶ್ವಾಸಪಾತ್ರ,

ವೈ. ಲಕ್ಷ್ಮೀನರಸಿಂಹಶಾಸ್ತ್ರೀ,

ಜನರಲ್ ಸೆಕ್ರಿಟರಿ.

## ನಿಖಿಲ ಕರ್ಣಾಟಕದ ೧೨ನೆಯ ಮತ್ತು ಮೈಸೂರು

### ಜಮಾಖರ್ಚಿನ ತಖ್ತೆ

**ಒಟ್ಟು ಜಮಾ ಬಾಬುವಾರು—**

| | | | |
|---|---|---|---|
| 1. | ಮೈಸೂರು ಶ್ರೀಮನ್ಮಹಾರಾಜರವರ ಉದಾರ ಸಹಾಯ (ಪರಿಶಿಷ್ಟ 1 ಪು 9) | ರೂ. | 300-0-0 |
| 2. | ಮೈಸೂರು ಸರ್ಕಾರದ ಧನಸಹಾಯ | ,, | 100-0-0 |
| 3. | ಶ್ರೀಮಠಗಳಿಂದ | ,, | 50-0-0 |
| 3. | ಮೈಸೂರು ಸಂಸ್ಥಾನದ ಡಿಸ್ಟ್ರಿಕ್ಟ್ ಬೋರ್ಡುಗಳಿಂದ | ,, | 225-0-0 |
| 4. | ,, ಮ್ಯುನಿಸಿಪಾಲಿಟಿಗಳು | ( ,, ಪು 9-10) | 300-0-0 |
| 5. | ,, ಸಿಟಿ ಕೋಆಪರೇಟಿವ್ ಸೊಸೈಟಿಗಳಿಂದ | ಪು 10 ) | 80-0-0 |
| | | ರೂ. | 1055-0-0 |
| 7. | ,, ವೈದ್ಯರಾದ ಸ್ವಾಗತಸದಸ್ಯರು | ( ,, ಪು 12-15) | 485-0-0 |
| 8. | ,, ವೈದ್ಯಾಭಿಮಾನಿ ಸ್ವಾಗತಸದಸ್ಯರು | ಪು 16-18) | 505-0-0 |
| 9. | ,, ವೈದ್ಯಾಭಿಮಾನಿಗಳು | ( ,, ಪು 19-21) | 100-0-0 |
| | | ರೂ. | 1090-0-0 |
| 10. | ,, ಸ್ವಂತಸ್ಟಾಲುಗಳ ಸಾದಿಲ್ವಾರು | ( ,, ಪು 22-23) | 27- 0- 0 |
| 11. | ,, ಜನರಲ್ ಸ್ಟಾಲ್ ,, | ( ,, ಪು 24-26) | 13- 0- 0 |
| 12. | ,, ಸಾಮಾನು ಬಿಕರಿ | ( ,, ಪು 26 ) | 82- 4- 6 |
| 13. | ,, ಮೆಡಲ್ ಬಾಬ್ತು | ( ,, ಪು 29-30) | 410- 0- 0 |
| 14. | ಪ್ರತಿನಿಧಿಗಳು ( ನಿ. ಕ. ಆ. ಸಂ. ) | ( ,, ಪು 3-6) | 246- 0- 0 |
| 15. | ,, ( ಮೈ. ಸಂ. ಮಾತ್ರ) | ( ,, ಪು 7 ) | 36- 0- 0 |
| 16. | ಪ್ರೇಕ್ಷಕರು | ( ,, ಪು 7-8 ) | 52- 0- 0 |
| 17. | ಸ್ವಂತ ಇಚ್ಛೆಯಿಂದ ಸಹಾಯಮಾಡಿದವರು | ,, ಪು 11 ) | 126- 0- 0 |
| 18. | ,, ಫೋಟೋಗಾಗಿ ಬಂದದ್ದು (ಅಮಾನತ್ ಜಮಾ) | | 10- 8- 0 |
| 19. | ,, ಶ್ರೀಕೃಷ್ಣರಾಜೇಂದ್ರ ಕೋ.ಆ.ಸೊ. ಬಡ್ಡಿ ರ. ನಂ. 305 | | 4- 2- 4 |
| 20. | ,, ಅಡ್ವಾನ್ಸ್ ರ. ನಂ. 301 ಮತ್ತು 304 | | 11- 0- 0 |
| | | ಜುಮ್ಲಾ ರೂ. | 557-14-10 |
| | | ಒಟ್ಟು ಜುಮ್ಲಾ ರೂ. | 3162-14-10 |

ಮೇಲ್ಕಂಡ ಜಮಾಖರ್ಚು ತಖ್ತೆಯನ್ನು ಆಫೀಸ್ ರಶೀತಿ, ಓಚರ್ ಮತ್ತು ಲೆಕ್ಕಪುಸ್ತಕಗಳೊಡನೆ ಚೆಕ್‌ಮಾಡಿರುತ್ತೇನೆ. ಮೇಲ್ಕಂಡ ತಖ್ತೆಯು ಸಮ್ಮೇಳನದ ಲೆಕ್ಕಪುಸ್ತಕಗಳಿಗೆ ಅನುಗುಣವಾಗಿ ಕರಾರು ವಾಕ ಇರುತ್ತೆ ಮತ್ತು ಅಲಾಯಿದಾ ಒಂದು ರಿಪೋರ್ಟುಕೊಟ್ಟಿರುತ್ತೆ.

Mysore, 12—7—1942.

## ಸಂಸ್ಥಾನದ ೧ನೆಯ ಆಯುರ್ವೇದ ಸಮ್ಮೇಳನಗಳ
### ಬಾಬುವಾರು ಖರ್ಚಿನ ವಿವರ

| | | | |
|---|---|---|---|
| ಟಪಾಲು ಖರ್ಚು | ...... | ...... | 170- 6- 0 |
| ಟೆಲಿಗ್ರಾಂ | ...... | ...... | 10- 1- 0 |
| ವಾಹನ ಸೌಕರ್ಯ | ...... | ...... | 74-11- 6 |
| ಸ್ಟೇಷನರಿ | ...... | ...... | 69-14- 0 |
| ಮುದ್ರಣಕ್ಕಾಗಿ | ...... | ...... | 663-15- 6 |
| ವೃತ್ತಪತ್ರಿಕೆಗಳು | ...... | ...... | 9-13- 6 |
| ದೀಪದ ಖರ್ಚು | ...... | ...... | 61- 9- 0 |
| ನೀರಿನ ಖರ್ಚು | ...... | ...... | 25- 4- 0 |
| ಪ್ರಯಾಣದ ಖರ್ಚು | ...... | ...... | 5- 9- 0 |
| ಅಲಂಕಾರ | ...... | ...... | 79-13- 6 |
| ಆಫೀಸು ಬಾಡಿಗೆ | ...... | ...... | 50- 0- 0 |
| ಸಿಬ್ಬಂದಿ ತಲಬು ವಗೈರೆ | ...... | ...... | 126-12- 0 |
| ಭೋಜನದ ವಸತಿ | ...... | ...... | 743- 6- 4 |
| ಫೋಟೋ ಮತ್ತು ಬ್ಲಾಕ್ | ...... | ...... | 248-14- 0 |
| ಮೆಡಲುಗಳು | ...... | ...... | 393- 0- 0 |
| ಇತರೆ ಚಿಲ್ಲರೆ ಬಾಬುಗಳು | ...... | ...... | 87- 8- 0 |
| ಅಡ್ವಾನ್ಸು | ...... | ...... | 11- 0- 0 |
| ನಿ. ಕ. ಆ. ಮಂಡಲಕ್ಕೆ ಕೊಟ್ಟ ಡೆಲಿಗೇಷನ್ ಫೀ | | ...... | 82- 0- 0 |
| ಮೈಸೂರು ವೈದ್ಯಸಂಘಕ್ಕೆ | ...... | ...... | 12- 0- 0 |
| ಆಡಿಟರ ಸಂಭಾವನೆ | ...... | ...... | 30- 0- 0 |
| ಸಿಬಂದಿಗಳಿಗೆ ಬಹುಮಾನ | ...... | ...... | 40- 0- 0 |
| ರಿಪೋರ್ಟುಗಳನ್ನು ಕಳುಹಿಸಲು ಪೋಸ್ಟು ಮತ್ತು ಸಾದಿಲ್ವಾರು ಬಗ್ಗೆ ಇಂಪ್ರೆಸ್ಟ್ (ವೈದ್ಯಸಂಘದ ಸೆಕ್ರೆಟರಿಯವರಲ್ಲಿ) | | ...... | 60- 0- 0 |
| ಮೈಸೂರು ವೈದ್ಯಸಂಘ (Regd)ದ ಕಟ್ಟಡದ ಮೂಲಧನಕ್ಕಾಗಿ (ಒಟ್ಟು ಖರ್ಚುಕಳೆದು ಬಾಕಿನಿಂತ ಮೊಬಲಗು) | | ...... | 107- 5- 6 |
| | | ಒಟ್ಟು ಜುಮ್ಲ ರೂ. | 3162-14-10 |

ಗೋಪಾಲಕೃಷ್ಣಾವಧಾನೀ,
ಆರ್ಥಿಕ ಸೆಕ್ರೆಟರಿ.

12-7-1942.

ವೈ. ಲಕ್ಷ್ಮೀನರಸಿಂಹಶಾಸ್ತ್ರೀ,
ಜನರಲ್ ಸೆಕ್ರೆಟರಿ.

---

ಈ ಆಡಿಟ್ಟಿಗೆ ಅವಕಾಶ ಕಲ್ಪಿಸಿಕೊಟ್ಟ ಸ್ವಾಗತಕಮಿಟಿಯವರಿಗೂ ಆಡಿಟ್‌ಕಾಲದಲ್ಲಿ ಬೇಕಾದ ಸಮಾಧಾನಗಳನ್ನು ಒದಗಿಸಿದ ಜನರಲ್ ಸೆಕ್ರೆಟರಿಯವರಿಗೂ ಆರ್ಥಿಕ ಸೆಕ್ರೆಟರಿ ಶ್ರೀ ಗೋಪಾಲಕೃಷ್ಣಾವಧಾನಿಗಳಿಗೂ ತುಂಬಾ ಕೃತಜ್ಞನಾಗಿರುತ್ತೇನೆ.

(Sd.) **A. L. Narasimhiah**, *Govt. Certified Auditor.*

# ನಿಖಿಲಕರ್ಣಾಟಕದ ೧೨ನೆ & ಮೈಸೂರು ಸಂಸ್ಥಾನದ ೧ನೆ ಆಯುರ್ವೇದ ಸಮ್ಮೇಳನಗಳು ಮತ್ತು ವಸ್ತುಪ್ರದರ್ಶನ, ಮೈಸೂರು

(ತಾ॥ 28, 29 ಮತ್ತು 30ನೆ ಡಿಸೆಂಬರ್, 1941)

---

## ಪರಿಶಿಷ್ಟ I

### ಸಮ್ಮೇಳನ ಮತ್ತು ಪ್ರದರ್ಶನದಲ್ಲಿ ಪ್ರಧಾನಭಾಗಗಳನ್ನು ವಹಿಸುವುದಕ್ಕಾಗಿ ವಿಶೇಷ ಆಹ್ವಾನದಮೇಲೆ ದಯಮಾಡಿಸಿದ್ದ ಮಹನೀಯರು

1 ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡರು ಬಿ.ಎ.ಬಿ.ಎಲ್. ಸ್ಥಳೀಯ ಸಂಸ್ಥೆಗಳ ಮತ್ತು ಆರೋಗ್ಯ ಖಾತೆಯ ಮಂತ್ರಿಗಳು, ಬೆಂಗಳೂರು.
(ಸಮ್ಮೇಳನೋದ್ಘಾಟನಕ್ಕಾಗಿ)

2 ,, ಗಂಗಾಧರ ವಿಷ್ಣುಶಾಸ್ತ್ರೀ ಪುರಾಣೀಕ, ಪ್ರೊಪ್ರೈಟರ್, ಶ್ರೀಧೂತಪಾಪೇಶ್ವರ ಔಷಧಾಲಯ, ಪನವೇಲ.
(ಪ್ರದರ್ಶನೋದ್ಘಾಟನಕ್ಕಾಗಿ)

3 ,, ಬ್ರಹ್ಮಶ್ರೀ ಗುರುಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳು, ಬಳ್ಳಾರಿ. (ನಿ. ಕ. ಆ. ಸಮ್ಮೇಳನಾಧ್ಯಕ್ಷತೆಗಾಗಿ)

† 4 ,, ಭಿಷಗ್ರತ್ನ ಪಾಳ್ಯದ ವೆಂಕಟಾಚಲಪಂಡಿತರವರು, ಪ್ರೊಪ್ರೈಟರ್ ಶ್ರೀ ಸೀತಾರಾಘವ ವೈದ್ಯಶಾಲಾ, ಮೈಸೂರು.
(ಮೈಸೂರು ಸಂಸ್ಥಾನದ ಪ್ರಥಮ ಸಮ್ಮೇಳನಾಧ್ಯಕ್ಷತೆಗಾಗಿ)

† 5 ,, ಆ॥ ವಿದ್ವಾನ್ ಪಂ॥ ಡಿ. ವಿ. ರಾಮರಾಯರು, ಗದಗ.
(ಚಿಕಿತ್ಸಾಸಂಭಾಷಾ ಪರಿಷತ್ತಿನ ಅಧ್ಯಕ್ಷತೆಗಾಗಿ)

† 6 ,, ವೈ. ಪಾರ್ಥನಾರಾಯಣಪಂಡಿತರವರು, ಶಿವಮೊಗ್ಗ.
(ಚಿಕಿತ್ಸಾಸಂಭಾಷಾ ಪರಿಷತ್ತಿನ ಆರಂಭ ಭಾಷಣಕ್ಕಾಗಿ)

† 7 ,, ಆಯುರ್ವೇದ ಭೂಷಣ, ಎಂ. ವಿ. ಶಾಸ್ತ್ರಿಗಳವರು ಮಂಗಳೂರು.
(ದ್ರವ್ಯಸಂಭಾಷಾ ಪರಿಷತ್ತಿನ ಅಧ್ಯಕ್ಷತೆಗಾಗಿ)

† 8 ,, ಪಿ. ಆರ್. ರಂಗನಾಥನಾಯಕರು ಆ|| ವಿ|| ಎಲ್.ಎ.ಎಂ.ಎಸ್.
ರಾಣೆಬೆನ್ನೂರು
(ದ್ರವ್ಯಸಂಭಾಷಾ ಪರಿಷತ್ತಿನ ಆರಂಭ ಭಾಷಣಕ್ಕಾಗಿ)

† 9 ,, ಬಿ. ಆರ್. ಹರಿದಾಸ್, ಪ್ರೊಪ್ರೈಟರ್,
ಶ್ರೀ ಸಮರ್ಥ ಆಯುರ್ವೇದಿಕ್ ಫಾರ್ಮೆಸಿ, ಮಂಗಳೂರು.
(ರಸಾಯನ ಸಂಭಾಷಾ ಪರಿಷತ್ತಿನ ಅಧ್ಯಕ್ಷತೆಗಾಗಿ)

†10 ,, ಎಲ್. ನರಸಿಂಹಮೂರ್ತಿ ಆ|| ವಿ|| ಎಲ್. ಎ. ಎಂ. ಎಸ್.
ತುಮಕೂರು.
(ರಸಾಯನ ಸಂಭಾಷಾ ಪರಿಷತ್ತಿನ ಆರಂಭ ಭಾಷಣಕ್ಕಾಗಿ)

†11 ,, ತತ್ವವಾದಿ ಚಿಕ್ಕಸುಬ್ಬಣ್ಣಾಚಾರ್ಯರು, ನಂದಿ.
(ರಸಾಯನ ಸಂಭಾಷಾ ಪರಿಷತ್ತಿನ ಉಪಭಾಷಣಕ್ಕಾಗಿ)

12 ,, ಆಯುರ್ವೇದ ತೀರ್ಥ ಆದ್ಯ ಅನಂತಾಚಾರ್ಯರು, ಬಿಜಾಪುರ.
(ನಿ. ಕ. ಆ. ಮಂಡಳದ ಮಾಜಿ ಅಧ್ಯಕ್ಷರು)

13 ,, ಎಂ. ವಿ. ಬುರ್ಲಿ ವೈದ್ಯರು, ಬಾಗಲ್‌ಕೋಟೆ.
(ನಿ. ಕ. ಆ. ಮಂಡಳದ ಮಾಜಿ ಉಪಾಧ್ಯಕ್ಷರು)

14 ,, ಎ. ಕೆ. ರಾಯಬಾಗಕರ್ ವೈದ್ಯರು, ಸೆಕ್ರಿಟರಿ,
(ನಿ. ಕ. ಆ. ಮಂಡಲ, ಹುಬ್ಳಿ)

15 ,, ಎ. ಎಸ್. ರಟ್ಟೆಹಳ್ಳಿ ವೈದ್ಯರು. ಆ. ವಿ. ಎಲ್.ಎ.ಎಂ.ಎಸ್.
(ಸಹಾಯ ಸೆಕ್ರಿಟರಿ, ನಿ. ಕ. ಆ. ಮಂ. ಹುಬ್ಳಿ)

*16 ,, ಗುಂಡಾಚಾರ್ ಭೀಮಾಚಾರ್ ಸವಣೂರ್,
ಎಡಿಟರ್, ಆರೋಗ್ಯಮಂದಿರ, ಹುಬ್ಬಳ್ಳಿ.

17 ,, ಜಯದೇವ ಕುಲಕರ್ಣಿ ಬೊಂಬಾಯಿ ಸರ್ಕಾರದ
ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್ನಿನ ಸದಸ್ಯರು,
ಬೆಳಗಾಂ



